ಸಂಪುಟ ೧ — ಸಂಚಿಕೆ ೩

# ಆಕಾಶ ದೀಪ

( ಕಾದಂಬರಿ )

ಲೇಖಕರು:

ಮೊ. ಗೋಪಾಲಕೃಷ್ಣ ಅಡಿಗ ಎಂ. ಎ.

ನವ್ಯ ಸಾಹಿತ್ಯ ಮಾಲೆ

ವಾಣೀವಿಲಾಸ ರಸ್ತೆ : ಮೈಸೂರು.

# ಪ್ರಕಾಶಕರ ಮಾತು.

ಕನ್ನಡದ ಕಾವ್ಯಾರಾಮದ ದುಂಬಿಯಾಗಿದ್ದ, ಚಿರಪರಿಚಿತ ಕವಿ, ಶ್ರೀ ಮೊ. ಗೋಪಾಲಕೃಷ್ಣ ಅಡಿಗರ ಈ ಪ್ರಥಮ ಕಾದಂಬರಿ ಹೊಸದೊಂದು ಪ್ರಯೋಗ. ಇದರಲ್ಲಿ ವಸ್ತುವಿಗಾಗಲಿ, ಘಟನೆಗಳಿಗಾಗಲಿ ಪ್ರಧಾನತೆಯಿಲ್ಲ. ಬಾಲ್ಯದ ಇಳಿವು ಯೌವ್ವನದ ಉಬ್ಬರಗಳ ನಡುವಿನ ಸಂಧಿಕಾಲದ ಹೊಸ್ತಿಲಲ್ಲಿ ನಿಂತ ಯುವಜೀವನದ, ಭಾವದ ಮೊಗ್ಗು ವಿಕಾಸವಾಗುವುದರ ಮನೋವ್ಯಾಪಾರದ ಚಿತ್ರಣ; ಆದರ್ಶವಾದ — ಸಂದೇಹ, ಉತ್ಸಾಹ — ನಿರಾಶೆ, ಸಂಪ್ರದಾಯ ಶ್ರದ್ಧೆ— ಕ್ರಾಂತಿಯ ಕೌತುರ, ಸುಳಿದ ಗಾಳಿಗೆ ಅದು ಬೀಸಿದತ್ತ ಬಳುಕುವ ಬಳ್ಳಿಯಂತೆ ಬೀಗಿ ಬಾಗುವ ಹೃದಯದ ಕುಸುರಿಗೆಲಸದ ಚಿತ್ರ. ಇಂಗ್ಲಿಷಿನಲ್ಲಿ ಜೇಮ್ಸ್ ಜಾಯ್ಸ್ ರವರ 'Portrait of the artist as an young man' ಡೈಲಾನ್ ಥಾಮಸ್‌ರ 'Portrait of the artist as an young dog' ಜೇಮ್ಸ್ ಟಿ. ಫ್ಯಾರೆಲ್ ರವರ 'Young lonigan' ಮೊದಲಾದ ಕಾದಂಬರಿಗಳ ರೀತಿಗೆ ಸೇರಿದ್ದು, ಶ್ರೀ ಅಡಿಗರ 'ಆಕಾಶ ದೀಪ'. ಕನ್ನಡ ಕಾದಂಬರೀ ರಂಗದಲ್ಲಿ ಇಂಥ ಬೇರೊಂದು ಕಾದಂಬರಿ ಇಲ್ಲವೆಂದೇ ಹೇಳಬಹುದು. ನೂತನವಾದ ಈ ಕಾದಂಬರಿ ವಸ್ತುವು ಶ್ರೀ ಅಡಿಗರ ಕವಿಸಹಜ, ಲಯಬದ್ಧ ಶೈಲಿಯಿಂದ ಮತ್ತಷ್ಟು ರಂಜಿಸಿದೆ. ಇಂಥ ಸೊಗಸಾದ ಕಾದಂಬರಿಯನ್ನು ಮಾಲೆಗಾಗಿ ಬರೆದಿತ್ತ ಶ್ರೀ ಅಡಿಗರಿಗೆ ನಮ್ಮ ವಂದನೆಗಳು.

ಮಾಲೆಯ ಎರಡನೆಯ ಸಂಚಿಕೆಯಾದ ಈ ಕಾದಂಬರಿ, ಈಗ ಒಂದೆರಡು ತಿಂಗಳ ಕೆಳಗೇ ಚಂದಾದಾರರ ಕೈ ಸೇರಬೇಕಾಗಿತ್ತು. ಆದರೆ ಹಲವಾರು ಕಾರಣಗಳಿಂದ— ಮುಖ್ಯವಾಗಿ ಆರ್ಥಿಕ ಪರಿಸ್ಥಿತಿಯಿಂದಾಗಿ— ಚಂದಾದಾರರ ತಾಳ್ಮೆಯನ್ನು ಸೋಲಿಸುವಷ್ಟು ತಡವಾಗಿ ಹೊರಬರುತ್ತಿದೆ. ಚಂದಾದಾರರು ಕ್ಷಮಿಸಬೇಕು.

ಈ ಕಾದಂಬರಿಯನ್ನು ಮುದ್ದಾಗಿ ಮುದ್ರಿಸಿದ ವಿಶ್ವ ಮುದ್ರಣಾಲಯದ ಮಾಲೀಕರಿಗೂ, ಪ್ರಕಟನೆಯ ಕಾಲದಲ್ಲಿ ನೆರವಾದ ಮಿತ್ರರಿಗೂ, ನಮ್ಮ ವಂದನೆಗಳು.

೩೧—೭—೫೨. ಪ್ರಕಾಶಕರು,

ಮೈಸೂರು.

# ಬಿನ್ನಹ

ಬಹಳ ದಿನಗಳಿಂದ ಒಂದು ಕಾದಂಬರಿ ಬರೆಯಬೇಕೆಂಬ ಆಶೆ ಇತ್ತು. ಪದ್ಯರೂಪದಲ್ಲಿ ವ್ಯಕ್ತವಾಗುತ್ತಿದ್ದ ನನ್ನ ಭಾವಗಳನ್ನು ಗದ್ಯದಲ್ಲೂ ವ್ಯಕ್ತಪಡಿಸಬೇಕೆಂಬ ಆಶೆ ಕೊನೆಗೂ ನೆರವೇರಿದೆ. ಇದು ನನ್ನ ಮೊದಲ ಕಾದಂಬರಿ, ಆದದ್ದರಿಂದ ಇದನ್ನು ಬರೆಯುವಾಗಲೂ, ಬರೆದಮೇಲೆ ಅಚ್ಚಿಗೆ ಕೊಡುವಾಗಲೂ, ಮನಸ್ಸು ಬಹಳ ಅಳುಕುತ್ತಿತ್ತು. ಈಗ ಇದು ಅಚ್ಚಾಗಿದೆ; ಇದನ್ನು ನಾನು ರಸಿಕರ ಪರಾಮರ್ಶೆಗೆ ಒಪ್ಪಿಸುತ್ತಿದ್ದೇನೆ.

ಗದ್ಯ ರಚನೆಯೂ ಒಂದು ಕಲೆ; ಕಲೆಗಾರಿಕೆಯಿಲ್ಲದ ಗದ್ಯ, ತನ್ನದೇ ಆದ ಲಯವನ್ನೂ, ಗತಿ ವೈವಿಧ್ಯವನ್ನೂ ಹೊಂದದ ಗದ್ಯ ಸಾಹಿತ್ಯವಾಗದು ಎಂದು ನನ್ನ ಭಾವನೆ. ಅಂಥ ಗದ್ಯರಚನೆ ಮಾಡಲು ಈ ಕಾದಂಬರಿಯಲ್ಲಿ ಯತ್ನಿಸಿದ್ದೇನೆ. ಆ ಯತ್ನ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂಬುದನ್ನು ಸಹೃದಯರೇ ನಿರ್ಧರಿಸಬೇಕು.

ಒಂದು ಕಾದಂಬರಿಯನ್ನು ನಾನು ಬರೆಯುತ್ತೇನೆಂದು ಹೇಳಿದಮಾತನ್ನೇ ಪಟ್ಟು ಹಿಡಿದು, ಕಾಡಿ, ದಬಾಯಿಸಿ ಅಂತೂ ಇದನ್ನು ನನ್ನಿಂದ ಬರೆಯಿಸಿದ ಶ್ರೇಯಸ್ಸೆಲ್ಲ ಗೆಳೆಯ ತ. ರಾ. ಸು. ಗೆ ಸೇರುತ್ತದೆ. ಕಾದಂಬರಿಯ ಮೊದಲ ಕೆಲವು ಪುಟಗಳನ್ನು ಓದಿ ಮುಂದುವರಿಸಲು ಉತ್ತೇಜನ ಕೊಟ್ಟ ಗೆಳೆಯರಾದ ಸುಬ್ರಹ್ಮಣ್ಯರಾಜ ಅರಸು ಮತ್ತು ಹೆಚ್. ಎಸ್. ಬಿಳಿಗಿರಿ ಇವರ ಸ್ನೇಹವನ್ನು ಕೃತಜ್ಞತೆಯಿಂದ ನೆನೆಯುತ್ತೇನೆ. ನಾನು ಬರೆದಂತೆಲ್ಲ ಕಾದಂಬರಿಯನ್ನು ಮೊದಲಿನಿಂದ ಕೊನೆಯವರೆಗೂ ಓದಿ ಒಂದೆರಡು ಕಡೆ ಸೂಕ್ತವಾದ ತಿದ್ದುಪಡಿಗಳನ್ನು ಸೂಚಿಸಿದ ನನ್ನ ಚಿ. ಸೌ. ಲಲಿತೆ ಬಹಳ ಉಪಕಾರ ಮಾಡಿದ್ದಾಳೆ. ಆಕೆಯ ಉಪಕೃತಿಯನ್ನೂ ಇಲ್ಲಿ ನೆನೆಯುತ್ತೇನೆ.

ಈ ಕಾದಂಬರಿಯನ್ನು ಇಷ್ಟು ಸೊಗಸಾಗಿ ಮುದ್ರಿಸಿದ ವಿಶ್ವ ಮುದ್ರಣಾಲಯದ ಶ್ರೀ ಕೆ. ಎಸ್. ಸೂರ್ಯನಾರಾಯಣರಾಯರಿಗೂ, ಇದನ್ನು ಪ್ರಕಟಿಸುತ್ತಿರುವ 'ನವ್ಯ ಸಾಹಿತ್ಯ ಮಾಲೆ' ಯ ವ್ಯವಸ್ಥಾಪಕರಿಗೂ ನಾನು ಕೃತಜ್ಞ.

ಎಂ. ಗೋಪಾಲಕೃಷ್ಣ ಅಡಿಗ

೧—೮—೧೯೫೨.
ಕೆನರಾ ಕಾಲೇಜ್.
ಕುಮಟಾ.

# ಆಕಾಶ ದೀಪ

ಅರಬ್ಬಿ ಸಮುದ್ರಕ್ಕೆ ಬಿಡುವಿಲ್ಲ.

ಮಳೆಗಾಲ, ಚಳಿಗಾಲ, ಬೇಸಗೆಕಾಲ, —ಹಗಲು, ಇರುಳು, ಪ್ರತಿ ನಿಮಿಷವೂ, ಅದು ಹುಚ್ಚೆದ್ದು ಕೂಗಿ ರೇಗಿ ಸಾವಿರ ಸಿಂಹಗಳ ಗರ್ಜನೆಯಂತೆ, ಸಹಸ್ರಾರು ಆನೆಗಳು ಘೀಳಿಟ್ಟಂತೆ ಮೊರೆಯುತ್ತದೆ, ಬೊಬ್ಬಿಡುತ್ತದೆ, ಹೂಂಕರಿಸುತ್ತದೆ.

ಆ ಬೊಬ್ಬಾಟಕ್ಕೆ ಕೊನೆಮೊದಲಿಲ್ಲ.

ಯಾವ ದುಃಖ ಬಡಿದಿದೆ ಈ ಕಡಲಿಗೆ ? ಯಾವ ಆಕ್ರೋಶ ? ಯಾವ ನೋವು, ಯಾರ ಚಿತ್ರ ಹಿಂಸೆ ?

ಅಗೋ ಈಗ ವಿಕಟಾಟ್ಟಹಾಸ — ಅಲ್ಲಲ್ಲ, ಚೀತ್ಕಾರ —ಫೂತ್ಕಾರ !

ಕರಾವಳಿಯ ಆಚೆ ಈ ದೈವ ತನ್ನ ಭೂತದೇಹವನ್ನು ನೀಡಿ ಮಲಗಿ ಒಂದೇ ಸವನೆ ತನ್ನ ಲಕ್ಷಲಕ್ಷ ತೋಳುಗಳನ್ನು ಬೀಸಿ ಬೀಸಿ ಬಡಿಯುತ್ತಾ ಮರಳ ರಣಚಂಡೆಯನ್ನು ಬಾರಿಸುತ್ತದೆ. ಕರ್ಕೋಟಕನ ವಿಷದುಸುರಿನಂತೆ ಆ ರುದ್ರನಾದ ಸುತ್ತಮುತ್ತಲ ನೆಲವನ್ನೆಲ್ಲ ವ್ಯಾಪಿಸಿ ಬುಸುಗುಟ್ಟುತ್ತದೆ.

ಅಪಾರ ನೀಲಜಲ ಕಡೆಮ ಕುದಿದು ಊದಿ ಹಿಗ್ಗಿ ಕುಗ್ಗಿ ಗೋಪುರವಾಗಿ ಮೇಲೆದ್ದು ಹೊರಳಿ ಉರುಳಿ ತೆರೆತೆರೆಯಾಗಿ ಉಂಡೆಉಂಡೆಯಾಗಿ ಹರಿದು ಅಲೆಅಲೆಯಾಗಿ ಮೊರೆದು ದಡಕ್ಕೆ ಬಡಿದು ಹೆಂಡದ ನೊರೆಯಂತೆ ಮರಳ ಮೇಲೆ ಹಾಯ್ದು ಹಿಂದೋಡುತ್ತದೆ.

ಈ ರುದ್ರನಾದದ ಯಮಪಾಶಕ್ಕೆ ತೆಂಗು ತಲೆಬಾಗಿ ನಿಂತು ನಿರಂತರವೂ ತೂಯ್ಯುತ್ತಾ ಸರ್ಪದೃಷ್ಟಿಗೆ ಮುಗ್ಧವಾದ ಹಕ್ಕಿಯಂತೆ ಗರಿಗೆದರಿ ನಿಲ್ಲುತ್ತದೆ. ಭತ್ತದ ಸಸಿ ಸಾಷ್ಟಾಂಗ ಬಾಗಿ ಶರಣಾಗುತ್ತದೆ. ಹಲಸು, ಮಾವು, ಧೂಪ-ವೃಕ್ಷ ಜಾತಿಯೆಲ್ಲ ಅವ್ಯಕ್ತ ಭೀತಿಯಿಂದ ಕಂಪಿಸುತ್ತವೆ.

ಕರಾವಳಿಯ ಜೀವನವೆಲ್ಲ ಈ ಸಮುದ್ರಘೋಷದ ತಾಳಲಯಕ್ಕೆ ಅನುಸಾರವಾಗಿ ರೂಪುಗೊಳ್ಳುತ್ತದೆ. ಹೊಳೆಕೆರೆ ಹಳ್ಳಗಳೆಲ್ಲ ಈ ಛಂದಸ್ಸಿಗೆ ಹೊಂದಿ ಹರಿಯುತ್ತವೆ. ದೇವಾಲಯದ ಘಂಟಾನಾದ ಈ ಸಮುದ್ರನಾದಕ್ಕೆ ದನಿಗೂಡಿಸಲು ಹೆಣಗಿ ಸೋಲುತ್ತದೆ. ಮೇಲೆ ಕವಿದಿರುವ ಆಕಾಶದಂತೆ, ಸುತ್ತ ಹಬ್ಬಿರುವ ವಾಯುಮಂಡಲದಂತೆ, ನಿಂತ ನೆಲದಂತೆ, ಎತ್ತ ಹೋದರೂ ಅತ್ತ ಬರುವ ಮೈನೆರಳಿನಂತೆ ಈ ಮೊರೆತ ಜನ ಜೀವನವನ್ನು ಮುತ್ತಿ ಮೆಟ್ಟಿ ನಿಲ್ಲುತ್ತದೆ. ಹುಟ್ಟು ಸಾವು, ಮೋದ ವಿಷಾದ, ಪ್ರೀತಿ ವಿರಹ, ಹಬ್ಬ ಹರಿದಿನ, ಮದುವೆ ಶೋಭನ,— ಎಲ್ಲವೂ ಈ ಹೃದಯದ್ರಾವಕ ಗೀತದ ಹಿನ್ನೆಲೆಯಲ್ಲಿ ನಡೆಯುತ್ತವೆ. ಮನಸ್ಸಿನ ಎಲ್ಲ ಭಾವಾಂತರಗಳ ಹಿಂದೆ ಅದು ಸ್ಥಾಯಿಭಾವವಾಗಿ ನಿಲ್ಲುತ್ತದೆ. ಗದ್ದೆಯಲ್ಲಿ ಉಳುವ ಸೋಮನ ' ಹೈ ಹೈ ಹೈ ' ಯ ಹಿಂದೆ ಈ ಕಡಲ ಕೂಗು ಅಡಗಿ ನಿಂತಿದೆ. ದೇವಸ್ಥಾನದಲ್ಲಿ ಪುರುಷಸೂಕ್ತ ಹೇಳುತ್ತಿರುವ ಭಟ್ಟನ ಮಂತ್ರ ಆ ಬೊಬ್ಬಾಟದ ಅಬ್ಬಿಯಲ್ಲಿ ಒಂದು ಹನಿಯಾಗಿ ಸಿಡಿಯುತ್ತದೆ. ಮಗುವಿನ ಕೇಕೆ, ಹಸುವಿನ ಅಂಬಾ, ತಿಮ್ಮನ 'ಪ್ರಸಂಗ',— ಈ ಎಲ್ಲವೂ ಈ ಮಾರಿಬೊಬ್ಬೆಯ ನೆರಳಿನಲ್ಲಿ ಅರಳಿ ಬಾಡಿ ಬೀಳುತ್ತವೆ.

" ಈ ನೆಲಕ್ಕೆಲ್ಲ ನಾನೇ ಪ್ರಭು; ಇಲ್ಲಿ ನಡೆಯತಕ್ಕದ್ದು ನನ್ನ ಶಾಸನ, ನನ್ನ ದಂಡ — " ಎಂದು ಕಡಲು ಸಾರಿಸಾರಿ ಹೇಳುತ್ತದೆ. ತಮಗೆ ತಿಳಿಯದಂತೆಯೇ ಜನ ಆ ಚಂಡಶಾಸಕನ ಆಜ್ಞಾಧಾರಿಗಳಾಗುತ್ತಾರೆ, ಬಾಗುತ್ತಾರೆ, ಮಣಿಯುತ್ತಾರೆ; ಬಾಗುವುದನ್ನೇ ಮಣಿಯುವುದನ್ನೇ ಕಲಿಯುತ್ತಾರೆ. ದೇವರಿಗೆ ತಲೆ ಬಾಗುತ್ತಾರೆ, ಪೋಲೀಸರೆಂದರೆ ಕರಗಿ ನೀರಾಗುತ್ತಾರೆ. ಒಂದು ಕೆಂಪು ಟೋಪಿ ಸಾಕು ಊರಿಗೆ ಊರನ್ನೇ ನಡುಗಿಸಲು. ಒಡೆಯನಿಗೆ ಬಾಗಿ ತಲೆಯನ್ನು ಮಣ್ಣಿಗೆ ಮುಟ್ಟಿಸುತ್ತಾರೆ. ಉತ್ತಮ ಕುಲದವರಿಗೆ ತಗ್ಗಿ ನಡೆಯುತ್ತಾರೆ. ಪಟೇಲ ಶ್ಯಾನುಭೋಗರಿಗೆ ಆತ್ಮ ಗೌರವವನ್ನೇ ಮಾರುತ್ತಾರೆ. ಊರ ಜಟ್ಟಿಗನಿಗೆ, ದೈವಕ್ಕೆ, ಸತ್ತವರ ಕೊಲೆ - ಪ್ರೇತಗಳಿಗೆ ಅಂಜಿ ಕೋಳಿಗಳನ್ನು ಬಲಿಕೊಡುತ್ತಾರೆ. ದೈವದ "ಪಾತ್ರಿ"ಯ ನುಡಿಕಟ್ಟಿಗೆ ನಡುಕಟ್ಟುತ್ತಾರೆ. ಹೊಟ್ಟೆನೋವಾದರೆ, ಜ್ವರ ಬಾರಿಸಿದರೆ ಊರ ಜೋಯಿಸರಿಂದ ವಿಭೂತಿ ತರುತ್ತಾರೆ, 'ಯಂತ್ರ' ಕಟ್ಟಿಸಿಕೊಳ್ಳುತ್ತಾರೆ; ಕಾಲಿಗೆ ಮುಳ್ಳು

ಚುಚ್ಚಿ ಕೀವಾದರೆ ಪ್ರೇತಪೂಜೆಮಾಡಿ "ಎಡೆ" ಕೊಡುತ್ತಾರೆ, ದೈವಕ್ಕೆ ಪೂಜೆ ಮಾಡಿಸುತ್ತಾರೆ, ಪಂಜುರ್ಲಿಗೆ ಕೋಳಿ ಒಪ್ಪಿಸುತ್ತಾರೆ.

ಪರಶುರಾಮ ಕ್ಷೇತ್ರ !

ಬೆಳಗಿನ ಝಾವದಿಂದ ಮಬ್ಬಾಗುವ ವರೆಗೆ ಬೆವರು ಸುರಿದರೂ ಹೊಟ್ಟೆಯ ಉರಿ ಆರುವುದಿಲ್ಲ. ನಿಷ್ಠುರನೆಲದ ದಾಹ ಆರಬೇಕಾದರೆ ಒಂದು ತಿಂಗಳ ಕಾಲ ಕೊಪ್ಪರಿಗೆ ಕೊಪ್ಪರಿಗೆ ಮಳೆ ಸುರಿಯಬೇಕು. ಮೂರು ಸಲ ಉತ್ತು, ಮೂರು ಮೈಲಿ ದೂರದಿಂದ ಸೊಪ್ಪು ಸದೆ ತಂದು ಗೊಬ್ಬರ ಮಾಡಿ, ಗಾಡಿಗಾಡಿ ಹಾಕಿದರೂ ನೆಲ ಒಲಿಯುವುದಿಲ್ಲ. ಹಿಂಡಿ ಒಂದು ಖಂಡಿ ಹಾಕಿದರೂ ಹಸು ಎರಡು ಪಾವಿಗಿಂತ ಹೆಚ್ಚು ಹಾಲುಕೊಡಲು ಒಪ್ಪುವುದಿಲ್ಲ.

ಆ ಬಡತನಕ್ಕೆ ಉಪಮೆಯಿಲ್ಲ.

ನೀರೊಂದಕ್ಕೆ ಕೊರತೆಯಿಲ್ಲ; ನೆಲ ಗೀರಿದರೆ ಊಟೆ ಚಿಮ್ಮುತ್ತದೆ. ಜನದ ಆಹಾರವೂ ಅದೇ. ಅದಕ್ಕೆ ಕೊಂಚ ಅಕ್ಕಿ ಸೇರಬಹುದು; ಅದರಲ್ಲಿ ಅಷ್ಟು ರಾಗಿ ಬೆರೆಯ ಬಹುದು. ಆದರೆ ಮುಖ್ಯವಾದ ಆಹಾರ, ಪೇಯ ಅದೇ— ಆ ನೀರು. ಆ 'ನಾಗಿ" ಯ ತಲೆ ನೋಡಿ— ಸಿಕ್ಕು ಸಿಕ್ಕಾಗಿ, ರಾಶಿಹಾಕಿದ ತೆಂಗಿನ ನಾರಿನಂತೆ ಜಡೆಗಟ್ಟಿದ ಆ ತಲೆಕೂದಲ ಗೋಪುರ? ಅದು ಎಣ್ಣೆ ಕಂಡು ಎಷ್ಟು ವರ್ಷ ? ಆ "ಸುಬ್ಬನ" ಮುಖ ನೋಡಿ! ಹೂತ ಕಣ್ಣು , ಬಿಳಿಚಿದ ಮುಖ, ಮೂಳೆ ಮೈ ! ಹಾರೆ ಹಿಡಿದು ಗುದ್ದಲಿ ಹಿಡಿದು ಅವನು ಗೇಯುವುದನ್ನು ಕಂಡರೇ ಆಶ್ಚರ್ಯವಾಗುತ್ತದೆ........

ಹಾಲು, ಮೊಸರು, ತುಪ್ಪ, ಬೇಳೆ, ಬೆಲ್ಲ ? ಆಹಾ, ಅದೆಲ್ಲಾ ದೊರೆಯು ವುದಕ್ಕೆ ಇವರೇನು ಅರಸು ಮಕ್ಕಳೇ ?

ಈ ನೆಲ ನಿಷ್ಠುರವಾದದ್ದು, ಅದು ಸಮುದ್ರದ ಗುಲಾಮ. ದುಡಿಸಿ ಕೊಂಡು ಮಣ್ಣು ತಿನ್ನಿಸುತ್ತದೆ, ಮಣ್ಣಿನ ಮಕ್ಕಳಿಗೆ ಮಣ್ಣೇ ಆಹಾರ- ಆಹಾ ಅದೇ ನ್ಯಾಯ !

ಅರಬ್ಬಿ ಸಮುದ್ರಕ್ಕೆ ಎರಡೇ ಎರಡು ಮೈಲಿ ದೂರ ಪೂರ್ವಕ್ಕೆ ಮುದುರಿ ನಿಂತ ಹಳ್ಳಿ ಹೊಸಕೋಟೆಯ ಊರದೇಗುಲದಾಚೆ ದಿಣ್ಣೆಯ ಮೇಲೆ ಕುಳಿತು ಪಡುವಲ ಆಕಾಶದಲ್ಲಿ ಮುಳುಗುವ ಸೂರ್ಯ ತನ್ನ ಬಣ್ಣದಾಟದಲ್ಲಿ ಹುಗ್ಗ

ನಾಗಿದ್ದುದನ್ನು ನೋಡುತ್ತ ಕುಳಿತಿದ್ದ ಮಾಧವನ ಮನಸ್ಸಿನಲ್ಲಿ ಇಂಥ ಯೋಚನೆಗಳು ಹಾಳುದೇವಾಲಯದಲ್ಲಿ ಊಳುವ ಗಾಳಿಯಂತೆ ಮುಸುಗುಟ್ಟು ತ್ತಿದ್ದುವು. ಇಂಥ ಭಾವನೆಗಳು ತೀರ ಹೊಸವು ಅವನಿಗೆ. ಹದಿನೇಳು ವರ್ಷಗಳ ಅವನ ಆ ದೀರ್ಘಜೀವನದಲ್ಲಿ ಇದೇ ಮೊದಲು ಅವನಿಗೆ ಈ ಬಗೆಯ ವಿಚಿತ್ರ ಅನುಭವ. ಅತ್ತ ಹೊತ್ತು ನಿಧಾನವಾಗಿ ಮುಳುಗಿ ಹೋಗು ತ್ತಿತ್ತು. ಬಣ್ಣ ಬಣ್ಣದ ಮುಗಿಲುಗಳು ನರೆಬಣ್ಣದಲ್ಲಿ ಕರಗುತ್ತಿದ್ದುವು. ದೂರದಲ್ಲಿ ಹಕ್ಕಿಗಳ ಚಿಲಿಪಿಲಿ. ಕ್ಷಣಾರ್ಧದಲ್ಲೇ ಹಠಾತ್ತಾಗಿ ಜಗತ್ತನ್ನೆಲ್ಲ ಮೌನ ತನ್ನ ತೆಕ್ಕೆಯಲ್ಲಿ ಬಿಗಿಯಿತು. ಏದುಸುರಿನಂತೆ ಗಾಳಿ ತಡೆದುತಡೆದು ಬೀಸಿತು. ಕತ್ತಲಿನ ಮುಂಚೂಣಿ ನುಗ್ಗಿಬಂದು ಮರಗಿಡ ಪೊದೆಪೊದೆಗಳಲ್ಲಿ ಡೇರೆ ಕಟ್ಟಿತು. ಆಕಾಶದ ಕಿಟಕಿಗಳನ್ನು ತೆರೆದು ನಕ್ಷತ್ರ ಕನ್ಯೆಯರು ಇಣಿಕಿ ನೋಡ ತೊಡಗಿದರು. ಹಾವು ಕಚ್ಚಿದ ದೇಹದಂತೆ ಕ್ಷಣ ಕ್ಷಣಕ್ಕೆ ನೆಲ ಕಪ್ಪೇರುತ್ತಿತ್ತು. ಕತ್ತಲಾಯಿತು. ದಿಣ್ಣೆಯ ಸುತ್ತಲಿದ್ದ ಮರಗಳ ಗುಂಪು ಗಳಲ್ಲಿ ಕತ್ತಲೆ ಕೆನೆಗಟ್ಟಿತು. ಸಮುದ್ರದಲ್ಲಿ ಇಂಗು ಕರಗುವಂತೆ ತಾರೆಗಳ ಬೆಳಕು ಕರಗಿ ಹೋಗುತ್ತಿತ್ತು. ಗಿಡದಿಂದ ಗಿಡಕ್ಕೆ ಚಿಗಿಯುವ ಮಿಂಚುಹುಳು ಗಳು ಚೆಲ್ಲುತ್ತಿದ್ದ ಬೆಳಕಿನ ಹನಿ ಬಿದ್ದ ಕಡೆಯೇ ಆರಿ ಹೋಗುತ್ತಿತ್ತು. ಕತ್ತಲಿನ ಇಂಥ ಪಾಳೆಯದಲ್ಲೂ ಬೆಳಕಿನ ಮರಿಗಳು ಗರಿ ಬಡಿಯುತ್ತವಲ್ಲ —ಆಶ್ಚರ್ಯ

ಆಶ್ಚರ್ಯ ಎಂದು ಮಾಧವ ಮೇಲೆ ಮುಖವೆತ್ತಿದಾಗ ಸ್ವಲ್ಪ ದೂರದಲ್ಲೇ ಒಂದು ದೊಡ್ಡ ದೀಪ ಆಕಾಶದ ಕಡೆ ಏರುವುದು ಕಂಡಿತು. ಯಾರೋ ನಾಲ್ಕೈದು ಜನ ಉತ್ಸಾಹದಿಂದ ಮಾತನಾಡುವ ಧ್ವನಿ ಅಸ್ಫುಟವಾಗಿ ಗಾಳಿ ಯಲ್ಲಿ ತೇಲಿ ಬಂದಿತು. ಇದೇನು ದೀಪ? ಶಂಕರಭಟ್ಟರ ಮನೆಯ ಹತ್ತಿರವಲ್ಲವೇ ಅದು ಕಾಣಿಸುತ್ತಿರುವುದು ! ಹೌದು, ಹೌದು. ಈಗ ಶರತ್ಕಾಲ—ದೀಪಾ ವಳಿ ಹತ್ತಿರವಾಗುತ್ತದೆ. ಶಂಕರಭಟ್ಟರ ಮಕ್ಕಳು ಸುಬ್ರಹ್ಮಣ್ಯ ಪರಮೇಶ್ವರರ ಕೆಲಸವೇ ಇದು. ಕಾಗದದಲ್ಲಿ ಗೋಳಾಕಾರದ ದೀಪಮಾಡಿ, ಅದಕ್ಕೆ ಬಾಲಂ ಗೋಚಿ ಕಟ್ಟಿ ಒಳಗೆ ಹಣತೆಯಿಟ್ಟು ತಮ್ಮ ಮನೆಮುಂದಿನ ದೊಡ್ಡ ಮಾವಿನ ಮರದ ಕೊಂಬೆಗೆ ಕಟ್ಟುತ್ತಿದ್ದಾರೆ !

ಆಕಾಶ ದೀಪ !

ದೀಪ ಬೆಳಗುತ್ತಿದೆ. ಕತ್ತಲು ಕಳೆಯುತ್ತಿದೆಯೆ ? ತಾರೆ ಮಿನುಗು

ವಂತೆ, ಮಿಂಚುಹುಳು ಬೆಳಕನ್ನು ಮಿಟುಕಿಸುವಂತೆ ಈ ಆಕಾಶ ದೀಪ ಮರದ ತುದಿಯನ್ನೇರಿ ಸುತ್ತಲ ಕತ್ತಲಿನ ಸಮುದ್ರದಲ್ಲಿ ದಾರಿದೀಪವಾಗಿ ನಿಂತಿದೆ.

ಕತ್ತಲೂ ಕಳೆದೀತು, ಬೆಳಕೂ ಬಂದೀತು ಎಂಬುದರ ಸಂಕೇತವಿದು.

ನಮ್ಮ ಜೀವನವೂ ಹಾಗೆಯೇ. ಮನುಷ್ಯಲೋಕವನ್ನು ಮುಸುಕಿದ ಕತ್ತಲು ಇನ್ನೂ ತೊಲಗಿಲ್ಲ. ಬೆಳಕು ಹರಿದಿಲ್ಲ. ಅಲ್ಲೊಂದು ಇಲ್ಲೊಂದು ಆಕಾಶದೀಪ ಹಚ್ಚಿ ಬೆಳಕಿಗಾಗಿ ಕಾಯುತ್ತಾರಲ್ಲ ಜನ — ಬುದ್ಧನಂಥವರು, ಕ್ರಿಸ್ತನಂಥವರು, ಗಾಂಧಿಯಂಥವರು !

ತನ್ನ ಜೀವನವೂ ಅಂಥದೊಂದು ದೀಪವಾಗಬೇಕು — ಎಂದು ಮಾಧವನ ಮನಸ್ಸು ಗರಿಗೆದರಿತು. ತರುಣ ಮಾಧವನ ಆಶೆಗಳೆಲ್ಲವೂ ಹಾಗೆ ಮೇಲ್ಮೊಗದವು.. ವಿವೇಕಾನಂದರು ಏನು ಸಾರಿದರು ? ಪರಮಹಂಸರ ವಾಣಿ ಏನು ಘೋಷಿಸಿತು –– ಗಾಂಧಿ ಹೇಳುವುದಾದರೂ ಏನು ? ಮನುಷ್ಯನ ಮನಸ್ಸು ಆಕಾಶದೀಪವಾಗಿ ಅರಳಬೇಕು — ತನಗಾಗಿ, ಆದುದರಿಂದಲೇ ಪರರಿಗಾಗಿ.

ಈಗ ಆರು ತಿಂಗಳಿನಿಂದ ಎಂಥ ಕಠೋರ ವ್ರತ ಹಿಡಿದಿದ್ದಾನೆ ಹುಡುಗ? ಬೆಳಗ್ಗೆ ಐದು ಗಂಟೆಗೆ ಏಳಲೇ ಬೇಕು. ಎದ್ದ ಕೂಡಲೇ ಬಾವಿಯಿಂದ ನೀರು ಸೇದಿ ತಲೆಯ ಮೇಲೆ ಸುರಿದುಕೊಳ್ಳಲೇ ಬೇಕು. ಆ ಮೇಲೆ ಸಂಧ್ಯಾವಂದನ, ಧ್ಯಾನ, ಸೂರ್ಯನಮಸ್ಕಾರ, ಸದ್ಗ್ರಂಥಪಠನ. ಆ ಪುಸ್ತಕ — " ಬ್ರಹ್ಮಚರ್ಯವೇ ಜೀವನ "––ಸಿಕ್ಕಿದಂದಿನಿಂದ ಅದೇ ವ್ರತ, ನಿಯಮ,. ಕೂಡದು, ಕೂಡದು, ಖಂಡಿತವಾಗಿ ಕೂಡದು –– ತನ್ನ ಜೀವನವೂ ಇತರ ಸಾಮಾನ್ಯರ ಜೀವನದಂತೆ ನಿಷ್ಫಲವಾಗಿ ಕೊನೆಗಾಣಬಾರದು, ಎಂಥೆಂಥ ಕನಸುಗಳು ಅವನ ಮನಸ್ಸಿನಲ್ಲಿ !

ತಾನು ವಿವೇಕಾನಂದನಂಥ ಸಂನ್ಯಾಸಿಯಾಗುತ್ತಾನೆ. ಕಾಷಾಯವಸನ, ತೇಜಸ್ಸು ಉಕ್ಕುವ ಕಣ್ಣು. ಸ್ವರ್ಗ ನುಡಿಸುವ ಮಾತು. ಕೇಳಿದವರೆಲ್ಲ ಪರವಶರಾಗಿ ನಿಲ್ಲುತ್ತಾರೆ. ಊರಿಂದ ಊರಿಗೆ ಪರಿವ್ರಾಜಕನಾಗಿ ಸುತ್ತುತ್ತಿದ್ದರೆ ಊರಿಗೆ ಊರೇ ಒಂದೊಂದಾಗಿ ಮೈ ಕೊಡವಿ ಎದ್ದು ನಿಂತು ಉತ್ತಮ ಜೀವನಕ್ಕೆ ಕಂಕಣಕಟ್ಟುತ್ತದೆ. ತನಗೆ ಏನೂ ಬೇಡ, ಯಾವುದೂ ಬೇಡ. ಲೋಕಕಲ್ಯಾಣವೊಂದೇ, ಆತ್ಮೋದ್ಧಾರವೊಂದೇ ! ಆಹಾ ಈ ಕನಸು, ಈ

ಆದರ್ಶ ಪರವಶತೆ ಎಷ್ಟು ಚೆನ್ನ. ಊಹೆ — ಕಲ್ಪನೆ — ಹಗಲುಗನಸು— ಹೀಗೆಯೇ ಬೆಳೆದುಬಂದಿದ್ದ ಹುಡುಗ. ಹೊರಗಡೆಗೆ ಓಡಾಡಿ ಬಹಳ ಬೇಗ ಸೋಲುವ ಕಣ್ಣು ಒಳಗಡೆಯಲ್ಲಿ ಮುಳುಗುತ್ತಿತ್ತು. ಸುತ್ತ ಕತ್ತಲ ನಡುವೆ ಅವನು ಈಗ ಹೇಗೆ ಕುಳಿತಿದ್ದಾನೋ ಹಾಗೆಯೇ ಅವನ ಯೋಚನೆ ಭಾವನೆಗಳು ಹೊರಜಗತ್ತನ್ನು ಮರೆತು ತನ್ನ ಅಂತರಂಗದ ಗುಹೆಯಲ್ಲಿ ಕುಳಿತು ಅಲ್ಲಿ ಗಂಧರ್ವಲೋಕದ ಸಪ್ತಸ್ವರಗಳಲ್ಲಿ ತೂಗುಯ್ಯಾಲೆ ಆಡುವುದು; ಆಶೆಯ ಅರಬ್ಬಿ ತಾಕಣದ ಮೇಲೆ ಕುಳಿತು ದೇಶ ದೇಶ ಸುತ್ತುವುದು; ಏಳು ಸಮುದ್ರ ದಾಟಿ ಕೀಳು ಸಮುದ್ರದ ನಡುವೆ ಆ ರತ್ನದ್ವೀಪದಲ್ಲಿ ಈ ಏಕಾಂಗವೀರನ ಸುತ್ತ ಸಾವಿರಾರು ಕಾಮನಬಿಲ್ಲುಗಳ ನಡುವೆ ನಕ್ಷತ್ರಕುಸುಮಗಳು ಅರಳುವುವು. ಕಲನಾದಿನಿ ನದಿ ತನ್ನ ಅಂತರಂಗವನ್ನು ತೆರೆದು ತೋರುತ್ತ ಸೋಪಾನರೂಪವಾಗಿ ಉರುಳಿ ಹೋಗುವುದು. ಅಲ್ಲಿ ಯಾರ ಬಾಧೆಯೂ ಇಲ್ಲ. ಅಲ್ಲಿ ಬಯಕೆಯೆಂದರೂ ಒಂದೇ, ಗಳಿಕೆಯೆಂದರೂ ಒಂದೇ. ಒಂದೇ ನಾಣ್ಯದ ಎರಡು ಮುಖ. ಅಲ್ಲಿ ಏನು ಬೇಕಾದರೆ ಆಗಬಹುದು. ಗರುಡನಾಗಿ ಗರಿಗೆದರಿ ಮೋಡದ ಮೇಲೆ ಅಷ್ಟು ಹೊತ್ತು ಸಲೀಸಾಗಿ ಈಜಾಡಬಹುದು. ಹಂಸವಾಗಿ ಬೆಳ್ಳಿ ನೀರಿನ ಮೇಲೆ ತೇರಿನಂತೆ ತೇಲ ಬಹುದು. ಹುಲಿಯಾಗಿ ಗರ್ಜಿಸಬಹುದು. ಹಸುವಾಗಿ ಅಂಬಾ ಎನ್ನ ಬಹುದು. ಗುಬ್ಬಚ್ಚಿಯಾಗಿ ಪುರ್ರನೆ ಹಾರಿ ಸರ್ರನೆ ಕೈಮಾರಿ ಚಿಮ್ಮ ಬಹುದು. ಅಲ್ಲಿ ಮನುಷ್ಯ ಇಚ್ಛಾರೂಪಿ, ಕಾಮರೂಪಿ. ಈ ಇಂಥ ಸರ್ವಾರ್ಥದಾಯಕವಾದ ಲೋಕದಲ್ಲಿ ಹೊಕ್ಕ ಮಾಧವ ಅದನ್ನು ಬಿಟ್ಟು ಬರಲಾರ ಆ ಜಗತ್ತಿನಲ್ಲಿ ಅಷ್ಟು ತಜ್ಞನಾದ ಇವನು ಹೊರ ಜಗತ್ತಿನಲ್ಲಿ ಅಪರಿಚಿತನಂತೆ ವರ್ತಿಸುತ್ತಾನೆ. ಮನಸ್ಸಿನ ಮಾತು ಬಾಯಿಯಲ್ಲಿ ಬರದು; ಬಾಯಲ್ಲಿ ಮಾತು ಹೊರಡುವ ಮೊದಲೇ ಕಣ್ಣಿನಲ್ಲಿ ಅದು ತುಳುಕುತ್ತದೆ. ಚಿಪ್ಪನ್ನು ಬಿಟ್ಟು ಹೊರಕ್ಕೆ ಇಣಿಕಿ ನೋಡಿದ ಆಮೆ ಹೊರಗಿನ ಬೆಳಕಿಗೆ ಅಂಜಿ ಮತ್ತೆ ತನ್ನ ತಲೆಯನ್ನು ಒಳಗೆಳೆದುಕೊಳ್ಳುವಂತೆ ಮಾಧವನ ಮನಸ್ಸು ಅಂತರ್ಮುಖಿಯಾಗುವುದು.

ಈ ಜಗತ್ತಿನಲ್ಲಿ ಅವನ ಭಾವನೆಗಾಗಲಿ ಯೋಚನೆಗಾಗಲಿ ಯಾರೂ ಯಾವ ಬೆಲೆಯನ್ನೂ ಕಟ್ಟುವಂತೆ ಕಾಣಲಿಲ್ಲ. ತನಗೆ ಹದಿನೇಳುವರ್ಷವಾಗಿದೆ, ತನ್ನ ಮನಸ್ಸು ಕೆಲಸ ಮಾಡುತ್ತಿದೆ; ಸುಖದುಃಖಗಳ ಗಾಣದಲ್ಲಿ ಸಿಕ್ಕಿ ಅದು

ಜರ್ಝರಿತವಾಗಿದೆ; ಅನುಭವ ಒಂದಾದರ ಮೇಲೊಂದರಂತೆ ಮನಸ್ಸಿನಲ್ಲಿ ದಟ್ಟಯಿಸುತ್ತಿದೆ. ಆದರೆ ಮಾಧವ ವಯಸ್ಕ ಎಂದು ಯಾರೂ ಭಾವಿಸುವುದಿಲ್ಲ. ತಾನು ಹುಡುಗನಲ್ಲ ಎಂದು ರುಜುವಾತು ಪಡಿಸುವುದು ಹೇಗೆ? ಈ ದೊಡ್ಡವರ ಜಗತ್ತಿನಲ್ಲಿ ತನಗೂ ಸರಿಸಮಾನಸ್ಥಾನ ದೊರೆಯುವುದು ಹೇಗೆ ಎಂಬ ಚಿಂತೆ ಮಾಧವನ ಮನಸ್ಸನ್ನು ನಿರಂತರವಾಗಿ ಕಾಡುತ್ತಿತ್ತು. ಆ ದಿನವೇ ನಡೆದಿದ್ದ ಒಂದು ಸಂಗತಿ ಅವನಿಗೆ ನೆನಪಿಗೆ ಬಂದು ಅವನ ಮನಸ್ಸು ಇನ್ನಷ್ಟು ಹತಾಶ ವಾಯಿತು.

ಆ ದಿನ ಬೆಳಿಗ್ಗೆ ಮಾಧವನ ಮನೆಗೆ ಅಕ್ಕ ಪಕ್ಕದ ದೊಡ್ಡವರು ಕೆಲವರು ಬಂದಿದ್ದರು. ಕೆಳಮನೆಯ ತಿಮ್ಮಪ್ಪಯ್ಯನವರು, ಪಡುಮನೆಯ ರಂಗಭಟ್ಟರು ಉಪ್ಪುಂದದ ಅನಂತ ಪ್ರಭುಗಳು. ಮಾಧವನ ತಂದೆ ವಾಸುದೇವಯ್ಯನವರು ಎಲ್ಲರಿಗೂ ಎಲೆ ಅಡಿಕೆ ಕೊಟ್ಟರು; ಇಷ್ಟಿಷ್ಟುದ್ದ ಹೊಗೆಸೊಪ್ಪನ್ನು ಕೈಯಲ್ಲಿಟ್ಟು ತಿಕ್ಕಿ ಚೆನ್ನಾಗಿ ಹದಮಾಡಿ ಬಾಯಿಗೆ ಹಾಕಿಕೊಳ್ಳುತ್ತ ಹಿರಿಯರು ಮಾತಿಗೆ ಶುರು ಮಾಡಿದರು. ಅದು ಉಪ್ಪಿನ ಸತ್ಯಾಗ್ರಹದ ಕಾಲ. ಗಾಂಧಿಜಿ ದಂಡಿ ಯಾತ್ರೆ ಕೈಕೊಂಡು ತಮ್ಮ ಸತ್ಯಾಗ್ರಹದ ಕರೆ ದೇಶದ ಮೂಲೆಮೂಲೆಗೂ ಮುಟ್ಟುವಂತೆ ಮಾಡಿದ್ದರು. ವಾಸುದೇವಯ್ಯನವರು ಗಾಂಧಿ ಕಡೆಯವರು. ಖಾದಿ ಧರಿಸುತ್ತಿದ್ದರು. ಹೊಗೆಸೊಪ್ಪು ಬಿಟ್ಟುಬಿಟ್ಟಿದ್ದರು. ಪರದೇಶಿ ಸಕ್ಕರೆ ಮುಟ್ಟುತ್ತಿರಲಿಲ್ಲ, ಆದರೆ ತಿಮ್ಮಪ್ಪಯ್ಯನವರಿಗೆ ಗಾಂಧಿ ಹೆಸರು ಕೇಳಿದರೆ ಆಗದು. ಇಂಗ್ಲಿಷ್ ಸರ್ಕಾರದಂಥ ಬಲಿಷ್ಠ ಶಕ್ತಿಯೊಡನೆ ಆಯುಧವಿಲ್ಲದೆ ಹೋರಾಡುವೆನೆಂಬ ಗಾಂಧಿಯ ಮಾತು ಕೇಳಿದರೆ ಅವರಿಗೆ ನಗು.

"ಮತ್ತೆ ಶುರುವಾಯಿತೇ ನಿಮ್ಮ ಗಾಂಧಿಯ ಉಪದ್ವ್ಯಾಪ. ಜನ ಮರುಳೋ ಜಾತ್ರೆ ಮರುಳೋ. ಅವನೊಬ್ಬನಿಗೆ ಹುಚ್ಚು ಹಿಡೀತು ಅಂದರೆ ಎಲ್ಲರಿಗೂ ಅದೇ ಹುಚ್ಚು ಹಿಡಿಯಬೇಕೆ? ಉಪ್ಪಿನ ಸತ್ಯಾಗ್ರಹವಂತೆ. ಸಮುದ್ರದ ನೀರು ತಂದು ಕಾಯಿಸುವುದು. ಎಷ್ಟು ಉಪ್ಪು ಸಿಕ್ಕುತ್ತದೆ ಅದರಿಂದ? ಒಂದು ಪಾವಾಣೆ ಕೊಟ್ಟರೆ ಅದರ ನೂರರಷ್ಟು ಉಪ್ಪು ಸಿಕ್ಕುವು ದಿಲ್ಲವೇ? ಇದಕ್ಕಾಗಿ ಏಟು ತಿನ್ನುವುದು, ಕೆಲಸ ಕಳೆದು ಕೊಳ್ಳುವುದು, ಜೈಲಿಗೆ ಹೋಗುವುದು. ಸಾಕು ಮಹಾರಾಯ, ಈ ಗಾಂಧಿ ಸಹವಾಸ" ಎಂದು ತಿಮ್ಮಪ್ಪಯ್ಯನವರು ಸವಾಲ್ ಹಾಕಿದರು.

" ನಾನು ಹೇಳೋದೂ ಅದನ್ನೇ. ನಮ್ಮ ಮನೆ ಹುಡುಗ —ಇಂಗ್ಲಿಷ್ ಶಾಲೆಗೆ ಹೋಗ್ತಾನಲ್ಲ —ಆ ರಾಮು —ಅವನಿಗೂ ಈ ಗಾಂಧಿ ಹುಚ್ಚು ಹಿಡಿದು ಬಿಟ್ಟಿದೆ ನೋಡಿ. ಮೊನ್ನೆ ಹೆಂಡದಂಗಡಿ ಮುಂದೆ ಅದೇನು ಪಿಕೆಟಿಂಗೋ ಏನು ಮಣ್ಣೋ ಅದನ್ನು ಮಾಡುವುದಕ್ಕೆ ಹೋಗಿದ್ದನಂತೆ. ಎಷ್ಟು ಹೇಳಿದರೂ ಕೇಳುವುದೇ ಇಲ್ಲ. ಮೊನ್ನೆ ನಾಲ್ಕು ಚೆನ್ನಾಗಿ ಏರಿಸಿದೆ. ನಿನ್ನೆಯಿಂದ ಮನೆಗೇ ಬಂದಿಲ್ಲ. ತಂದೆತಾಯಿಗಳ ಮಾತನ್ನೇ ಮಕ್ಕಳು ಕೇಳದೆ ಹೋದರೆ ಹೇಗೆ? ಇದೆಲ್ಲ ಆ ಗಾಂಧೀದೇ ದುರ್ಬೋಧನೆ" ಎಂದು ರಂಗಭಟ್ಟರೂ ತಮ್ಮ ಅಭಿಪ್ರಾಯವನ್ನು ಮುಂದಿಸಿದರು.

" ನೋಡಿ, ನೀವು ನಿಮ್ಮ ಮೂಗಿನ ನೇರ ಬಿಟ್ಟು ಅತ್ತಿತ್ತ ನೋಡುವುದೇ ಇಲ್ಲ. ಪರದೇಶದವರು ಅಷ್ಟು ವರ್ಷಗಳ ಕಾಲ ನಮ್ಮ ದೇಶಕ್ಕೆ ಬಂದು ದಬ್ಬಾಳಿಕೆಯಿಂದ ಆಳುತ್ತಿದ್ದರಲ್ಲ. ನಾವೆಲ್ಲ ಗುಲಾಮರಾಗಿ ಅವರು ಹೇಳಿ ದಂತೆ ಕೇಳುತ್ತ ಬಂದಿದ್ದೇವೆ. ಅವರ ಸುಲಿಗೆಯಿಂದ ನಮ್ಮ ದೇಶ ದರಿದ್ರ ವಾಗಿದೆ. ನಮ್ಮಲ್ಲಿ ಇರುವ ಉತ್ತಮವಾದ ಶಕ್ತಿಗಳೆಲ್ಲ ಲೋಪವಾಗುತ್ತ ಬರುತ್ತಿವೆ. ಇದನ್ನೆಲ್ಲ ಹೋಗಲಾಡಿಸುವುದು ಹೇಗೆ? ನಮ್ಮ ಮನೆಯನ್ನು ನಮ್ಮ ಇಷ್ಟ ಬಂದಂತೆ ಇಟ್ಟುಕೊಳ್ಳಬೇಡವೆ? ಗಾಂಧಿಯಂಥ ಅವತಾರ ಪುರುಷನನ್ನು ಹುಚ್ಚನೆಂದರೆ ಯಾರಿಗೆ ತೊಂದರೆ? ಅವನ ಜೀವನ ನೋಡಿ. ಅವನಿಗೆ ಯಾವುದಕ್ಕೆ ಕಡಿಮೆಯಿತ್ತು? ಎಲ್ಲವನ್ನೂ ಬಿಟ್ಟು ದೇಶಕ್ಕಾಗಿ ಹೋರಾಡುತ್ತಿದ್ದಾನೆ. ಆ ಹೋರಾಟದಲ್ಲಿ ಎಲ್ಲರೂ ಭಾಗವಹಿಸಬೇಕಾದ್ದು ಕರ್ತವ್ಯ. ಇಲ್ಲದೆ ಹೋದರೆ ಅದರ ವಿಷಯದಲ್ಲಿ ಸಹಾನುಭೂತಿಯನ್ನಾದರೂ ತೋರಿಸಬೇಡವೆ?" ಎಂದರು ವಾಸುದೇವಯ್ಯನವರು.

ಈ ಮಾತನ್ನೆಲ್ಲಾ ಕೇಳುತ್ತ ಕುಳಿತಿದ್ದ ಗಾಂಧಿಭಕ್ತ ಮಾಧವನ ರಕ್ತ ಬಿಸಿ ಯೇರಿತು. "ಸ್ವಾರ್ಥಿಗಳಾದವರಿಗೆ ದೇಶಸೇವೆ ಇತ್ಯಾದಿಗಳ ಮಾತು ಹೇಗೆ ಅರ್ಥವಾಗುತ್ತದೆ? ಕೃಷ್ಣ ಅವತಾರ ಮಾಡಿದಾಗಲೂ ಕಂಸ, ನರಕಾಸುರ, ದುರ್ಯೋಧನ ಮೊದಲಾದವರು ಇದ್ದೇ ಇದ್ದರು" ಎಂದು ಬಿಟ್ಟ. ಮಾತು ಕಟುವಾಗಿ ಬಂತು. ಚೋಟುದ್ದದ ಈ ಹುಡುಗ ದೊಡ್ಡವರನ್ನು ಹಾಗೆ ಅಂದದ್ದು ಕೇಳಿ ವಾಸುದೇವಯ್ಯನವರಿಗೆ ಸಿಟ್ಟು ಬಂತು: "ಹೋಗೋ ಬಾಯಿಗೆ ಬಂದಹಾಗೆ ಹರಟಬೇಡ. ದೊಡ್ಡವರ ಮುಂದೆ ಹಾಗೆಲ್ಲ

ಅನ್ನಬಾರದು. ನಡಿ" ಅಂದರು.

"ನೋಡಿ ಈಗಿನ ಕಾಲದ ಹುಡುಗರೇ ಹೀಗೆ. ದೇವರಲ್ಲಿ, ಗುರು ಹಿರಿಯರಲ್ಲಿ ಭಕ್ತಿ ಕೇಳಲೇ ಬೇಡಿ. ಒಂದೆರಡು ಎಸ್ ಪೆಸ್ ಅನ್ನುವುದು ಕಲಿತರೆ ಸಾಕು ಅಪ್ಪನಿಗೇ ಬುದ್ಧಿ ಹೇಳಲು ಬರುತ್ತಾರೆ" ಎಂದರು -ಅನಂತಪ್ರಭುಗಳು.

ಈ ಮಾತನ್ನು ಕೇಳಿ ಮಾಧವನಿಗೆ ರೋಷ ಉಕ್ಕಿಬಂದು ಕಣ್ಣೀರಾಗಿ ಹರಿಯುವುದೋ ಎನ್ನುವಂತಾಯಿತು. ಥಟ್ಟನೆ ಅಲ್ಲಿಂದ ಎದ್ದು ಹೊರಟು ಹೋದ.

ಈಗ ಆ ಮಾತೆಲ್ಲಾ ನೆನಪಿಗೆ ಬಂದು ಮನಸ್ಸು ಕಹಿಯಾಯಿತು. ಆದರೆ ತನ್ನ ತಂದೆಯ ವಿಷಯದಲ್ಲಿ ಅಭಿಮಾನವೂ ಹುಟ್ಟಿತು.

ಇಷ್ಟು ಹೊತ್ತಿಗೆ ಕತ್ತಲು ತೀರ ದಟ್ಟವಾಯಿತು. ಜೀರುಂಡೆಗಳ ಜಿರ್‍ರೆಂಬ ಸದ್ದು ಸುತ್ತಲ ಕತ್ತಲನ್ನು ಇಮ್ಮಡಿಗೊಳಿಸುತ್ತಿತ್ತು. ಇಷ್ಟು ರಾತ್ರಿಯಾಗಿರುವುದನ್ನು ಗಮನಿಸಿದಾಗ ಮಾಧವನ ಮೈ ಕೊಂಚ ಜುಮ್ಮೆಂದಿತು. ಅಲ್ಲೇ, ಅವನು ಕುಳಿತ ಸ್ಥಳಕ್ಕೆ ಇಪ್ಪತ್ತು ಗಜದೂರದಲ್ಲೇ ಒಂದು ದೊಡ್ಡ ಧೂಪದ ಮರವಿತ್ತು. ಆ ಮರದ ಕೆಳಗಿನಿಂದ ಒಂದು ಓಣಿ ಆಚೆ ಗದ್ದೆಗಳ ಕಡೆಗೆ ಹೋಗುತ್ತದೆ. ಅಲ್ಲಿ ಆ ಮರಕ್ಕೆ ಆಗ್ಗೆ ಎರಡು ವರ್ಷಗಳ ಹಿಂದೆ ಹಳೆಪೈಕ ನಾರಾಯಣ ನೇಣುಹಾಕಿಕೊಂಡಿದ್ದ. ಸತ್ತು ಬೂದಿಯಾದ ಮೇಲೂ ಕೂಡ ಆ ಮಹಾರಾಯ ಪ್ರೇತವಾಗಿ ಅಲ್ಲೇ ಸುತ್ತುಮುತ್ತಲೂ ಓಡಾಡುತ್ತಿದ್ದ. ಅವನ ಓಡಾಟವನ್ನು ಕಂಡವರು ಆ ಹಳ್ಳಿಯಲ್ಲಿ ಅನೇಕರಿದ್ದರು. ಮಾಧವನ ಬುದ್ಧಿಯೇನೋ ಭೂತ ಪ್ರೇತಗಳನ್ನು ನಂಬುತ್ತಿರಲಿಲ್ಲ. ಆದರೂ ಈಗ ಏಕೋ ಮನಸ್ಸು ಕೊಂಚ ಗಲಿಬಿಲಿಯಾಯಿತು. ಮನೆಗೆ ಹೋಗೋಣ ಎಂದು ಎದ್ದು ನಿಂತ. ಅದು ಹೆದರಿಕೆಯಲ್ಲ, ಕೊಂಚ ಗಾಬರಿ - ಅಷ್ಟೆ.

" ಹ್ಹ ! ಹ್ಹ ! ಹ್ಹ, ಹೋ ಹೋ ಹೋ " ಎಂದು ಒಂದು ವಿಕಟಾಟ್ಟಹಾಸ ಮೊಳಗಿ ಸುತ್ತುಮುತ್ತಲ ಮೌನವನ್ನು ಅಲ್ಲೋಲಕಲ್ಲೋಲಗೊಳಿಸಿತು. ವೀರ ಮಾಧವನ ಮೈ ಬೆವತು ಹೋಯಿತು. ಇದೇನು ? ನಿಜವಾಗಿಯೂ ನಾರಾಯಣನ ಭೂತವೋ ಹೇಗೆ ? ಇನ್ನೇನು ಗತಿ ?

ಆದರೂ ಕೊಂಚ ಧೈರ್ಯ ತಂದುಕೊಂಡು ಸುತ್ತುಮುತ್ತಲೂ

ನೋಡಿದ, ಯಾರೂ ಕಾಣಿಸಲಿಲ್ಲ. ಆ ಮರದ ಕಡೆ ನೋಡಿದ. ದಟ್ಟವಾದ ಕತ್ತಲಲ್ಲೂ ಅಲ್ಲಿ ಏನೋ ಸರಿದಾಡುತ್ತಿದ್ದಂತೆ ತೋರಿತು. ಅದು ಆ ನಾರಾಯಣನೇ ಇದ್ದರೂ ಇರಬಹುದು. ಹೇಗೂ ಇರಲಿ, ಅಂತೂ ಮನೆಗೆ ಹೋಗೋಣ —ಎಂದು ಹಿಂತಿರುಗಿ ವೇಗವೇಗವಾಗಿ ಕಾಲಿಡತೊಡಗಿದ.

" ಮಾಧವಾ " ಎಂದು ಯಾರೋ ಕೂಗಿದಂತಾಯಿತು.

ಯಾರು ? ಯಾರಿರಬಹುದು ?

ಇನ್ನೂ ಹತ್ತಿರವಲ್ಲಿ ಮತ್ತೊಮ್ಮೆ " ಮಾಧವಾ, ಹೆದರಿಕೊಂಡೆ ಏನೋ " ಎಂದು ಆ ಧ್ವನಿ ಮತ್ತೆ ಮೊಳಗಿತು. ಈಗ ಮಾಧವನಿಗೆ ಆ ಧ್ವನಿಯ ಗುರುತು ಹತ್ತಿತು.

" ಕೃಷ್ಣಾ ! "

" ಹೌದೋ. ನಿನ್ನನ್ನು ನೋಡುವಾ ಅಂತ ನಿಮ್ಮ ಮನೆಗೆ ಬಂದಿದ್ದೆ. ನೀನು ಇರಲಿಲ್ಲ. ಹಾಗೆ ಈ ದಿಣ್ಣೆಯಲ್ಲಿ ನೀನು ಪ್ರಭುತ್ವ ನಡೆಸುತ್ತಿರಬಹುದೇನೋ ಎಂದು ಬಂದೆ. ಕಂಡೆ ರಾಯರನ್ನು. ಅಬ್ಬಾ ಏನು ಏಕಾಗ್ರ ನಿನ್ನದು ! ಮೂರು ಸಲ ಕೆಮ್ಮಿದರೂ ಕೇಳ ಬಾರದೇ ? "

" ಅಲ್ಲಾ, ಹಾಗೆ ವಿಕಟವಾಗಿ ಕೂಗಿದೆಯಲ್ಲ, ಮಹಾರಾಯ. ಎಲ್ಲಿ ಕಲಿತಿಯೋ ಅದನ್ನ ? " ಎಂದ ಮಾಧವ.

" ಏನು ಒಂದು ಕೋಳಿ ಗೀಳಿ ಹಾಕಬೇಕೊ ಹೇಗೆ ? "

" ಇಲ್ಲ, ಇಲ್ಲ ! ಅಷ್ಟೇನೂ ಹೆದರಿಕೆಯಾಗಲಿಲ್ಲ, ಆದರೂ ಒಂದು ಸಲ ಎದೆ ಝುಗ್ಗೆಂದ ಹಾಗೆ ಆಯಿತು. ಹೋಗಲಿ ಬಿಡು ; ಏನು ವಿಶೇಷ ? "

" ಏನು ಇಲ್ಲ ; ಸೂರಪ್ಪಯ್ಯ ಬಂದಿದ್ದಾರೆ. "

" ಸೂರಪ್ಪಯ್ಯ ! ಯಾವಾಗ ಬಂದರು ? "

" ಹೊತ್ತು ಮುಳುಗುವ ಹೊತ್ತಿಗೆ ಬಂದರು. ನಮ್ಮ ಮನೆಯಲ್ಲೇ ಇದ್ದಾರೆ. "

" ಹಾಗಾದರೆ ಹೋಗೋಣ ಬಾ. ಅವರನ್ನು ನೋಡಬೇಕು. "

ಹೀಗೆಂದು ಇಬ್ಬರೂ ಅಲ್ಲಿಂದ ಹೊರಟರು.

# ೨

ಕೃಷ್ಣ ಮಾಧವ ಇಬ್ಬರೂ ಕುಂದಾಪುರ ಹೈಸ್ಕೂಲಿನಲ್ಲಿ ಓದುತ್ತಿದ್ದರು. ಇಬ್ಬರೂ ಒಂದೇ ಊರಿನವರು. ಮಾಧವನ ಮನೆಯಿಂದ ಕೃಷ್ಣನ ಮನೆಗೆ ಕೇವಲ ಅರ್ಧ ಫರ್ಲಾಂಗ್ ದೂರ. ನಡುವೆ ಏಳೆಂಟು ಗದ್ದೆಗಳನ್ನು ತುಳಿದು ಒಂದು ಹಳ್ಳ ದಾಟಿದರೆ ಕೃಷ್ಣನ ಮನೆ ಸಿಕ್ಕುತ್ತದೆ. ಪ್ರಾಥಮಿಕ ಶಾಲೆಯಿಂದಲೂ ಅವರ ವಿದ್ಯಾಭ್ಯಾಸ ಒಟ್ಟಿಗೇ ನಡೆಯಿತು. ಮೂರು ಮೈಲಿ ದೂರದ ಬೈಂದೂರಿನ ಮಿಡ್ಲ್‌ಸ್ಕೂಲಿಗೆ ಇಬ್ಬರೂ ಜೊತೆಯಾಗಿಯೇ ನಡೆದು ಹೋಗುತ್ತಿದ್ದರು. ಆ ಮೇಲೆ ಹನ್ನೆರಡು ಮೈಲಿ ದೂರ ಕುಂದಾಪುರದಲ್ಲಿ ಇಬ್ಬರೂ ಹೈಸ್ಕೂಲಿಗೆ ಸೇರಿ ಒಂದೇ ಹೋಟಲಿನಲ್ಲಿ ವಾಸಮಾಡುತ್ತಿದ್ದರು. ಕುಂದಾಪುರದಲ್ಲಿ ಎರಡು ವರ್ಷ ಆಗಲೇ ಕಳೆದಿತ್ತು. ಈಗ ಇಬ್ಬರೂ ಎಸ್. ಎಸ್. ಎಲ್. ಸಿ. ಇನ್ನು ನಾಲ್ಕೇ ತಿಂಗಳು – ಪರೀಕ್ಷೆ ಮುಗಿಯುವುದು, – ರಜೆ ಬರುವುದು !

ಮಿಡ್ಲ್‌ಸ್ಕೂಲಿನಲ್ಲಿ ಓದುತ್ತಿದ್ದಾಗ ಕೃಷ್ಣ ಮಾಧವರ ಸ್ನೇಹಕ್ಕೆ ಹುಳಿ ಹಿಂಡುವಂಥ ಸನ್ನಿವೇಶವೊಂದು ಬಂತು. ಒಬ್ಬರನ್ನು ಬಿಟ್ಟು ಇನ್ನೊಬ್ಬರು ಎಲ್ಲೂ ಹೋಗುತ್ತಿರಲಿಲ್ಲ, ಏನೂ ಮಾಡುತ್ತಿರಲಿಲ್ಲ. ಗೆಳೆಯರ ಮನಸ್ಸು ಹಾಗೆ ಎರಕಗೊಂಡಿತ್ತು. ಮಾಧವ ಸ್ಕೂಲಿನಲ್ಲೆಲ್ಲ ಬುದ್ಧಿವಂತನೆಂದು ಹೆಸರಾಗಿದ್ದ. ಕನ್ನಡದಲ್ಲಿ, ಇಂಗ್ಲಿಷಿನಲ್ಲಿ, ಗಣಿತವೊಂದು ಬಿಟ್ಟು ಉಳಿದೆಲ್ಲ ವಿಷಯಗಳಲ್ಲೂ ಅವನದೇ ಮೇಲು ಕೈ. ಕೃಷ್ಣ ಕಲಿಯುವುದರಲ್ಲಿ ಅಷ್ಟು ಹೆಸರು ಪಡೆಯಲಿಲ್ಲ. ಅವನಿಗೆ ಸುಮಧುರ ಕಂಠವಿತ್ತು; ಪದ್ಯಗಳನ್ನು ಬಹು ಸೊಗಸಾಗಿ ಹಾಡುತ್ತಿದ್ದ. ಇಬ್ಬರಲ್ಲೂ ಆತ್ಮಾಭಿಮಾನ ಹೆಚ್ಚು – ಆದ ಕಾರಣ ಕೋಪವೂ ಸ್ವಲ್ಪ ಜಾಸ್ತಿಯೇ ಎನ್ನಬೇಕು. ಈ ಇಬ್ಬರಲ್ಲಿ ಯಾರಿಗೆ ಕೋಪ ಹೆಚ್ಚು ಎಂದು ನಿರ್ಧರಿಸುವುದು ಕಷ್ಟ. ಇಬ್ಬರೂ ಸಿಡಿಮದ್ದಿನ ಹಾಗೆ — ಕಿಡಿ ಬಿದ್ದರೆ ಸಾಕು, ಆಸ್ಫೋಟನೆ. ಇವರಿಬ್ಬರು ಅನೇಕರೊಡನೆ ಜಗಳಾಡಿದ್ದರೂ ಒಬ್ಬರೊಡನೊಬ್ಬರು ಜಗಳವಾಡಿದ್ದನ್ನು ಯಾರೂ ಕಂಡಿರಲಿಲ್ಲ.

ಒಂದು ದಿನ ಶಾಲೆ ಮುಗಿದ ಮೇಲೆ ಹುಡುಗರೆಲ್ಲ ಮನೆಯ ಕಡೆ ಹೊರಟರು. ಮಾಧವ ಕೃಷ್ಣರೂ ಇನ್ನು ಏಳೆಂಟು ಜನ ವಿದ್ಯಾರ್ಥಿಗಳೂ ಸೇರಿ ಗುಂಪಾಗಿ ಬರುತ್ತಿದ್ದರು. ಆ ಕಾಲದಲ್ಲಿ ಬೈಂದೂರಿಗೆ ಒಬ್ಬ ಸ್ವಾಮಿಗಳು ಬಂದು ಬೀಡು ಬಿಟ್ಟಿದ್ದರು. ವೇಷಭೂಷಣದಲ್ಲಿ ಅಪ್ಪಟ ಸಂನ್ಯಾಸಿಯ ಹಾಗೆ ಇದ್ದರು. ಮೈ ತುಂಬ ವಿಭೂತಿ ಬಳಿವದ್ದೇನು ? ಮಾವಿನ ಮರದ ಕೆಳಗೆ ಲಂಗೋಟಿ ತೊಟ್ಟು ಕಣ್ಣು ಮುಚ್ಚಿ ಕುಳಿತುಕೊಳ್ಳುವುದೇನು ! ಆಗಾಗ ಕಣ್ಣು ತೆರೆದು ಸುತ್ತಮುತ್ತಲೂ ಜ್ಞಾನದೃಷ್ಟಿ ಬೀರುವುದೇನು ! ಜನರೆಲ್ಲ ಈ ಮಹಾ ಬೈರಾಗಿಯನ್ನು ಕಂಡು ಮರುಳಾದರು. ಬೈರಾಗಿಯ ಔದಾರ್ಯಕ್ಕೂ ಮಿತಿಯಿರಲಿಲ್ಲ. ಯಾರು ಯಾರ ಅಭೀಷ್ಟ ಏನೇನು ಇದೆಯೋ ಅದೆಲ್ಲವನ್ನೂ ಪೂರಯಿಸಿಕೊಡಲು ಅವನು ಸದಾ ಸಿದ್ಧ. ಪ್ರತಿಯಾಗಿ ಏನನ್ನೂ ಕೇಳುವುದಿಲ್ಲ; ಕೊಟ್ಟರೆ ಎಲ್ಲವನ್ನೂ ಈ ಕೈಯಲ್ಲಿ ಸ್ವೀಕರಿಸಿ ಆ ಕೈಯಲ್ಲಿ ಇನ್ನಾರಿಗೋ ಕೊಟ್ಟು ಬಿಡುತ್ತಿದ್ದ. ಮೊದಲು ಮರದ ಕೆಳಗೆ ನೆಲದ ಮೇಲೆ ಇದ್ದ ಆಶ್ರಮ ಆ ಮೇಲೆ ಒಂದು ಸೂರಿನ ಕೆಳಗೆ ಬಂತು. ಲಂಗೋಟಿಯ ಮೇಲೆ ಕಾಷಾಯವಸನ ಬಂತು. ಈ ಸಂನ್ಯಾಸಿ ಪುಂಗವನಿಗೆ ಸ್ತ್ರೀಯರ ಮೇಲೆ ವಿಶೇಷ ಗೌರವವೆಂಬುದು ವ್ಯಕ್ತವಾಗತೊಡಗಿತು. ಆದರೂ ಕೂಡಾ ಸುತ್ತಮುತ್ತಣ ಜನರಲ್ಲಿ ಎರಡು ಪಂಗಡ — ಸಂನ್ಯಾಸಿಯ ಪರ, ವಿರುದ್ಧ. ಸಹಜವಾಗಿಯೇ ಹುಡುಗರು ಆ ಸಂನ್ಯಾಸಿಯ ವಿಷಯವಾಗಿ ಮಾತಾಡತೊಡಗಿದರು. ಆದರೆ ಅದು ಬಹು ಬೇಗನೆ ವಾದವಿವಾದವಾಗಿ ಕವಲೊಡೆಯಿತು.

" ಅವನು ರಾವಣ ಸಂನ್ಯಾಸಿ" ಎಂದ ಮಾಧವ. ಅವನ ತಂದೆ ವಾಸುದೇವಯ್ಯನವರದೂ ಅದೇ ಅಭಿಪ್ರಾಯ. ಅದೇ ಅಭಿಪ್ರಾಯವನ್ನು ಮಗನೂ ವ್ಯಕ್ತಪಡಿಸಿದ, ಕೃಷ್ಣನ ತಂದೆ ಸಂನ್ಯಾಸಿಯ ಪರಮಭಕ್ತರು. ಆ ಸಂನ್ಯಾಸಿಯ ಆಶೀರ್ವಾದಬಲವಿಲ್ಲದೆ ಹೋಗಿದ್ದರೆ ಕಳೆದುಹೋಗಿದ್ದ ಅವರ ಮನೆಯ ಆ ಕರಿ ಎತ್ತು ಮತ್ತೆ ತನಗೆ ತಾನೇ ಮನೆ ಹುಡುಕಿಕೊಂಡು ಬರುತ್ತಿತ್ತೆ ?

" ಅವರು ರಾವಣ ಸಂನ್ಯಾಸಿಯೆಂದು ಏಕೆ ಹೇಳುತ್ತೀ ? ಅವರು ಎಷ್ಟು ಜನರ ಕಾಹಿಲೆ ವಾಸಿ ಮಾಡಲಿಲ್ಲ ? ಎಷ್ಟು ಜನರ ಮನಸ್ಸಿನಲ್ಲಿ ಇದ್ದದ್ದನ್ನು ಹೇಳಲಿಲ್ಲ ? ಅವರು ನಿಜವಾದ ಸಂನ್ಯಾಸಿ. ಅವರನ್ನು ದೂರುವುವಕ್ಕೆ

ಹೊಟ್ಟೆಕಿಚ್ಚೇ ಕಾರಣ ” ಎಂದ ಕೃಷ್ಣ.

“ ಕೆಲವು ಜನರಿಗೆ ಅನುಕೂಲವಾದ ತಕ್ಷಣ ಅವನು ಮಹಾ ಸಂನ್ಯಾಸಿ ಎನ್ನಬಾರದು. ಅವನ ಜೀವನ ನೋಡು. ಅವನಿಗೆ ಅದೆಷ್ಟು ದುರಾಶೆ, ಎಷ್ಟು ಕೊಟ್ಟರೂ ಸಾಲದು ಅವನಿಗೆ. ಎಷ್ಟು ಜನ ಹೆಂಗಸರನ್ನು ಕೆಡಿಸಿದ್ದಾನೆ ಅವನು. ಕೃಷ್ಣಾ ....”

“ ಹೋಗೋ ಸಾಕು. ಇನ್ನೊಬ್ಬರ ವಿಷಯ ಆಡುವವರು ತಮ್ಮ ವಿಷಯ ನೋಡಿಕೊಳ್ಳಬೇಕು. — ”

ಈ ಮಾತು ಕೇಳಿ ಮಾಧವನಿಗೆ ಆಶ್ಚರ್ಯವಾಯಿತು.

“ ಅದೇನದು ನಮ್ಮ ವಿಷಯ ? ”

“ ನಿಮ್ಮಪ್ಪ ಏನೋ ಬೇರು ನಾರು ಕೊಟ್ಟು ಜನರಿಂದ ದುಡ್ಡು ಕೀಳು ವುದಿಲ್ಲವೇ ? ”

ಮಾಧವ ಮತ್ತೆ ಮಾತನಾಡಲಿಲ್ಲ. ಮಾತಾಡಲೂ ಆಗದಷ್ಟು ಕೋಪ ದಳ್ಳುರಿಯಿತು.

ಅವನ ತಂದೆ ಹಳ್ಳಿಯ ವೈದ್ಯರು ನಿಜ. ಆಯುರ್ವೇದ ಚೆನ್ನಾಗಿ ಬಲ್ಲ ವರು. ರೋಗಗಳಿಗೆ ಸರಿಯಾಗಿ ಔಷಧಿ ಕೊಡುವವರು ಎಂದು ಸುತ್ತು ಮುತ್ತಲೂ ಪ್ರಸಿದ್ಧರು. ತನ್ನ ತಂದೆಯನ್ನು ಕುರಿತು ಆಡಿದ ಈ ಮಾತು ಮಾಧವನ ಹೃದಯಕ್ಕೆ ನೆಟ್ಟಿತು. ಕೃಷ್ಣ ಅದೇಕೆ ಹೀಗೆ ಮಾತಾಡಿದನೋ ಅವನಿಗೆ ಅರ್ಥವಾಗಲಿಲ್ಲ. ಈ ವರೆಗೆ ಯಾರೂ ಆ ರೀತಿ ಮಾತು ಅವನ ತಂದೆ ಯನ್ನು ಕುರಿತು ಆಡಿರಲಿಲ್ಲ. ವಾಸುದೇವಯ್ಯನವರು, ವಾಸುದೇವ ಪಂಡಿತರು ಎಂದು ಎಲ್ಲರಿಗೂ ಗೌರವ. ಈಗ ನಿಷ್ಕಾರಣವಾಗಿ, ಯಾವನೋ ಸಂನ್ಯಾಸಿಯ ಕುರಿತು ಮಾತಾಡುವಾಗ ಆ ವಿಷಯದಲ್ಲಿ ಏನು ವಾದ ಮಾಡಿದರೂ ಸರಿಯೇ; ಆದರೆ ಈ ರೀತಿ ತನ್ನ ತಂದೆಯನ್ನು ಟೀಕೆ ಮಾಡಿದ್ದರಿಂದ ಮಾಧವನ ರಕ್ತ ಕುದಿಯಿತು. ಕೃಷ್ಣನ ವಿಷಯದಲ್ಲಿ ಅವನಿಗಿದ್ದ ಗೆಳೆತನವೆಲ್ಲ ಅವನ ಆ ಕ್ರೋಧದ ಬೆಂಕಿಯಲ್ಲಿ ಬೂದಿಯಾಗಿ ಹೋಯಿತು. ಭಾವ ಉದ್ರೇಕ ಗೊಂಡಾಗ ಮಾತು ಕಟ್ಟಿಹೋಗುವ ಆ ದೌರ್ಬಲ್ಯ ಇಲ್ಲದೆ ಹೋಗಿದ್ದರೆ ಮಾಧವ ಮಾತಿನ ಬೆಂಕಿಮಳೆಯನ್ನು ಕರೆದು ತಣ್ಣಗಾಗುತ್ತಿದ್ದ. ಆದರೆ ಮಾತು ಹೊರಡಲಿಲ್ಲ. ಒಳಗಿನ ಬೆಂಕಿ ಹಾಗೇ ಉಳಿದು ಅವನ ಮನಸ್ಸನ್ನು ದಹಿಸ

ತೊಡಗಿತು. ಆ ಮೇಲೆ ಮಾಧವ ಕೃಷ್ಣರಿಬ್ಬರೂ ಜೊತೆ ಜೊತೆಯಾಗಿಯೇ ಊರಿಗೆ ಬಂದರು; ಮಾತಿಲ್ಲದೆ ತಮ್ಮ ತಮ್ಮ ಮನೆ ಸೇರಿದರು.

ಮಾರನೆಯ ದಿನ ಮತ್ತೆ ಸಂಧಿಸಿದಾಗ ಅವರು ಒಬ್ಬರೊಡನೊಬ್ಬರು ಮಾತಾಡಲಿಲ್ಲ. ಅವನು ಮಾತಾಡಿಸಲಿ ಎಂದು ಇವನ ಅಹಂಕಾರ ಬಯಸಿತು. ಇವನೇ ಮಾತಾಡಿಸಬಾರದೇಕೆ ಎಂದು ಅವನ ಅಹಂಕಾರ ಮೊರೆಯಿತು. ಮಾತಾಡಿಸಲಿಲ್ಲವಲ್ಲ ಎಂಬ ನಿರಾಶೆ ಮನಸ್ಸಿನ ಕಹಿಗೆ ವಿಷವನ್ನು ಸುರಿಯಿತು. ಒಬ್ಬರ ಮುಖದ ಕಡೆಗೆ ಇನ್ನೊಬ್ಬರು ನೋಡದಾದರು. ಒಂದೇ ಕಾಲಕ್ಕೆ ಮನೆ ಬಿಟ್ಟು ಹೊರಡುವರು, ಕೊಂಚ ಹಿಂದೆಯೋ ಮುಂದೆಯೋ ಒಂದೇ ದಾರಿಯಲ್ಲಿ ನಡೆಯುವರು; ಒಂದು ದೋಣಿಯಲ್ಲಿ ಕುಳಿತು ಉಪ್ಪುಂದದ ಹೊಳೆಯನ್ನು ದಾಟಿ ಬೈಂದೂರನ್ನು ಸೇರಿ ಶಾಲೆಗೆ ಹೋಗುವರು; ಒಂದೇ ಕ್ಲಾಸಿನಲ್ಲಿ ಎಂದಿನಂತೆ ಒಂದೇ ಬೆಂಚಿನಲ್ಲಿ ಕುಳಿತುಕೊಳ್ಳುವರು. ಆದರೆ ಮಾತಿಲ್ಲ, ಕತೆಯಿಲ್ಲ. ಪ್ರಾಥಮಿಕ ಶಾಲೆಯಿಂದ ಅಲ್ಲಿ ತನಕ ಬೇರು ಬಿಟ್ಟು ಬೆಳೆದಿದ್ದ ಗೆಳೆತನ ಕಡಿದು ಬಿತ್ತು. ವರ್ಷಗಳ ಸಹವಾಸ, ಸಹಕಾರ ಒಂದೇ ಕ್ಷಣದಲ್ಲಿ ಭಗ್ನವಾಗಿ ಹೋಯಿತು. ಮನಸ್ಸು ಮುರಿಯಿತು, ಮುರಿದ ಮನಸ್ಸು ಉರಿಯಿತು. ಆ ಉರಿಗೆ ತುಪ್ಪವೆರೆಯುವ ಸಂಗತಿಗಳು ದಿನ ದಿನವೂ ನಡೆಯ ತೊಡಗಿದವು.

ಪ್ರೀತಿ ಬೆಳೆಯುವುದು ಬಹು ನಿಧಾನ; ಬೆಳೆಯುತ್ತಿದ್ದಾಗಲೇ ಅದಕ್ಕೆ ನೂರಾರು ಕುತ್ತ; ಬೆಳೆದ ಮೇಲೆ ಕೂಡಾ ಅದಕ್ಕೆ ಗಂಡಾಂತರ ತಪ್ಪಿದ್ದಲ್ಲ. ಆದರೆ ದ್ವೇಷದ ಸಸಿ ನೆಟ್ಟರೆ ಸಾಕು, ಗೊಬ್ಬರವಿಲ್ಲದೆ ಭೂತಾಕಾರವಾಗಿ ಇಂದ್ರ ಜಾಲದಿಂದೆಂಬಂತೆ ಅದು ಬೆಳೆಯುತ್ತದೆ. ಮಾಧವನ ಮನಸ್ಸಿನಲ್ಲೂ ಅದು ಹಾಗೆಯೇ ಹುಲುಸಾಗಿ ಬೆಳೆದು ಕವಲುಕವಲಾಯಿತು. ಕೃಷ್ಣ ಏನು ಮಾಡಿದರೂ ಆಡಿದರೂ ಅದು ತನ್ನ ವಿರುದ್ಧವಾಗಿಯೇ, ತನ್ನನ್ನು ಗೇಲಿ ಮಾಡು ವುದಕ್ಕಾಗಿಯೇ ಎಂದು ಅವನಿಗೆ ತೋರುತ್ತಿತ್ತು. ಕೃಷ್ಣನಿಗೂ ಅಷ್ಟೆ. ಮಾಧವನ ಮಾತು ಕಥೆಯಲ್ಲೆಲ್ಲ ತನ್ನ ನಿಂದೆಯೋ ಅವನಿಗೆ ಕೇಳಿಸುತ್ತಿತ್ತು. ಉಳಿದ ಹುಡುಗರಿಗೂ ಈ ವಿಷಯ ತಿಳಿದು ಅವರಲ್ಲೂ ಎರಡು ಪಕ್ಷವಾಯಿತು. ಮಾಧವನ ಪಕ್ಷ, ಕೃಷ್ಣನ ಪಕ್ಷ. ಕೆಲವರು ಜಾಣರು ಎರಡು ಪಕ್ಷಕ್ಕೂ ಸೇರಿ ತಮಾಷೆಯನ್ನು ಸಂಪೂರ್ಣವಾಗಿ ಸವಿದರು. ಈ ಇಬ್ಬರು ಗೆಳೆಯರ ನಡು

ವಿನ ವೈಮನಸ್ಯ ಉಳಿದವರಿಗೆಲ್ಲ ಒಂದು ಬಗೆಯ ವಿನೋದವಾಯಿತು. ಹೊತ್ತಿ ಉರಿಯುತ್ತಿದ್ದ ಎರಡು ಹೃದಯಗಳು ಮಾತ್ರ ಬೇಸಗೆಯ ಬರಡು ಭೂಮಿಯಂತೆ ಹಸುರಿಲ್ಲದೆ ಗಾರಾಗಿ ಬಿರಿದುವು. ಸಂಗಮಿಸಿದ್ದ ಹೊಳೆ ಗಳೆರಡು ಮತ್ತೆ ಕವಲೊಡೆದು ಉರಿಮರಳಿನಲ್ಲಿ ಇಂಗತೊಡಗಿದುವು.

ಹದಿಮೂರು ವರ್ಷದ ಮಾಧವನ ಜೀವನದಲ್ಲಿ ಇದೊಂದು ಹೊಸ ಅನುಭವವಾಯಿತು. ಅವನ ಹಗಲುಗನಸುಗಳಲ್ಲಿ ಸದಾ ಜೊತೆಗಾರನಾಗಿ ಇರುತ್ತಿದ್ದ ಕೃಷ್ಣನಿಗೆ ಅಲ್ಲಿ ಈಗ ಸ್ಥಳವಿಲ್ಲ. ಮಾಧವ ಅಲ್ಲಿ ಈಗ ಏಕಾಂಗಿಯಾಗಿ ತಿರುಗುತ್ತಾನೆ, ನೆಲೆಯಿಲ್ಲದೆ ಅಲೆಯುತ್ತಾನೆ. ಒಮ್ಮೆ ಅಲ್ಲಿ ನಾರಾಯಣ, ಗೋವಿಂದ, ನಾಗಪ್ಪ ಶೆಟ್ಟಿ ಇವರಲ್ಲಿ ಯಾರೋ ಒಬ್ಬರು ಇವನ ಸಂಗಡ ಬರುವೆನೆನ್ನುತ್ತಾರೆ; ಎರಡು ಹೆಜ್ಜೆ ಬಂದು ಹಿಮ್ಮೆಟ್ಟಿ ಕಣ್ಮರೆಯಾಗುತ್ತಾರೆ. ಆ ಕನಸಿನ ಲೋಕದಲ್ಲಿ ಈಗ ಮೊದಲಿನ ಆ ಉತ್ತೇಜನವಿಲ್ಲ, ಸ್ಫೂರ್ತಿಯಿಲ್ಲ, ಸಮ್ಮೋಹನವಿಲ್ಲ. ಅಲ್ಲಿ ಆ ಬಂಗಾರದ ಸಿಂಹಾಸನವೇರಿದರೂ ಈಗ ಅಷ್ಟು ಆನಂದವಿಲ್ಲ. ಆ ದೊಡ್ಡ ಓಡ್ಡೋಲಗಶಾಲೆಯ ಪ್ರತಿಯೊಂದು ಕಂಭವೂ ಕೂಗಿ ಹೇಳುತ್ತದೆ: " ಇಲ್ಲಿ ಈಗ ಕೃಷ್ಣನಿಲ್ಲ, ಕೃಷ್ಣನೆಲ್ಲಿ ? ಎಲ್ಲಿ ? " ಅದಕ್ಕೆ ಉತ್ತರ ಹೇಳಲಾರದೆ ಮಾಧವ ಸಿಂಹಾಸನವನ್ನಿಳಿದು ಸಾಮಾನ್ಯ ಪ್ರಜೆಯಂತೆ ಅಲ್ಲಿ ಇಲ್ಲಿ ಸುತ್ತುತ್ತಾನೆ; ತೋಟದ ಬಳಿ ಸುಳಿಯುತ್ತಾನೆ; ಕೆರೆಯ ಹತ್ತಿರ ನಿಲ್ಲುತ್ತಾನೆ. ಗದ್ದೆಯಂಚಿನಲ್ಲಿ ಕೂತು ಆಕಾಶದ ಕಡೆ ನೋಡುತ್ತಾನೆ. ನೂರಾರು ಮೋಡಗಳು ಅಲ್ಲಿ ಬೆಳ್ಳಗೆ ತೆಳ್ಳಗೆ ಬಿಡಿಸಿಟ್ಟ ಹತ್ತಿಯಂತೆ ಹಗುರಾಗಿ ತೇಲುತ್ತವೆ. ಒಂದನ್ನೊಂದು ಅಟ್ಟಿಕೊಂಡು ಹೋಗುತ್ತವೆ. ಒಂದರೊಡ ನೊಂದು ಆಡುತ್ತವೆ, ಬಾಚಿ ತಬ್ಬಿಕೊಳ್ಳುತ್ತವೆ ; ಕಚಗುಳಿಯಿಟ್ಟು ದೂರ ಚಿಮ್ಮುತ್ತವೆ. 'ಬಾ, ಬಾ, ಹತ್ತಿರಕ್ಕೆ — ಬಾ' ಎಂದು ಒಂದನ್ನೊಂದು ಕರೆದು ಮೊರೆದು ಓಟದ ಪಂದ್ಯ ನಡೆಸುತ್ತವೆ. ನೋಡಿ ಮಾಧವನ ಕಣ್ಣು ಹನಿಗೂಡುತ್ತದೆ. ಜೀವನದ ಯಾವುದೋ ಒಂದು ರತ್ನ ಕಳೆದು ಹೋದಂತೆ, ತನ್ನ ಹೃದಯದ ಒಂದು ಚೂರೇ ಕತ್ತರಿಸಿ ಬಿದ್ದಂತೆ, ಬಾಳು ಅರಕೆಯಾದಂತೆ ಅವನಿಗೆ ಅನಿಸುತ್ತದೆ.

ಮಾಧವನ ಮನೆಯ ಉತ್ತರಕ್ಕೆ ಒಂದು ಕೆರೆ. ಕೆರೆಯ ಸುತ್ತಲೂ ತೆಂಗಿನ ಮರಗಳು, ಒಂದೆರಡು ಮಾವಿನ ಮರ, ಒಂದು ನಾಗರ ಬನ. ಸಂಜೆ

ಹೊತ್ತು ಅಲ್ಲಿ ಕುಳಿತು ಕನಸುಕಾಣುವುದು ಮಾಧವನ ವಾಡಿಕೆ. ಅಲ್ಲಿ ಕುಳಿತು ಕೊಂಡರೆ ಸುತ್ತುಮುತ್ತಲ ಗದ್ದೆ ಬಯಲು ಕಾಣುತ್ತದೆ. ಅಲ್ಲಲ್ಲಿ ತೆಂಗಿನ ಮರಗಳ ನಡುವೆ ಅಡಗಿ ನಿಂತ ಊರ ಮನೆಗಳು, ಗುಂಪು ನಿಂತ ಹಾಡಿಗಳು, ಕಬ್ಬಿನ ತೋಟ — ಇವು ಕಣ್ಣಿಗೆ ಬೀಳುತ್ತವೆ. ಇನ್ನು ಕೊಂಚ ಪೂರ್ವಕ್ಕೆ ದೃಷ್ಟಿ ಹರಿಸಿದರೆ ಸಾಲು ಸಾಲಾಗಿ ಮೈ ಚಾಚಿ ಮಲಗಿರುವ ಪಶ್ಚಿಮ ಘಟ್ಟ ಗಳ ಶ್ರೇಣಿ ಕಂಗೊಳಿಸುತ್ತದೆ. ಆ ಬೆಟ್ಟಗಳು ದೂರದಿಂದ ನೋಡಿದರೆ ಹಸು ಹಸುರಾಗಿ ನುಣ್ಣಗೆ ಕಾಣುತ್ತವೆ. ಮೋಡದ ಬಿಳಿ ಮರಿಗಳು ಅತ್ತಿತ್ತ ಸುತ್ತಾಡಿ ಬಂದು ಆ ಬೆಟ್ಟಗಳ ಮೇಲೆ ಕುಳಿತು ಆಡಿ ಮಲಗುತ್ತವೆ. ಪಡು ವಲ ಗಾಳಿ ಸುಯ್ಯೆಂದು ಬಂದು ಜೋಗುಳ ಹಾಡುತ್ತದೆ. ಹಕ್ಕಿಗಳು ಬಣ್ಣ ಬಣ್ಣದ ಗೆರೆಗಳಂತೆ ಆಕಾಶದಲ್ಲಿ ಈಜಿ ಹೋಗುತ್ತವೆ. ಸಂಜೆಯ ಹೊತ್ತಂತೂ ಆ ಬೆಟ್ಟಗಳಿಗೆ ಅಪೂರ್ವ ಕಾಂತಿ ಬರುತ್ತದೆ. ಕಾಯಿಸಿದ ಚಿನ್ನದ ಮುಲಾಮು ಹಾಕಿದಂತೆ ಇಲ್ಲಿ, ಮರದ ನೆರಳಿನ ಕಂಬಳಿಹೊದ್ದಂತೆ ಅಲ್ಲಿ ಬೆಟ್ಟಗಳು ಸೊಗಸು ತ್ತವೆ. ಅವುಗಳ ಮೇಲೆ ಮೋಡಗಳು ಬಣ್ಣಬಣ್ಣದ ಉಡುಪು ತೊಟ್ಟು ಮೇಳ ನೃತ್ಯ ನಡಸುತ್ತವೆ. ಇದನ್ನೆಲ್ಲ ನೋಡುತ್ತ ನೋಡುತ್ತ ಮಾಧವ ತನ್ನ ಒಂಟಿತನಕ್ಕೆ ಅಂಜಿ ನಡುಗುತ್ತಾನೆ. ಮನಸ್ಸಿನ ಗುಹೆಯ ಕತ್ತಲಲ್ಲಿ ತನ್ನ ಮುಖವೊಂದನ್ನೇ ಕಂಡು ವಿಹ್ವಲನಾಗುತ್ತಾನೆ. ಕೃಷ್ಣನನ್ನು ಎಷ್ಟು ಮರೆತೆ ನೆಂದರೂ ಮರೆಯಲಾರ. ಉಳಿದವರೊಡನೆ ಎಷ್ಟು ಬೆರೆವೆನೆಂದರೂ ಬೆರೆಯ ಲಾರ. ಭಟ್ಟರ ಮನೆಯ ಸುಬ್ರಹ್ಮಣ್ಯ ಬರುತ್ತಾನೆ, ಉಡುಪರ ಮನೆಯ ಶಾಮ ಬರುತ್ತಾನೆ, ಐತಾಳರ ಗಂಗಾಧರ ಬರುತ್ತಾನೆ; ಎಲ್ಲರೂ ಒಟ್ಟಿಗೆ ಸೇರುತ್ತಾರೆ., ಆಡುತ್ತಾರೆ, ನಗುತ್ತಾರೆ, ಕೇಕೆಹಾಕಿ ಕುಣಿಯುತ್ತಾರೆ. ಈ ಎಲ್ಲ ವಿನೋದದಲ್ಲಿ ಭಾಗವಹಿಸುತ್ತಿದ್ದರೂ ಮಾಧವನಿಗೆ ಅದರಲ್ಲಿ ಎಲ್ಲೆಲ್ಲೂ ಅಪ ಸ್ವರವೇ ಕೇಳುತ್ತದೆ; ಕೃಷ್ಣನ ಧ್ವನಿ ಬೆರೆಯದ ಆಟಪಾಠಗಳು ಅಪೂರ್ಣ ವಾದಂತೆ ಅನಿಸಿ ಮನಸ್ಸು ಖೇದಗೊಳ್ಳುತ್ತದೆ.

ಅದೋ ಅಲ್ಲೇ ಕೃಷ್ಣನ ಮನೆ. ಕೆರೆಯ ದಂಡೆಯಲ್ಲಿ ಕುಳಿತರೆ ಅವರ ಮನೆಯಂಗಳ ಕಾಣಿಸುತ್ತದೆ. ಮನೆಯ ಸುತ್ತಲೂ ಒಂದು ಪ್ರಾಕಾರ. ಒಳಗೆ ತೋಟ. ಮನೆಯ ಹೆಬ್ಬಾಗಿಲ ಮುಂದೆಯೇ ಒಂದು ದೊಡ್ಡ ಮಾವಿನ ಮರ. ಆ ಮರದಂಥ ಮರ ಆ ಊರಿನಲ್ಲೇ ಇಲ್ಲ. ಅದರ ಹಣ್ಣಿನ ರುಚಿಗೆ

ಸಾಟಿಯಾದದ್ದು ಇನ್ನೆಲ್ಲೂ ಸಿಗದು. ಅದರ ಕೆಳಗೇ ಮಾಧವ, ಕೃಷ್ಣ ಎಷ್ಟು ಸಲ ಆಟವಾಡಿರಬಹುದು: ಅವರ ನಗು, ಕೋಲಾಹಲ, ಅವರ ಸ್ನೇಹ, ಆದರ — ಇವನ್ನು ಆ ಮರದ ಎಲೆಎಲೆಯೂ ಬಲ್ಲದು. ಆ ಮರವನ್ನೇ ನೋಡುತ್ತ ಮಾಧವ ಎಷ್ಟೋ ಸಲ ಸಂಜೆ ಹೊತ್ತು ಕೆರೆಯಂಚಿನಲ್ಲಿ ಕುಳಿತು ಕೊಂಡಿರುತ್ತಾನೆ. ಆ ಮರ ತನ್ನ ಕೊಂಬೆಗಳನ್ನು ಬೀಸಿ ತನ್ನನ್ನು ಕರೆಯು ತ್ತಿರುವಂತೆ ಮಾಧವನಿಗೆ ತೋರುತ್ತದೆ. ಸಂಜೆಗತ್ತಲಾಗಿ ಸುತ್ತಮುತ್ತನ್ನೆಲ್ಲ ಮೌನ ಕವಿದಿದ್ದಾಗ ಆ ಮರದ ನೆಳಲಿನಿಂದ ಮಧುರ ಕಂಠವೊಂದು ಅಲೆಅಲೆ ಯಾಗಿ ಹರಿದು ಬಂದು ಮಾಧವನ ಮನಸ್ಸನ್ನು ತಟ್ಟುತ್ತದೆ. ಅಲ್ಲಿ ಕುಳಿತು ಕೃಷ್ಣ ಹಾಡುತ್ತಾನೆ. ಎಷ್ಟು ಮಧುರವಾದ ಕಂಠವದು! ಮಾಧವನ ಮನಸ್ಸು ಕರಗುತ್ತದೆ. ಕೃಷ್ಣ ಆಡಿದ ಮಾತಿನ ಕಹಿಯೆಲ್ಲ ಮರೆಯುತ್ತದೆ. ಅವನ ಸ್ನೇಹದ ನೆನಪು ಮರುಕೊಳಿಸುತ್ತದೆ. ಆ ನಾದದ ಅಲೆಯನ್ನು ಏರಿ ಅವನ ಮನಸ್ಸು ಕೃಷ್ಣನ ಮನೆಯ ಹತ್ತಿರ ಹತ್ತಿರ ಹೋಗುತ್ತದೆ. ಇದೇ ಪಾಗಾರ. ಇವೇ ತೊಡಮೆ. ಅದೇ ಮಾವಿನ ಮರ — ಹೌದು; ಆದರೆ ಮುಂದೆ ಹೋಗಲಾರ. ಹೋಗುವ ತ್ರಾಣ ಮನಸ್ಸಿಗಿಲ್ಲ. ಹಿಂದೆ ಬರುತ್ತಾನೆ. ಎಷ್ಟೋ ಸಲ ಹೀಗೆ ಅಲ್ಲಿಂದ ನಿಟ್ಟೋಟದಿಂದ ಓಡಿ, ಕೃಷ್ಣನ ಮನೆಯನ್ನು ಸೇರಿ "ಕೃಷ್ಣಾ, ಕೃಷ್ಣಾ, ಕೃಷ್ಣಾ, — ಬಾರೋ ಗೆಳೆಯ" ಎನ್ನಬೇಕೆಂದು ಮನಸ್ಸು ತವಕಿಸುತ್ತದೆ.

ಆದರೆ ಆದರಿಂದ ಎಷ್ಟು ಅವಮಾನ! ಅವನು ತನಗೆ ಅಂಥ ಮಾತು ಆಡಿದನಲ್ಲ. ಆ ಮಾತು ಅವನ ಬಾಯಿಂದ ಹೇಗೆ ಬಂದಿರಬಹುದು. ತಪ್ಪು ಅವನದು. ಆದರೂ ಅವನಿಗೇ ಎಷ್ಟು ಬಿಗುಮಾನ; ನನಗಾಗಿ ನನ್ನ ಸ್ನೇಹಕ್ಕಾಗಿ ಅವನು ನನ್ನನ್ನು ಮೊದಲು ಮಾತಾಡಿಸಬಾರದೇಕೆ? ಕೂಡದು, ಕೂಡದು - ಎಂದು ಅವನ ಮನಸ್ಸು ಕೂಗಿ ಹೇಳುತ್ತದೆ. ಆ ಹಾಡನ್ನು ಕುಳಿತು ಕೇಳ ಲಾರದೆ ಮನೆಗೆ ಓಡಿ ಹೋಗುತ್ತಾನೆ.

ಉಳಿದೆಲ್ಲ ಹುಡುಗರಲ್ಲೂ ಮಾಧವನಿಗೆ ಹೆಚ್ಚು ಆಪ್ತನಾದವನು ಜನಾರ್ದನ. ಜನಾರ್ದನ ಉಪಾಧ್ಯಾಯರಿಂದ ಏಟು ತಿನ್ನದ ದಿನವೇ ಇಲ್ಲ. ತಂಟೆಮಾಡುವ ಸ್ವಭಾವ ಅವನದಲ್ಲ. ಆದರೆ ಕ್ಲಾಸಿನಲ್ಲಿ ಏಕೋ ಮಂಕಾಗಿ ಕುಳಿತಿರುತ್ತಾನೆ. ಪ್ರಶ್ನೆ ಕೇಳಿದರೆ ಅದು ತನ್ನನ್ನು ಕುರಿತು ಕೇಳಿದ ಪ್ರಶ್ನೆ

ಎಂದು ಅವನಿಗೆ ತಿಳಿಯಬೇಕಾದರೆ ಒಂದೆರಡು ನಿಮಿಷವಾದರೂ ಬೇಕಾಗುತ್ತದೆ. ಆ ಪ್ರಶ್ನೆ ಅವನ ತಲೆಯನ್ನು ಭೇದಿಸಿ ಹೊಕ್ಕು ಅಲ್ಲಿ ಅದರ ಅರ್ಥ ಹೊಳೆಯಬೇಕಾದರೆ ಇನ್ನೂ ಒಂದೆರಡು ನಿಮಿಷ. ಉತ್ತರ ಗೊತ್ತಿದ್ದರೆ ಪರಿಷ್ಕಾರವಾಗಿ ಹೇಳಿಬಿಡುತ್ತಾನೆ. ಇಲ್ಲವಾದರೆ ' ನನಗೆ ಗೊತ್ತಿಲ್ಲ, ಸಾರ್ ' ಎನ್ನುತ್ತಾನೆ. ' ಏಕೆ ಗೊತ್ತಿಲ್ಲ ನಿನಗೆ ? ' ಎಂದರೆ ' ಓದಿಲ್ಲ ಸಾರ್, ಪುರುಸೊತ್ತು ಆಗಲಿಲ್ಲ ' ಎಂದು ಬಿಡುತ್ತಾನೆ. ಇದರಿಂದ ಉಪಾಧ್ಯಾಯರಿಗೆ ಸಿಟ್ಟು ಬರುತ್ತದೆ. ಕೈಯಲ್ಲಿ ಸಿದ್ಧವಾಗಿದ್ದ ಬೆತ್ತ ಅವನ ಕೈಮೇಲೋ ಮೈಮೇಲೋ ಬಂದು ಬಾರಿಸುತ್ತದೆ. ಕೆಲವು ಹುಡುಗರು ಏಟು ತಿಂದು ' ಅಯ್ಯಯ್ಯೋ ' ಎಂದು ಹುಯ್ಯಲಿಡುತ್ತಾರೆ. ಆದರೆ ಜನಾರ್ದನ ಹಾಗೇ ಅಲುಗಾಡದೆ ನಿಂತುಕೊಳ್ಳುತ್ತಾನೆ. ಉಪಾಧ್ಯಾಯರೇ ' ಕೂತುಕೋ ಅಪ್ರಯೋಜಕ ' ಎನ್ನುವ ತನಕ ಮತ್ತೆ ಕೂರಲಾರ. ಕುಳಿತ ಮೇಲೆ ಮತ್ತೆ ಯಥಾ ಪ್ರಕಾರ ಎಲ್ಲೋ ದೃಷ್ಟಿ, ಏನೋ ಯೋಚನೆ. ಆದರೆ ಜನಾರ್ದನನಲ್ಲಿ ಬುದ್ಧಿಗೇನೂ ಕೊರತೆಯಿರಲಿಲ್ಲ. ಎಲ್ಲ ವಿಷಯಗಳಲ್ಲೂ, ಮುಖ್ಯವಾಗಿ ಗಣಿತದಲ್ಲಿ ಅವನು ತನಗೆ ಇಷ್ಟ ಬಂದಾಗ ಅಸಾಧಾರಣ ನೈಪುಣ್ಯವನ್ನು ತೋರುತ್ತಾನೆ, ಆದರೆ ಹಾಗೆ ಇಷ್ಟ ಬರುವುದು ಮಾತ್ರ ಅಪರೂಪ. ಅಂಥ ಹುಡುಗ ಕ್ಲಾಸಿನಲ್ಲಿ ಎಲ್ಲರ ಗೇಲಿಗೂ ಬಲಿಯಾದರೆ ಆಶ್ಚರ್ಯವಲ್ಲ. ಮಾಧವನೂ ಆ ವಿನೋದದಲ್ಲಿ ಮೊದಮೊದಲು ಭಾಗಿಯಾಗುತ್ತಿದ್ದ. ಆದರೆ ಕ್ರಮೇಣ ಜನಾರ್ದನನ ನಿಜವಾದ ಯೋಗ್ಯತೆಯ ಅರಿವು ಮೂಡಿದಾಗ ಅವನಿಗೆ ನಾಚಿಕೆಯಾಯಿತು. ಪುಸ್ತಕಪ್ರಿಯರಾದ ಇಬ್ಬರಲ್ಲೂ ಕ್ರಮೇಣ ಸ್ನೇಹ ಬೆಳೆಯಿತು ; ತಾವು ಓದಿದ ಕಥೆಗಳನ್ನೋ, ಕಾದಂಬರಿಗಳನ್ನೋ ಕುರಿತು ಮಾತಾಡುತ್ತ ಅವರು ಎಷ್ಟೋ ಸಮಯ ಮೈ ಮರೆತು ಬಿಡುತ್ತಿದ್ದರು. ಒಂದು ದಿನ ಹೀಗೇ ವೆಂಕಟಾಚಾರ್ಯರ ' ದುರ್ಗೇಶ ನಂದಿನಿ ' ಯನ್ನು ಕುರಿತು ಮಾತಾಡುತ್ತ ಶಾಲೆಯ ಪಕ್ಕದ ಆಟದ ಬಯಲಿನಲ್ಲಿ ಮಾವಿನ ಮರದ ಕೆಳಗೆ ಕುಳಿತಿದ್ದಾಗ ಜನಾರ್ದನ ಏಕೋ ಮಾಧವ, ಕೃಷ್ಣ ಮೊದಲಿನ ಹಾಗೆ ಇಲ್ಲ ಕಣೋ ' ಎಂದ.

" ಅವನಿಗೆ ಅಹಂಕಾರ ಜಾಸ್ತಿಯಾಗಿದೆ ಅಷ್ಟೆ. ಅವನು ನಡೆಯುವ ಆ ಠೀವಿ ನೋಡು. "

" ಹಾಗಲ್ಲ ಮಾಧವ, ಅವನಲ್ಲಿ ಮೊದಲಿನ ಉಲ್ಲಾಸವಿಲ್ಲ. ನನ್ನ

ತರಹವೇ ಕೊಂಚ ಮಂಕು ಬಡಿದವನ ಹಾಗೆ ಇರುತ್ತಾನೆ. ಅಹಂಕಾರ ನನಗೇನೂ ಕಾಣಿಸಲಿಲ್ಲ."

"ನೀನು ಬಿಡು, ಧರ್ಮರಾಯ. ನಿನಗೆ ಯಾವದು ಕಾಣಿಸುವುದಿಲ್ಲ."

"ಧರ್ಮರಾಯನ ವಿಚಾರ ಹೇಳುವುದಾದರೆ ನನಗಂತೂ ಧರ್ಮರಾಯನೇ ಆಗಬೇಕೆಂದು ಆಶೆ. ಆದರೆ ಯಾವುದೂ ಕಾಣಿಸದೆ ಇರುವುದು ನನಗಲ್ಲ, ನಿನಗೆ."

"ಇದೇಕೋ ಏನೋ ಒಗಟಿನಂತೆ ಮಾತಾಡಲು ಶುರುಮಾಡಿದೆಯಲ್ಲೋ."

"ನಿನ್ನ ಮತ್ತು ಕೃಷ್ಣರ ಸಂಬಂಧವೇ ಒಂದು ಒಗಟಾಗಿದೆ, ಮಾರಾಯ ಮೊನ್ನೆ ಕೃಷ್ಣ ನನ್ನ ಹತ್ತಿರ ಏನು ಹೇಳುತ್ತಿದ್ದ ಬಲ್ಲೆಯಾ ?"

"ಏನು' ಏನು ?"

"ತನಗೂ ನಿನಗೂ ಮನಸ್ಸು ಕೆಟ್ಟದ್ದನ್ನು ಹೇಳಿಕೊಂಡು ಅತ್ತ"

"ಅತ್ತನೋ ನಕ್ಕನೋ ?"

"ಮಾಧವಾ, ನೀನು ಹೀಗೆ ದುಡುಕ ಬಾರದು. ಯಾವ ಮನುಷ್ಯರನ್ನೂ ಅಷ್ಟು ಬೇಗ ಅಳೆದು ತೂಗಿ ಬಿಸಾಡಿ ಬಿಡಲು ಆಗುವುದಿಲ್ಲ. ನನ್ನ ಮಾತಿನಲ್ಲಿ ನಂಬಿಕೆ ಇದೆಯೋ ?"

"ನಾನು ಇಲ್ಲ ಅಂತ ಹೇಳಿದೆನೆ ?"

"ಹಾಗಾದರೆ ಕೇಳು : ಕೃಷ್ಣ ನಿನ್ನ ಸ್ನೇಹ ಕಳೆದುಕೊಂಡು ಸುಖವಾಗಿಲ್ಲ, ಪಶ್ಚಾತ್ತಾಪ ಪಡುತ್ತಿದ್ದಾನೆ."

"ತಾನು ತಪ್ಪು ಮಾಡಿದ್ದಕ್ಕೆ ಪಶ್ಚಾತ್ತಾಪ ಪಡುತ್ತಿದ್ದಾನೆ-ನ್ಯಾಯವೇ."

"ಎಂದರೆ ನಿನ್ನ ತಪ್ಪೇನೂ ಇಲ್ಲ— ಅಲ್ಲವೇ ?"

"ನನ್ನದು ಯಾವ ತಪ್ಪು, ಹೇಳು ನೋಡೋಣ,"

"ನಿಮ್ಮಲ್ಲಿ ಜಗಳವಾಗುವ ಮೊದಲು ನೀವು ಬಹಳ ಸ್ನೇಹಿತರಾಗಿದ್ದಿರಿ ಅಲ್ಲವೇ ?"

"ಹೌದು ಜನಾರ್ದನ. ನಾನಂತೂ ನಮ್ಮ ಸ್ನೇಹಕ್ಕೆ ನಾಶವೇ ಇಲ್ಲ ಅಂತಿದ್ದೆ"

" ಆದರೆ ನಿನ್ನ ಸ್ನೇಹಕ್ಕಿಂತ ನಿನ್ನ ಅಹಂಕಾರವೇ ಜಾಸ್ತಿಯಾಯಿತು. ಅವನು ಮಾಡಿದ ಒಂದು ತಪ್ಪನ್ನು ನಿನಗೆ ಕ್ಷಮಿಸಲು, ಮರೆತು ಬಿಡಲು ಆಗಲಿಲ್ಲ. "

" ಆ ಕೆಲಸ ತಪ್ಪುಮಾಡಿದ ಅವನಿಗೇ ಸುಲಭವಾಗಿತ್ತಲ್ಲ; ಅವನೇಕೆ ನನ್ನನ್ನು ಮಾತಾಡಿಸಲಿಲ್ಲ ? ಅದು ತಪ್ಪಲ್ಲವೋ ? "

" ನಿನ್ನ ದೃಷ್ಟಿಯಿಂದಲೇ ನೋಡೋಣ. ಅವನ ಮಾತು ಈಗ ಬಿಟ್ಟು ಬಿಡು. ಅಂಥ ಸ್ನೇಹ ಹೇಗೆ ಅಮರವಾದೀತು, ಹೇಳು ನೋಡೋಣ. "

ಈ ಮಾತಿಗೆ ಮಾಧವನಿಗೆ ಉತ್ತರ ಹೊಳೆಯಲಿಲ್ಲ. ಜನಾರ್ದನನ ಮಾತು ನಿಜವಲ್ಲವೇ ? ತನ್ನ ಗೆಳೆಯನಿಗಾಗಿ ತನ್ನ ಅಹಂಕಾರವನ್ನು ಮರೆಯದೆ ಹೋದರೆ ಅದೆಂಥ ಸ್ನೇಹ ? ನಿಜ ಈ ಮಂಕು ಜನಾರ್ದನ ಎಷ್ಟು ಯೋಚನೆ ಮಾಡುತ್ತಾನೆ! ಅದಕ್ಕೇ ಬಹುಶಃ ಅವನಿಗೆ ಪಾಠ ಓದಲು ಸಮಯ ಸಿಕ್ಕುವುದಿಲ್ಲ ಅಂತ ಕಾಣುತ್ತದೆ.

" ಹೌದು ಜನಾರ್ದನ, ನಿನ್ನ ಮಾತು ಸರಿ. ಸುಮ್ಮನೆ ದ್ವೇಷ ಬೆಳೆಸಿ ಕೊಂಡು ಹೋಗಿ ಏನು ಪ್ರಯೋಜನ ? ಇಬ್ಬರ ಮನಸ್ಸು ಕೆಡುತ್ತದೆ ಅಷ್ಟೆ. ಇಬ್ಬರಿಗೂ ಅಸಮಾಧಾನ, ಅಸುಖ. ಈ ಮನಸ್ತಾಪದಿಂದ ನಾನಾದರೂ ಸಂತೋಷದಿಂದ ಇದ್ದೆನೆಂದು ತಿಳಿದೆಯಾ ? ಪ್ರತಿ ದಿನವೂ ಕೃಷ್ಣನದೇ ಯೋಚನೆ. ಹೋಗಿ ಮಾತಾಡಿಸಿ ಬಿಡೋಣ ಎಂದುಕೊಳ್ಳುತ್ತಾ ಹಾಗೆ ಮಾಡುವ ಧೈರ್ಯವಿಲ್ಲದೆ ದಿನ ಕಳೆಯುತ್ತ ಬರುತ್ತೇನೆ. ಕೃಷ್ಣನ ವಿಚಾರ ಎಷ್ಟು ಕೆಟ್ಟ ಮಾತು ಕೇಳಲಿ, ಅವನನ್ನು ನಾನು ಎಷ್ಟು ಬೇಕಾದರೆ ಬಯ್ಯಲಿ, ಒಳಗೊಳಗೆ ಅವನಿಗಾಗಿ ಮಿಡುಕುತ್ತಲೇ ಇದ್ದೇನೆ. "

" ಕೃಷ್ಣನೂ ಹಾಗೆಯೇ ಹೇಳಿದ: ಈಗ ಎರಡು ತಿಂಗಳಿಂದಲೂ ಅವನು ನಿನ್ನನ್ನು ಮಾತಾಡಿಸಲು ಪ್ರಯತ್ನಿಸುತ್ತಿದ್ದನಂತೆ. ಮಾಧವಾ, ನೀನು ಬುದ್ಧಿವಂತ. ಯೋಚನೆ ಮಾಡು. ಈ ಮಂಕನ ಮಾತಿನಲ್ಲೂ ಕೊಂಚ ಹಿತವಾದದ್ದು ಇರಬಹುದು. "

ಕೊಂಚವೇನು, ಹಿತವಾದದ್ದು ಬಹಳವೇ ಇದೆ ಎಂದು ಮಾಧವನಿಗೆ ತೋರಿತು. ಜನಾರ್ದನನ ಮಾತಿನ ರೀತಿಯನ್ನೂ ಅದರಲ್ಲಿ ಕಂಡು ಬಂದ ಉನ್ನತ ಮನಸ್ಸನ್ನೂ ಅರಿತು ಮಾಧವ ಬೆರಗಾದ. ಆ ಮೇಲೆ ಪ್ರತಿ ದಿನವೂ

ಅವನ ಮಾತೇ ಇವನ ಮನಸ್ಸಿನಲ್ಲಿ ನಿನದಿಸತೊಡಗಿತು. ಕೃಷ್ಣನ ವಿಷಯ ದಲ್ಲಿ ಮನಸ್ಸಿನಲ್ಲಿ ಬೆಳೆದಿದ್ದ ದುರ್ಭಾವನೆಯೆಲ್ಲ ಕೊಂಚ ಕೊಂಚವಾಗಿ ತಗ್ಗ ತೊಡಗಿತು. ಹೀಗೆಲ್ಲ ಆಗುವುದಕ್ಕೆ ಏನು ಕಾರಣ ಎಂದು ಎಳೆಯ ಮಾಧವ ಬಹಳವಾಗಿ ಯೋಚಿಸಿದ. ಕಾರಣ ಅವನಿಗೆ ಹೊಳೆಯಲಿಲ್ಲ. ಆದರೆ ಈಗ ತಾನು ಕೃಷ್ಣನೊಡನೆ ರಾಜಿಮಾಡಿಕೊಂಡರೆ ಅದು ತನಗೆ ಅವಮಾನವಲ್ಲ ಎಂಬ ಭಾವನೆ ಮಾತ್ರ ದೃಢಪಡತೊಡಗಿತು.

ಇಷ್ಟು ದಿನಗಳೂ ಮನೆಯಿಂದ ಶಾಲೆಗೆ, ಶಾಲೆಯಿಂದ ಮನೆಗೆ ಬರುತ್ತಾ ಇಬ್ಬರಲ್ಲೂ ಯಾರು ಬೇಗ ತಮ್ಮ ಗುರಿಯನ್ನು ಮುಟ್ಟುತ್ತಾರೆಂಬುದರಲ್ಲೇ ಸ್ಪರ್ಧೆ ನಡೆಯುತ್ತಿತ್ತು. ಈಗ ಹೇಗಾದರೂ ಮಾಡಿ ಒಬ್ಬರನ್ನೊಬ್ಬರು ಮಾತಾಡಿಸಬೇಕೆಂಬ ಆಶೆ ಇಬ್ಬರಲ್ಲೂ ಮೊಳೆಯಿತು. ಅದೇ ಉದ್ದೇಶದಿಂದ ಇಬ್ಬರೂ ಬಹಳ ಹತ್ತಿರ ಹತ್ತಿರ ಬರುವರು. ಆದರೆ ಒಬ್ಬನ ಮುಖವನ್ನು ಎದುರಿಸುವ ಧೈರ್ಯ ಇನ್ನೊಬ್ಬನಿಗಿಲ್ಲ. ಹತ್ತಿರ ಬರುವ ತನಕ ಮನಸ್ಸಿ ನಲ್ಲಿ ಮೊರೆಯುತ್ತಿದ್ದ ಮಾತು ಹತ್ತಿರ ಬಂದಾಗ ಬತ್ತಿ ಹೋಗುತ್ತಿತ್ತು. ಆಗಾಗ ಮಾಧವನ ದೃಷ್ಟಿ ಕೃಷ್ಣನ ದೃಷ್ಟಿಯನ್ನು ಸಂಧಿಸಿದಾಗ ಅವನ ಕಣ್ಣುಗಳಲ್ಲಿ ಉಕ್ಕುತ್ತಿದ್ದ ತವಕ, ಹೊರ ಹೊಮ್ಮಲು ಬಯಸುತ್ತಿದ್ದ ಸ್ನೇಹ – ಇವುಗಳನ್ನು ಕಂಡು ಮಾಧವನ ಹೃದಯ ಹಸಿಯಾಗುತ್ತಿತ್ತು. ಬೇಸಗೆ ಕಾಲ ಕಳೆದು ಮೋಡ ಆಕಾಶದಲ್ಲಿ ದಟ್ಟವಾದಂತೆ ಮನಸ್ಸು ತುಂಬುತ್ತಿತ್ತು. ಆದರೆ ಮಳೆ ತರುವ ತಂಗಾಳಿ ಇನ್ನೂ ಬೀಸದಾಯಿತು. ಗಾರುಗೊಂಡ ನೆಲ ಗಾರಾಗಿಯೇ ಇತ್ತು. ಹನಿಗೂಡಬಲ್ಲ ಮೋಡ ಇನ್ನೂ ಚೆದರಿ ಬೆಳ್ಳಗಾಗಿ ನೆಲವನ್ನು ಬಿಟ್ಟು ಮತ್ತೂ ಮತ್ತೂ ಮೇಲಕ್ಕೇರುತ್ತಿತ್ತು.

ಮಾಧವನಲ್ಲಿ ಓದುವ ಆಸೆ ಬಹಳ ಬೇಗ ಬೆಳೆದಿತ್ತು. ಅವನ ಮನೆ ಯಲ್ಲೂ ಬೇಕಾದಷ್ಟು ಪುಸ್ತಕಗಳಿದ್ದವು. ಅವುಗಳನ್ನೆಲ್ಲ ಮುಗಿಸಿ ಅವನು ಸದಾ ಪುಸ್ತಕಗಳ ಅನ್ವೇಷಣೆಯಲ್ಲೇ ನಿರತನಾಗುತ್ತಿದ್ದ. ಕೈಗೆ ಸಿಕ್ಕುವ ಯಾವ ಪುಸ್ತಕವನ್ನೂ ಓದದೆ ಬಿಡಲಾರ. ಕಥೆ, ಕಾದಂಬರಿ, ಪ್ರಬಂಧ, ನೀತಿಗ್ರಂಥ, ಮಾಸಪತ್ರಿಕೆಗಳು — ಏನು ಸಿಕ್ಕಲಿ, ಓದುತ್ತಿದ್ದ. ಕೃಷ್ಣನ ತಂದೆ ನಾರಾಯಣ ರಾಯರ ಮನೆಯಲ್ಲೂ ಅನೇಕ ಪುಸ್ತಕಗಳಿದ್ದವು. ಅವುಗಳಿಗಾಗಿ ಅವನು ಅಲ್ಲಿಗೆ ಆಗಾಗ ಹೋಗುತ್ತಲೇ ಇದ್ದ. ಇವನು ಹೋದಾಗ ಈಗೀಗ ಕೃಷ್ಣ

ಕಣ್ಣಿಗೆ ಬೀಳುತ್ತಿಲ್ಲ. ಆದರೆ ಮೊದಲು ಇಬ್ಬರೂ ಕೂಡಿಯೇ ಪುಸ್ತಕಗಳ ಕೋಣೆಗೆ ಧಾಳಿಯಿಟ್ಟು ಅಲ್ಲಿ ಗಂಟೆಗಟ್ಟಲೆ ಕಳೆಯುತ್ತಿದ್ದರು. ಈಗ ಮಾಧವ ನೊಬ್ಬನೇ ಅಲ್ಲಿ ನುಗ್ಗಿ ತನಗೆ ಬೇಕಾದ ಪುಸ್ತಕಗಳನ್ನು ಹುಡುಕಿಕೊಂಡು ಹೋಗುತ್ತಿದ್ದ. ಅಲ್ಲಿಗೆ ಹೋದಾಗಲಾದರೂ ಕೃಷ್ಣ ಸಿಕ್ಕಿದ್ದರೆ, ಆ ಮಾವಿನ ಮರದ ಕೆಳಗೋ, ಆ ಪುಸ್ತಗಳ ಕೋಣೆಯ ಮೂಲೆಯಲ್ಲೋ, ಅವನ ಮನೆ ಮುಂದಿನ ಗದ್ದೆಯ ಅಂಚಿನಲ್ಲೋ ಅವನು ಕಾಣಿಸಿದ್ದರೆ ಅವನನ್ನು ಮಾತಾಡಿಸ ಬಹುದಿತ್ತಲ್ಲ– ಎಂದುಕೊಳ್ಳುತ್ತಿದ್ದ ಮಾಧವ. ಈಗಲೂ ಕೂಡ ಅವನು ಅಲ್ಲೆಲ್ಲೂ ಕಾಣಿಸದಿದ್ದನ್ನು ಕಂಡು ಮಾಧವನ ಮನಸ್ಸಿನಲ್ಲಿ ಮತ್ತೆ ಸಂದೇಹ ತಲೆ ಯೆತ್ತುತ್ತಿತ್ತು : ಕೃಷ್ಣನು ನಿಜವಾಗಿಯೂ ತನ್ನ ಸ್ನೇಹ ಬಯಸುವನೇ ? ಜನಾರ್ದನನ ಮಾತು ಸುಳ್ಳಿರಬಹುದೇ ? ಅದೇ ಮೊನ್ನೆ ತನ್ನನ್ನು ಕಂಡ ಕೂಡಲೇ ಅವನು ಏಕೆ ಹಾಗೆ ಹಿತ್ತಲಿಗೆ ಓಡಿ ಹೋದ ? ನಿನ್ನೆ ಅವನನ್ನು ಸಂಧಿಸಿ ಮಾತಾಡೋಣ ಅಂತ ತಾನು ಬೇಗ ಬೇಗ ಹೆಜ್ಜೆ ಹಾಕುತ್ತ ಮನೆಯ ಕಡೆ ಬಂದರೆ ಅವನೇಕೆ ಹಾಗೆ ಓಡಿ ಓಡಿ ಹೋಗತೊಡಗಿದ ? ಇಷ್ಟು ಯತ್ನಿಸಿಯೂ ಕೃಷ್ಣನನ್ನು ತನಗೆ ಮಾತಾಡಿಸಲು ಸಾಧ್ಯವಾಗದೆ ಇದ್ದದ್ದು ಕಂಡು ಮಾಧವನ ಮನಸ್ಸು ರೋಸಿ ಹೋಯಿತು. ಸಿಟ್ಟು ಬಂತು. ತನ್ನ ಮೇಲೆ ತನಗೆ ಬಂದ ಸಿಟ್ಟು ಕೃಷ್ಣನ ಮೇಲೆ ತಿರುಗಿ ಮತ್ತೆ ಮನಸ್ಸಿನೊಳಗೆ ಹಾಗಲಕಾಯಿಯ ರಸ ಇಳಿಯತೊಡಗಿತು.

ಈ ನಡುವೆ ಶಾಲೆಯ ವಾರ್ಷಿಕೋತ್ಸವದ ದಿನ ಬಂತು. ಹುಡುಗರೆಲ್ಲರ ಉಲ್ಲಾಸ ಆ ದಿನ ಕೇಳಬೇಡ. ಪಂದ್ಯಗಳಲ್ಲಿ ಗೆದ್ದವರ ಹುಮ್ಮಸ್ಸಂತೂ ಹೇಳಿ ತೀರದು. ಬಹುಮಾನ ಬರುವುದೆಂಬ ಕನಸಿನಲ್ಲಿ ಅವರು ಪ್ರಪಂಚವನ್ನೇ ಮರೆತಿದ್ದರು. ಅದೇ ಮೊದಲ ಬಾರಿಗೆ ಆ ಮಿಡ್ಲ್‌ಸ್ಕೂಲಿನಲ್ಲಿ ಈ ಬಗೆಯ ಉತ್ಸವ ನಡೆಯುತ್ತಿದ್ದುದು. ಆಗಲೇ ಮಿಡ್ಲ್‌ಸ್ಕೂಲಿನ ಕೊನೆಯ ತರಗತಿಗೆ ಬಂದಿದ್ದ ಕೃಷ್ಣ ಮಾಧವರು ಅಂಥ ಉತ್ಸವವನ್ನು ಅದೇ ಮೊದಲು ನೋಡು ತ್ತಿದ್ದುದು. ಶಾಲೆಯ ಅಂಗಳದಲ್ಲಿ ಚಪ್ಪರ ಹಾಕಿ ತೋರಣ ಕಟ್ಟಿದ್ದರು. ಬೆಂಚುಗಳ ಒಂದು ವೇದಿಕೆ ಸಿದ್ಧವಾಗಿತ್ತು. ಅದರ ಮೇಲೆ ಮೇಜು - ಕುರ್ಚಿ. ಶಾಲೆಯ ಮುಖ್ಯೋಪಾಧ್ಯಾಯರೂ ಜಿಲ್ಲೆಯ ವಿದ್ಯಾಧಿಕಾರಿಗಳೂ ವೇದಿಕೆಯ ಮೇಲೆ ಮಂಡಿಸಿದ್ದರು. ಮಾಧವನಿಗೆ ಅನೇಕ ಬಹುಮಾನಗಳು ಬಂದಿದ್ದುವು.

ಇಂಗ್ಲಿಷ್, ಕನ್ನಡ ಮುಂತಾದುವುಗಳಲ್ಲಿ ಎಲ್ಲರಿಗಿಂತ ಹೆಚ್ಚು ಮಾರ್ಕು ಪಡೆದದ್ದಕ್ಕೆ; ಶಾಲೆಯ ಕೈಬರೆಹದ ಪತ್ರಿಕೆಯಲ್ಲಿ ಬಂದ ಅತ್ಯುತ್ತಮವಾದ ಪದ್ಯಕ್ಕೆ, ಕಥೆಗೆ; ಒಟ್ಟಿನಲ್ಲಿ ಎಲ್ಲರಿಗಿಂತ ಹೆಚ್ಚು ನಂಬರು ಪಡೆದದ್ದಕ್ಕೆ. ಮಾಧವನಲ್ಲಿ ಸ್ವಾಭಾವಿಕವಾಗಿದ್ದ ಅಹಂಕಾರ ಆ ದಿನ ತನ್ನ ಕೃತಕೃತ್ಯತೆಯನ್ನು ಕಂಡು ಹಿಗ್ಗಿತು. ಕೃಷ್ಣನಿಗೂ ಒಂದೆರಡು ಬಹುಮಾನಗಳು ಬಂದಿದ್ದುವು — ಪದ್ಯ ವಾಚನಕ್ಕೆ ಮತ್ತು ಮುತ್ತಿನಂಥ ಹಸ್ತಾಕ್ಷರಕ್ಕೆ. ವಿವಿಧ ಆಟಗಳಲ್ಲಿ ಅನೇಕರು ಬಹುಮಾನಗಳನ್ನು ಹೊಂದಿದ್ದರು. ಆದರೆ ಬಹುಮಾನ ಪಡೆದವರಲ್ಲೆಲ್ಲ 'ಹೀರೋ' ಮಾಧವನೇ. ಹತ್ತಾರು ಸಲ ಅವನು ವೇದಿಕೆ ಹತ್ತಿ ಇಳಿದ; ಹೆಸರು ಕೂಗಿದಾಗಲೆಲ್ಲ ನಾಚಿಕೆಯಿಂದ ಕೆಂಪೇರಿದ; ಹತ್ತಿ ಇಳಿಯುವಾಗ ಒಂದೆರಡು ಸಲ ಕಾಲೂ ಜಾರಿತು. ಆದರೆ ಚಪ್ಪಾಳೆಗಳ ತಾಳಕ್ಕೆ ಅವನ ಮನಸ್ಸು ಕುಣಿಯುತ್ತಿತ್ತು. ಎಲ್ಲರ ಕಣ್ಣಿಗೂ ಬೀಳುವಂಥ ವ್ಯಕ್ತಿ ತಾನು, ತಾನು ಸಾಮಾನ್ಯನಲ್ಲ. ತನ್ನಲ್ಲಿ ಏನೋ ಒಂದು ವಿಶೇಷವುಂಟು ಎಂಬ ಅವನ ಅಂತರಂಗದ ಭಾವನೆಗೆ ಇಲ್ಲಿ ಬಹಿರಂಗವಾದ ರುಜುವಾತು ದೊರೆಯಿತು. ಇದರಿಂದ ಅವನ ಮನಸ್ಸು ತೃಪ್ತವಾಯಿತು; ಉದಾರವಾಯಿತು. ಒಂದು ಸಲ ಬಹುಮಾನ ತೆಗೆದು ಕೊಂಡ ಮೇಲೆ ವೇದಿಕೆಯ ಮೇಲೆ ನಿಂತು ಮುಂದಿನ ಸಾಲಿನಲ್ಲಿ ಕುಳಿತಿದ್ದ ಕೃಷ್ಣನನ್ನು ನೋಡಿದ: ಅವನ ಮುಖದಲ್ಲಿ ಸಂತೋಷ ಉಕ್ಕುತ್ತಿತ್ತು; ಅವನೂ ಕೂಡ ಎಲ್ಲರ ಜೊತೆಗೆ ಚಪ್ಪಾಳೆ ತಟ್ಟುತ್ತಿದ್ದ. ನೋಡಿ ಮಾಧವನಿಗೆ ಬಹಳ ಸಂತೋಷವಾಯಿತು. ಕೃಷ್ಣನ ಅಂತರಂಗದಲ್ಲಿ ತನ್ನ ವಿಷಯದಲ್ಲಿ ಇನ್ನೂ ಸ್ನೇಹವಿದೆ ಎಂದು ಅನಿಸಿತು.

ಉತ್ಸವವೆಲ್ಲ ಮುಗಿಯುವಾಗ ಆಗಲೇ ಏಳು ಗಂಟೆಯಾಗಿತ್ತು; ಮಾರ್ಚ್ ತಿಂಗಳ ಕೊನೆಯ ಭಾಗ ಆಗ. ಕತ್ತಲು ಆಗಲೇ ಕವಿದಿತ್ತು. ಅಲ್ಲಿಂದ ನಾಲ್ಕು ಮೈಲಿ ದೂರ ಮಾಧವನ ಮನೆ. ಹೋಗಬೇಕು. ಉಪ್ಪುಂದಕ್ಕೆ, ಅಂಬಾಗಿಲಿಗೆ ಹೋಗುವ ಹುಡುಗರು ಬಹಳ ಜನವಿದ್ದರು. ಅಲ್ಲಿವರೆಗೆ ಹೆದರಿಕೆ ಇಲ್ಲ. ಆ ಮೇಲೆ ಮುಂದೆ ಹೊಸಕೋಟೆಯ ತನಕ ಹೋಗುವವರು ಇಬ್ಬರೇ — ಮಾಧವ, ಕೃಷ್ಣ. ನಡುವೆ ಒಂದೆರಡು ದಟ್ಟವಾದ ಹಾಡಿಗಳೂ ಇದ್ದುವು. ಅಷ್ಟು ಹೊತ್ತಿಗಾಗಲೇ ಗದ್ದೆಗಳ ನಡುವಣ ದಾರಿ ನಿರ್ಜನವಾಗಿಬಿಡುತ್ತಿತ್ತು. ಗದ್ದೆಗಳನ್ನು ಹಾದು ಹೋಗುವ ಕಾಲುದಾರಿಯಲ್ಲಿ ನಡೆಯಲು ಕಾಲಿಗೆ ಅನು

ಭವ ಬೇಕು. ಆ ಅನುಭವ ಇಬ್ಬರಿಗೂ ಇದ್ದದ್ದರಿಂದ ಏನೂ ತೊಂದರೆ ಆಗುವ ಹಾಗಿಲ್ಲ. ಅಲ್ಲಲ್ಲಿ ದಾರಿಯಲ್ಲಿ ಭೂತಗಳ ಕಟ್ಟೆಗಳು ಸಿಕ್ಕುತ್ತವೆ — ನಿಜ. ಆದರೆ ಜನಿವಾರವೊಂದಿದ್ದರೆ, ಕೊನೆಗೆ ಗಾಯತ್ರಿ ಜಪ ಅಷ್ಟು ಬಂದರೆ ಭೀತಿಯಿಲ್ಲ. ಜನಿವಾರವನ್ನು ಬಲವಾಗಿ ಕೈಯಲ್ಲಿ ಹಿಡಿದು ಗಾಯತ್ರಿ ಜಪ ಮಾಡಲು ಶುರುಮಾಡಿ ಬಿಟ್ಟರೆ ಸಾಕು; ಭೂತ ಹತ್ತಿರ ಬಂದರೂ ಮೈ ಸೋಂಕಲಾರದು: ಅದರಿಂದ ಬಾಧೆಯಿಲ್ಲ. ಈ ಗುಟ್ಟು ಮಾಧವನೂ ಬಲ್ಲ, ಕೃಷ್ಣನೂ ಬಲ್ಲ.

ದಾರಿಯುದ್ದಕ್ಕೂ ಹುಡುಗರು ಮಾತಾಡುತ್ತಲೇ ಇದ್ದರು. ಜಗತ್ತಿನಲ್ಲಿ ಪ್ರತಿಯೊಂದೂ ವಿಚಿತ್ರವಾಗಿಯೇ ಕಾಣುವ ಬಾಲ್ಯದಲ್ಲಿ ವಿಷಯಕ್ಕೆ ಕೊರತೆಯಿಲ್ಲ. ಇನ್ನೇನಿಲ್ಲದಿದ್ದರೂ ಅಧ್ಯಾಪಕರಿಲ್ಲವೇ? ಒಬ್ಬೊಬ್ಬ ಅಧ್ಯಾಪಕನ ವಿಷಯ ಎಷ್ಟು ಮಾತಾಡಿದರೆ ತಾನೇ ಮುಗಿದೀತು? ಅಲ್ಲದೆ ವಾರ್ಷಿಕೋತ್ಸವ ಅದೇತಾನೇ ನಡೆದಿತ್ತಲ್ಲ! ಮುಖ್ಯೋಪಾಧ್ಯಾಯರು ವೇದಿಕೆಯ ಮೇಲೆ ನಿಂತು ಮಾತಾಡುವಾಗ ಗಾಬರಿಗೊಂಡದ್ದು, ಅಧ್ಯಕ್ಷರು ಕನ್ನಡದಲ್ಲಿ ಮಾತನಾಡ ಹೊರಟು ತಬ್ಬಿಬ್ಬಾಗಿ ಮಧ್ಯದಲ್ಲಿ ಇಂಗ್ಲಿಷ್ ಶಬ್ದಗಳಿಗೆ ಶರಣು ಹೋದದ್ದು, ಸಭೆ ನಡೆಯುತ್ತಿದ್ದಾಗಲೇ ಜನಾರ್ದನ ಕಣ್ಣು ಮುಚ್ಚಿ ನಿದ್ದೆ ಮಾಡುತ್ತಿದ್ದದ್ದು, ಶಾಲೆಯ ಜವಾನ ಈರ ಆ ದಿನ ಜರಿಯಂಚಿನ ರುಮಾಲು ಸುತ್ತಿಕೊಂಡು ಬಭ್ರುವಾಹನನ ಮಂತ್ರಿಯಂತೆ ಕಂಡದ್ದು, ಕಿರಿಸ್ತಾನರ ಆ ಹುಡಗಿ ಲಿಲ್ಲಿ ಬಹುಮಾನ ತೆಗೆದು ಕೊಳ್ಳಲು ಹೋಗುವಾಗ ಅವಸರದಲ್ಲಿ ಎಡವಿ ಬಿದ್ದದ್ದು—ಈ ಎಲ್ಲ ವಿಷಯಗಳನ್ನೂ ಕುರಿತು ಚರ್ಚಿಸಿದ್ದೂ ಚರ್ಚಿಸಿದ್ದೇ, ನಕ್ಕದ್ದೂ ನಕ್ಕದ್ದೇ.

ಉಪ್ಪುಂದದ ಹೊಳೆ ಬಂದಾಗಲೇ ಎಲ್ಲರಿಗೂ ಎಚ್ಚರ. ಹೊಳೆ ದಾಟಿಸುವ ಸಾಬಿ ಸಯ್ಯದ್ ತಯ್ಯಾರಾಗೇ ಇದ್ದ, ಹುಡುಗರೆಲ್ಲ ದೋಣಿಯೇರಿದರು. ತನ್ನ ಸಂತೋಷಭರದಲ್ಲಿ ಮಾಧವ ಮಾತಾಡುತ್ತಲೇ ಇದ್ದ. ದೋಣಿ ಹೊಳೆಯ ಏರುಅಲೆಗಳ ಮೇಲೆ ತೊಟ್ಟಿಲಂತೆ ತೂಗುತ್ತ ಸಾಗಿತ್ತು. ಹಿಂದೆ ನಿಂತು ಸಾಬಿ ಗಳುವನ್ನು ಹೊಳೆಯ ತಳಕ್ಕೆ ಅದುಮಿ ಮಾಟುತ್ತಿದ್ದ. ದೋಣಿ ನೀರನ್ನು ಬಗೆದುಕೊಂಡು ಸುಯ್ಯೆಂದು ಮುನ್ನುಗ್ಗುತ್ತಿತ್ತು. ದೋಣಿ ಅಗೆದ ನೀರಿನ ಹಳ್ಳವೆಲ್ಲ ನೀಲಿ ನೀಲಿಯಾಗಿ ಕರಗಿದ ಇಂದ್ರನೀಲದಂತೆ ಹೊಳೆಯುತ್ತಿತ್ತು. ದಟ್ಟವಾದ ಕತ್ತಲು. ಆಕಾಶದಲ್ಲಿ ಮಿನುಗುತ್ತಿದ್ದ ಅಸಂಖ್ಯ ನಕ್ಷತ್ರಗಳು ನೀರಿನಲ್ಲಿ ಅಲ್ಲಲ್ಲಿ ಪ್ರತಿಬಿಂಬಿಸುತ್ತಿದ್ದವು. ಕೆಳಗೆ ಬಗ್ಗಿ ನೋಡಿದರೆ ನೀರಿನೊ

ಒಂದು ವರ್ಷದಿಂದ ಎದ್ದು ನಿಂತಿದ್ದ ಗೋಡೆ ಕುಸಿದು ಬಿತ್ತು. ಕಟ್ಟೆಯೊಡೆದ ನದಿಯ ಎರಡು ವೈಗಳಂತೆ ಇಬ್ಬರ ಮನಸ್ಸುಗಳೂ ಭೋರೆಂದು ಮೊರೆದು ಒಂದಾದವು. ಮನಸ್ಸಿನ ಮೇಲೆ ತಾನು ಹೊತ್ತು ತಿರುಗುತ್ತಿದ್ದ ಬೆಟ್ಟವೊಂದು ಕೆಳಗುರುಳಿದಂತಾಯಿತು; ಮನಸ್ಸು ಈಗ ಹಗುರವಾಯಿತು, ತನ್ನ ನವಿಲು ಗರಿಗಳನ್ನು ಬಿಚ್ಚಿ ಆಡಿತು. ಇಬ್ಬರೂ ಹತ್ತಿರ ಹತ್ತಿರ ಬಂದರು. ಒಬ್ಬನ ಕೈ ಇನ್ನೊಬ್ಬನ ಕೈಯನ್ನು ಸೇರಿತು. ಇಬ್ಬರ ಕಣ್ಣುಗಳೂ ಹನಿಗೂಡಿದುವು, ಮಾತು ಹೊರಡಲಿಲ್ಲ. ಮೋಡ ಚೆದರಿತು. ಗಾಳಿ ಹಿತವಾಗಿ ಬೀಸಿತು. ಪೂರ್ವದಿಕ್ಕಿನಲ್ಲಿ ದಿಗಂತದ ಹತ್ತಿರ ಬೆಳ್ಳಿಯ ನೊರೆ ಉಕ್ಕಿತು. ಮೋಡಗಳೆಲ್ಲ ಬಿಳಿಯ ಮುಲಾಮು ತೊಟ್ಟು ನಲಿದುವು. ತಿಂಗಳು ಮೂಡಿತು. ಶುಕ್ರನಕ್ಷತ್ರ ಉಜ್ವಲವಾಗಿ ಹೊಳೆಯಿತು. ಮಳೆಯ ಚಿಹ್ನೆ ಅಡಗಿತು. ದೇವದಾರುಮರ ದಿಂದ ಹನಿ ಪಟಪಟಿಸಿತು. ದೂರದಲ್ಲಿ ಯಾವುದೋ ಒಂದು ಹಕ್ಕಿ ಒಂದು ಸಲ ಉಲಿದು ಸುಮ್ಮನಾಯಿತು. ಗೆಳೆಯರು ಮನೆಯನ್ನು ಸಮೀಪಿಸುತ್ತಿದ್ದರು.

"ನಾಳೆ ಬೆಳಗ್ಗೆ ನಮ್ಮ ಮನೆಗೆ ಬರುತ್ತೀಯಾ" ಎಂದು ಕೇಳಿದ ಕೃಷ್ಣ.

"ಖಂಡಿತ ಬರುತ್ತೇನೆ, ಕೃಷ್ಣಾ, ಖಂಡಿತ."

"ಬಾ. ನಿನಗೆ "ಸ್ವಧರ್ಮದ" ಹೊಸಸಂಚಿಕೆ ಬಂದಿದೆ—ಕೊಡುತ್ತೇನೆ. ಅದರಲ್ಲಿ ಒಂದು ಒಳ್ಳೆ ಕಥೆ ಇದೆ."

"ಕಥೆಯ ಹೆಸರು?"

"ಪಾಲಾ ಫೂ." ಅದೂ ಸ್ನೇಹಿತರ ಕಥೆ. ಅದನ್ನು ಈದಿನ ಬೆಳಗ್ಗೆ ಓದಿದೆ. ನೀನೂ ಓದಬೇಕು."

"ಆಗಲಿ" ಎಂದ ಮಾಧವ.

ಇಷ್ಟುಹೊತ್ತಿಗೆ ಮಲಗಿದ್ದ ಅವನ ಅಹಂಕಾರ ಹೆಡೆಯನ್ನು ಕೊಂಚ ಎತ್ತಿತ್ತು. "ಮೊದಲು ಮಾತಾಡಿಸಿದ್ದು ಕೃಷ್ಣನೇ, ನನ್ನ ಶಪಥ ಸೋಲಲಿಲ್ಲ" ಎಂದುಕೊಂಡು ಅದು ಮತ್ತೆ ಮಲಗಿತು.

—o—

# ೩

ದೀಪಾವಳಿಯ ರಜೆಗೆ ಮಾಧವ ಕೃಷ್ಣರಿಬ್ಬರೂ ಕುಂದಾಪುರದಿಂದ ಮನೆಗೆ ಬಂದಿದ್ದರು. ರಜೆ ಇದ್ದದ್ದು ಎರಡೇ ದಿನ. ಹಿಂದಿನ ಮುಂದಿನ ಶನಿವಾರ ಭಾನುವಾರಗಳನ್ನು ಸೇರಿಸಿ ಅಂತೂ ಒಂದು ಏಳು ದಿನಗಳ ರಜೆಯಾಗಿ ಅದನ್ನು ಅವರು ಮಾರ್ಪಡಿಸಿಕೊಂಡಿದ್ದರು. ಆಗಲೇ ಐದುದಿನಗಳ ಕಾಲ ಸಂದಿತ್ತು. ಇನ್ನು ಮತ್ತೆ ಹೈಸ್ಕೂಲಿಗೆ ಹೋಗಲು ಉಳಿದದ್ದು ಎರಡೇ ದಿನ.

ಸೂರಪ್ಪಯ್ಯ ಮಾಧವ ಕೃಷ್ಣ ಇಬ್ಬರಿಗೂ ಕುಂದಾಪುರದಲ್ಲೇ ಪರಿಚಿತ. ಆತನ ಊರು ಸಾಲಿಗ್ರಾಮ. ಗಾಂಧಿ ಚಳವಳಿಯಲ್ಲಿ ಹಿಂದು ಮುಂದು ನೋಡದೆ ಧುಮುಕಿದ್ದ ಕೆಲವೇ ಕೆಲವು ಮಂದಿ ತರುಣರಲ್ಲಿ ಅವನೂ ಒಬ್ಬ. ಇನ್ನೂ ಆತನಿಗೆ ಇಪ್ಪತ್ತೈದೋ ಇಪ್ಪತ್ತಾರೋ ವರ್ಷವಿರಬಹುದು. ತ್ತರವಾದ, ಆಳು, ಅಗಲವಾದ ಹಣೆ, ವಿಶಾಲವಾದ ಕಣ್ಣು; ಮನೋದಾರ್ಢ್ಯವನ್ನು ತೋರುವಂಥ ನೀಳವಾದ ಮೂಗು, ಕೊಂಚ ಅಗಲವಾಗಿ ಕೆಳಕ್ಕೆ ಬಾಗಿದ್ದ ಬಾಯಿ ಒಳಗೆ ಅಡಗಿದ್ದ ಸುಖಾಭಿಲಾಷೆಯನ್ನು ಸೂಚಿಸುತ್ತಿತ್ತು. ಗಟ್ಟಿಮುಟ್ಟಾದ ಮೈಕಟ್ಟಿನ, ಗಂಟೆಯಂಥ ಮೊಳಗುಸ್ವರದ, ಯಾರನ್ನೂ ಈತ ಲೆಕ್ಕಿಸನೆಂದು ತೋರುವಂತೆ ಆಗಾಗ್ಗ ಬಿಗಿಯುತ್ತಿದ್ದ ಹುಬ್ಬಿನ, ಗಂಭೀರ ಗತಿಯ ಸೂರಪ್ಪಯ್ಯನದು ಆಕರ್ಷಕ ವ್ಯಕ್ತಿತ್ವ. ಅವನ ಮಾತಿನಲ್ಲಿ ಮೋಡಿ ಇತ್ತು: ತಾನು ಆಡಿದ್ದು ಸರಿ ಎಂದು ಕೇಳಿದವರು ತಲೆದೂಗುವಂತೆ ಮಾಡಬಲ್ಲ ವಾಗ್ಮಿತೆ ಇತ್ತು. ರಾಮಾಯಣ ಮಹಾಭಾರತದ ಅನೇಕ ಕಥೆಗಳನ್ನು ಚೆನ್ನಾಗಿ ಬಲ್ಲ; ಯಕ್ಷಗಾನ ಪ್ರಸಂಗಗಳಲ್ಲಿ ನುರಿತ ಕೈ. ಇಂಗ್ಲಿಷ್ ವಿದ್ಯಾಭ್ಯಾಸ ಅವನಿಗೆ ಹೆಚ್ಚಿಗೆ ಇರಲಿಲ್ಲ. ಎಸ್. ಎಸ್. ಎಲ್. ಸಿ ಪರೀಕ್ಷೆಗೆ ಕಟ್ಟಿದ ಮೇಲೆ ಅಸಹಕಾರ ಚಳುವಳಿಗಾಗಿ ತನ್ನ ವಿದ್ಯಾಭ್ಯಾಸಕ್ಕೆ ತಿಲಾಂಜಲಿಕೊಟ್ಟೆ ಎಂದು ಸೂರಪ್ಪಯ್ಯ ಹೇಳುತ್ತಾನೆ. ಆದರೆ ನಿಜವಾಗಿಯೂ ಅವನು ಫಿಫ್ತ್‌ಫಾರಂಗೆ ಎರಡು ವರ್ಷ ಮಣ್ಣು ಹೊತ್ತು ಕೈ ತೊಳೆದು ಕೊಂಡ ಎಂತಲೂ ಕೆಲವರು ಹೇಳುತ್ತಿದ್ದರು. ಹಾಗೆ ಹೇಳುತ್ತಿದ್ದವರು ಸೂರಪ್ಪಯ್ಯನ ಶತ್ರುಗಳೇ ಇದ್ದಿರಬಹುದು. ಸೂರಪ್ಪಯ್ಯನಿಗೆ ಹಿತಶತ್ರುಗಳು ಬಹಳ.

ಳಗೆ, ಹೊಳೆಯ ತಳದಲ್ಲಿ ಲಕ್ಷಾಂತರ ತೂಗುದೀಪಗಳು ಓಲಾಡುತ್ತಿದ್ದಂತೆ ತೋರುತ್ತಿತ್ತು. ಕ್ಷಣಕಾಲ ಮಾತು ನಿಲ್ಲಿಸಿ ಈ ದೃಶ್ಯವನ್ನು ಕಂಡಾಗ ಮಾಧವನ ಮನಸ್ಸು ಪುಲಕಿತವಾಯಿತು. ನೀರೊಳಗಿನ ಈ ನಕ್ಷತ್ರಗಳ ಈ ಲಕ್ಷದೀಪೋತ್ಸವದ ವೈಭವದ ಮುಂದೆ ಮಾತು ಸಲ್ಲದೆನಿಸಿತು. ಮಾತು ಆಡಿ ಆಡಿ ಎಲ್ಲರಿಗೂ ಬಾಯಿ ಸೋತಿತ್ತು. ಹೊಟ್ಟೆ ಹಸಿದು ಉಸಿರು ಕಸುವು ಕಳೆದು ಕೊಂಡಿತ್ತು. ಅಂತೂ ದೋಣಿ ಈಚೆ ದಡಕ್ಕೆ ತಲುಪಿತು. ಒಬ್ಬೊಬ್ಬರಾಗಿ ದೋಣಿಯಿಂದ ಇಳಿದು ಹುಡುಗರು ರಸ್ತೆಯನ್ನು ಸೇರಿದರು.

ಉಪ್ಪುಂದದ ಹೊಳೆಬಾಗಿಲಿನಲ್ಲಿ ಒಂದೆರಡು ಅಂಗಡಿಗಳು ಮಾತ್ರ ಇದ್ದವು — ಆ ಕಾಲದಲ್ಲಿ. ಆ ಅಂಗಡಿಗಳ ಮಿಣುಕು ದೀಪ ಬಿಟ್ಟರೆ ಸುತ್ತಲೂ ದಟ್ಟ ಕತ್ತಲು. ಚಂದ್ರೋದಯವಾಗಲು ಇನ್ನೂ ಕೊಂಚ ಕಾಲ ಕಳೆಯಬೇಕು. ಹಗಲಿನ ತಾಪ, ಬೇಸಗೆಯ ಶಖೆ ಕುಗ್ಗಿ ತಣ್ಣನೆಯ ಗಾಳಿ ಸಮುದ್ರದ ಕಡೆಯಿಂದ ಬೀಸುತ್ತಿತ್ತು. ಆಕಾಶದ ವಾಯವ್ಯ ಮೂಲೆಯಲ್ಲಿ ಮೋಡ ದಟ್ಟವಾಗುತ್ತಿತ್ತು. ಆಗೀಗ ಥಟ್ಟನೆ ಮಿಂಚಿನ ಗೆರೆಯೊಂದು ಮೋಡವನ್ನು ಸಿಗಿದು ಮರೆಯಾಗುತ್ತಿತ್ತು. ಸ್ವಲ್ಪ ದೂರದಲ್ಲೇ ಪಶ್ಚಿಮ ಸಮುದ್ರ ಮೊರೆದು ಭೋರ್ಗರೆಯುತ್ತಿತ್ತು. ಕೊಂಚ ದೂರ ಹುಡುಗರೆಲ್ಲ ಮಾತಿಲ್ಲದೆ ಮೌನವಾಗಿ ನಡೆದ ಬಳಿಕ ಉಪ್ಪುಂದದ ಪೇಟೆ ಬಂತು. ನಾಲ್ಕೈದು ಮನೆ, ಎರಡು ಮೂರು ಅಂಗಡಿ, ಒಂದು ಮುರುಕು ಕಾಫಿ ಹೋಟೆಲು — ಇಷ್ಟೇ ಆ ಮಹಾಪೇಟೆಯ ವೈಭವ. ಇನ್ನೂ ಎಂಟು ಗಂಟೆ; ಆದರೂ ಅಂಗಡಿಯ ದೇವಪ್ಪ ಪ್ರಭು ಅಂಗಡಿಯ ಎರಡು ಬಾಗಿಲುಗಳನ್ನು ಹಾಕಿ ಮೂರನೆಯ ಬಾಗಿಲಿಗೆ ಕೈ ಹಚ್ಚಿದ್ದ. ರಾಮುಪೈಗಳ ಅಂಗಡಿ ಮಾತ್ರ ಇನ್ನೂ ತೆರೆದೇ ಇತ್ತು. ಪೈಗಳವರು ಒಬ್ಬರೇ ಅಂಗಡಿಯಲ್ಲಿ ಕುಳಿತು ತಮ್ಮ ಹೊಟ್ಟೆಯ ಮೇಲೆ ಕೈಯಾಡಿಸಿ ನೋಡುತ್ತಿದ್ದರು. ಉಪ್ಪುಂದದಲ್ಲಿ ಮಾಧವ - ಕೃಷ್ಣರಿಬ್ಬರನ್ನು ಬಿಟ್ಟು ಉಳಿದೆಲ್ಲ ಹುಡುಗರೂ ತಮ್ಮ ತಮ್ಮ ಮನೆಗಳಿಗೆ ನಡೆದರು. ರಸ್ತೆಯ ಕತ್ತಲಲ್ಲಿ ಈ ಇಬ್ಬರು ಮಾತ್ರ ಉಳಿದರು.

ಒಬ್ಬರನ್ನೊಬ್ಬರು ಹಿಂದೆ ಹಾಕಿ ಮುಂದೆ ಮುಂದೆ ಓಡುವ ಪಂದ್ಯವನ್ನು ಇಷ್ಟು ದಿನ ಅವರು ಹೂಡಲಿಲ್ಲ. ಮಾಧವ ಮುಂದೆ ಅವನಿಗೆ ಕೊಂಚ ಹಿಂದೆ ಕೃಷ್ಣ - ಹೀಗೆ ಮುಂದೆ ಸಾಗುತ್ತಿದ್ದರು. ಅಕ್ಕಪಕ್ಕದ ಸಾಲು ಮರಗಳು ಗಾಳಿಗೆ

ಸುಯ್ಯೆನ್ನುತ್ತಿದ್ದವು. ಮೇಲೆ ಕಣ್ಣೆತ್ತಿ ನೋಡಿದಾಗ ಮಾಧವನಿಗೆ ನಕ್ಷತ್ರಗಳ ಕಿರುಬೆಳಕನ್ನು ಮೋಡಗಳ ಹಿಂಡು ಕಬಳಿಸುತ್ತಿರುವುದು ಕಾಣಿಸಿತು. ಕೃಷ್ಣ ಅವನ ಹಿಂದೆಯೇ ಬರುತ್ತಿದ್ದಾನೆ. ಆವನ ಮುಖ ಮಾಧವನಿಗೆ ಕಾಣಿಸುತ್ತಿಲ್ಲ. ಆದರೆ ತಾನು ಬಹುಮಾನ ತೆಗೆದು ಕೊಳ್ಳುತ್ತಿದ್ದಾಗ ಸಂತೋಷದಿಂದ ದೀಪ್ತ ವಾಗಿದ್ದ ಅವನ ಮುಖ ಈಗ ಮಾಧವನ ಕಣ್ಣು ಮುಂದೆ ನಿಲ್ಲುತ್ತದೆ. ದ್ವೇಷ ದಿಂದ, ಕ್ರೋಧದಿಂದ ಅಂದಗೆಟ್ಟ ಮುಖವಲ್ಲ ಅದು; ಸ್ನೇಹದಿಂದ, ಅಭಿಮಾನ ದಿಂದ ಹೊಳೆಯುತ್ತಿದ್ದ ನಿಷ್ಕಲ್ಮಷ ಮುಖ. ಇಷ್ಟು ದಿನ ತಡೆಹಿಡಿದಿದ್ದ ಸ್ನೇಹದ ಮಹಾ ಸಮುದ್ರ ಈಗ ತನ್ನ ಮನಸ್ಸಿನ ದಡವನ್ನು ಅಪ್ಪಳಿಸುತ್ತಿರುವಂತೆ ಮಾಧವನಿಗೆ ತೋರಿತು. ತುಟಿಗಳ ಹಿಂದೆ ತನಗೆ ತಾನೇ 'ಕೃಷ್ಣಾ' ಎಂಬ ಮಾತು ತನಗೆ ಅರಿವಿಲ್ಲದಂತೆಯೇ ರೂಪುಗೊಳ್ಳುತ್ತಿರುವ ಹಾಗೆ ಅವನಿಗೆ ತೋರಿತು. ಇಷ್ಟರಲ್ಲಿ ಮೋಡಗಳು ತೀರ ದಟ್ಟವಾಗಿ ದಾರಿಯ ಮೇಲೆ ಕಾಡಿಗೆ ಚೆಲ್ಲಿದಂತಾಯಿತು. ಬಳಿಯ ದೇವದಾರುಗಳ ದಟ್ಟ ನೆಳಲು ಕರಿ ಎಮ್ಮೆಗಳಂತೆ ಅತ್ತಿಂದಿತ್ತ ಬೀದಿಯ ಮೇಲೆ ಹೊರಳಾಡುತ್ತಿದ್ದುವು. ತಣ್ಣನೆಯ ಗಾಳಿಯ ಅಲೆಯೊಂದು ಬೀಸಿ ಬಂದು ಮಾಧವನ ಮೈ ಜುಮ್ಮೆಂದಿತು. ಮೇಲೆ ಆಡು ತ್ತಿದ್ದ ಕಪ್ಪು ಮೋಡ ಕರಗಿ ನಾಲ್ಕು ಹನಿ ಪಟ ಪಟ ಬಿದ್ದು ರಸ್ತೆಯ ಬೆಂದ ಧೂಳಿನಲ್ಲಿ ಇಂಗಿ ಹೋಯಿತು. ಸುತ್ತುಮುತ್ತಲ ಉತ್ತಗದ್ದೆಗಳಿಂದ ಮಣ್ಣಿನ ನರುಗಂಪು ಎದ್ದು ಬಂದು ಮನಸ್ಸನ್ನು ತಣಿಸಿತು. ಒಂದು ದೊಡ್ಡ ಮಿಂಚು ಮಿಂಚಿ ಅಷ್ಟುದ್ದ ರಸ್ತೆಯನ್ನು ಬೆಳಗಿ ಮರುಕ್ಷಣವೇ ಕತ್ತಲಲ್ಲಿ ಕರಗಿತು. ಮಾಧವನ ಮನಸ್ಸು ಮೃದುವಾಗುತ್ತ ಹೋಯಿತು. ಅಂದಿನ ಬಹುಮಾನಗಳ ಸಂಭ್ರಮದಿಂದ ತೃಪ್ತವಾಗಿದ್ದ ಅಹಂಕಾರ ಹೆಡೆ ಮಡಿಚಿ ತೆಕ್ಕೆ ಹಾಕಿ ನಿದ್ದೆ ಹೋಗಿತ್ತು. ಮನಸ್ಸಿನಲ್ಲಿ ಪ್ರೀತಿಯ, ವಿಶ್ವಾಸದ ಭಾವ ಉಬ್ಬರಗೊಂಡು ಭೋರ್ಗರೆಯಿತು. ಏಕೋ ಕರುಳನ್ನು ಕಿವುಚಿದಂತಾಯಿತು. ಏನುಕಾರಣ ಕಣ್ಣು ತೇವಗೊಂಡಿತು. ಮಾಧವನು 'ಕೃಷ್ಣಾ' ಎಂದು ಕೂಗಬೇಕು. ಅಷ್ಟ ರಲ್ಲಿ 'ಮಾಧವಾ' ಎಂಬ ಮಾತು ಪಿಸುಮಾತಿನಂತೆ ಅವನ ಕಿವಿಯನ್ನು ಸೇರಿ ಜೇನಿನಂತೆ ಮನಸ್ಸಿಗಿಳಿಯಿತು. 'ಕೃಷ್ಣಾ' ಎಂಬ ಮಾತು ಮಾಧವನ ಬಾಯಿ ಯಿಂದ ಮೃದುವಾಗಿ, ಅನಂತಪ್ರೀತಿಯ ಸಾರಸರ್ವಸ್ವದಂತೆ ಚಿಮ್ಮಿ ಸುತ್ತಲ ಗಾಳಿಯ ಅಲೆಗಳಲ್ಲಿ ಕುಣಿದು ಕೃಷ್ಣನ ಕಿವಿಯನ್ನು ಸೇರಿತು. ಇಬ್ಬರ ಮಧ್ಯೆ

ಆಗ ತಾನೇ ಹದಿನಾರು ತುಂಬುತ್ತಿದ್ದ ಮಾಧವನಂತೂ ಸೂರಪ್ಪಯ್ಯನನ್ನು ಕಂಡು ಮರುಳಾದ. ಮಾಧವ ಆತನನ್ನು ಮೊದಲು ನೋಡಿದ್ದು ಕುಂದಾಪುರದಲ್ಲಿ ನಡೆದ ಒಂದು ಸಭೆಯಲ್ಲಿ. ತಾಲೂಕು ಕಾಂಗ್ರೆಸ್ ಸಂಸ್ಥೆಯ ಆಶ್ರಯದಲ್ಲಿ ನಡೆದಿದ್ದ ಆ ಸಭೆಯಲ್ಲಿ ಅನೇಕರು ಮಾತಾಡಿದ್ದರು. ಆ ಊರಿನಲ್ಲಿ ಮಾತಿನ ಶೂರರಿಗೇನೂ ಕಡಿಮೆ ಇಲ್ಲ. ಕತ್ತಿ ಕಠಾರಿಗಳಂಥ ಮಾತುಗಳೂ ಸಭಿಕರ ಮುಂದೆ ಹೊಳೆದು ಮರೆಯಾದುವು. ಆದರೆ ಸೂರಪ್ಪಯ್ಯನ ಮಾತಿನ ರೀತಿಯೇ ಬೇರೆ. ಆತನ ಮಾತಿನಲ್ಲೂ ಅದೇ ಉದ್ವೇಗ ಕಂಡರೂ ಮಾತಿನ ಹಿಂದೆ ಅಡಗಿದ ದೃಢಚಿತ್ತದ ಬಿಗಿ ಮಾತಿನಲ್ಲೂ ಕಂಡಿತು. ಇಂಗ್ಲಿಷ್ ಸರಕಾರದ ದಬ್ಬಾಳಿಕೆಯನ್ನು ವರ್ಣಿಸಲು ಅವನು ರಾವಣ, ದುರ್ಯೋಧನ, ಕಾರ್ತವೀರ್ಯಾರ್ಜುನರ ಉದಾಹರಣೆ ತೆಗೆದುಕೊಂಡು ಸಭಿಕರ ಮನಸ್ಸನ್ನು ಮುಟ್ಟಿದ. ಸ್ವಾತಂತ್ರ್ಯ ಸಂಗ್ರಾಮದ ವೀರಘೋಷವನ್ನು ಅವನು ಬಿತ್ತರಿಸಿದಾಗ ಕುಳಿತು ಕೇಳುವವರ ಬಾಹುಗಳು ಕುಣಿದುವು; ಮಾಧವ ನೆಲ ಬಿಟ್ಟು ಒಂದಂಗುಲ ಮೇಲಕ್ಕೇರುತ್ತಿದ್ದ. ಅವನ ನರನರದಲ್ಲೂ ಬಿಸಿರಕ್ತ ಹರಿದು ಎದೆ ಡವಗುಟ್ಟಿತು. ದೂರದಲ್ಲಿ ಎಲ್ಲೋ ಮೋಡದ ಮರೆಗೆ ನಿಂತು ಆರ್ತಳಾಗಿ ಮೊರೆಯುವ ಭಾರತಮಾತೆಯ ಕರುಣ ಚಿತ್ರ ಅವನ ಕಣ್ಣಿಗೆ ಕಟ್ಟಿತು. ವಿದ್ಯಾರಣ್ಯರ, ಹಕ್ಕಬುಕ್ಕರ, ಶಿವಾಜಿಯ, ಪ್ರತಾಪಸಿಂಹನ ದೇಶಾಭಿಮಾನದ ಅಂತರ್ಗಾಮಿನಿ ನದಿ ಮಾಧವನ ಮನಸ್ಸಿನಲ್ಲಿ ಹೊಸಪ್ರವಾಹದಿಂದ ಭೋರ್ಗರೆಯಿತು. ಗುಲಾಮಗಿರಿಯ ನರಕದಲ್ಲಿ ಹುಳುವಿನಂತೆ ತುಳಿಸಿಕೊಳ್ಳುವ ತನ್ನ ಸುತ್ತಲ ಜನರನ್ನು ಕಂಡು ಅವನ ಕರುಳು ಕಿವುಚಿದಂತಾಯಿತು. ತನ್ನ ಬಾಳು, ತನ್ನ ಶಕ್ತಿಗಳೆಲ್ಲ ದೇಶಕಾರ್ಯಕ್ಕಾಗಿಯೇ ಮೀಸಲಾಗಬೇಕು. ಉಳಿದೆಲ್ಲ ಆಕಾಂಕ್ಷೆಗಳಿಗೂ ಈಗ ಅವಕಾಶವಿಲ್ಲ. ಮೊದಲು ಸ್ವಾತಂತ್ರ್ಯ, ಮೊದಲು ಆತ್ಮಾಭಿಮಾನ ಸಾಧನೆ, ಮೊದಲು ಬಂಧಮುಕ್ತಿ ; ಆ ಮೇಲೆ ಉಳಿದ ವಿಚಾರ, ವಿಹಾರ, ವಿಲಾಸ.

"ಈಗ ಎಲ್ಲರೂ ತಮ್ಮ ತಮ್ಮ ಸ್ವಾರ್ಥವನ್ನು ಮರೆತು ದೇಶಕಾರ್ಯಕ್ಕಾಗಿ ಟೊಂಕ ಕಟ್ಟಬೇಕು, ಭಾರತಮಾತೆಯ ಬಂಧಮುಕ್ತಿಗಾಗಿ ತನುಮನಧನಗಳನ್ನು ಪಣವಾಗಿಟ್ಟು ಹೋರಾಡಬೇಕು. ಗಾಂಧೀಜಿ ತಮ್ಮ ದಂಡಯಾತ್ರೆ ಆಗಲೇ ಆರಂಭಿಸಿದ್ದಾರೆ. ದೇಶದ ತರುಣರು ಮುನ್ನುಗ್ಗಬೇಕು.

ಸತ್ಯಾಗ್ರಹಿಗಳಾಗಿ ದೇಶಸೇವೆಗೆ ಸಿದ್ಧರಾಗಬೇಕು. ಗೆಲವು ಇಲ್ಲವೆ ಸಾವು— ಅದೀಗ ನಮ್ಮ ಮುಂದಿರಬೇಕಾದ ಆದರ್ಶ............... "

ಸರಿ — ನಿಜ ಎನ್ನಿಸಿತ್ತು ಮಾಧವನಿಗೆ; ಗೆಲುವು — ಸರಿ; ಆದರೆ ಸಾವು! ಸಾವು ಎಷ್ಟು ಭೀಕರ. ತಂದೆತಾಯಿ, ಬಂಧುಬಳಗ, ಗೆಳೆಯರು, ಪುಸ್ತಕಗಳು, ಈ ಜಗತ್ತು-ಈ ಮರ, ಗಿಡ, ಮೋಡ, ನಕ್ಷತ್ರ, ಚಂದ್ರಸೂರ್ಯ- ಎಲ್ಲಕ್ಕೂ ಇಲ್ಲವಾಗಿ ಶೂನ್ಯವಾಗುವುದು; ಯೋಚಿಸಿ ಮಾಧವನ ಎದೆ ಝುಗ್ಗೆಂದಿತು. ಆದರೆ ಈತ — ಈ ರಾಷ್ಟ್ರಸೇವಕ- ಹೇಳುವ ಮಾತು ಸುಳ್ಳೆ? ಸಾವಿಗಂಜಿದವ ಸೈನಿಕನಾದಾನೆ? ಅಂಥ ಹೇಡಿಯಿಂದ ದೇಶದ ಕಾರ್ಯ ವಾದೀತೆ? ಎಷ್ಟು ಮನಸ್ಸು ಗಟ್ಟಿಮಾಡಿದರೂ ತನಗೆ ಅಷ್ಟು ಧೈರ್ಯ ಬರಲಾರದು ಎನ್ನಿಸಿತು ಮಾಧವನಿಗೆ. ಒಂದೆರಡು ಲಾಠಿಏಟು, ಜೈಲು— ಎಲ್ಲಸರಿ, ಆದರೆ ಸಾವು ................

ಅಂಥ ಧೈರ್ಯವುಳ್ಳ ಸೂರಪ್ಪಯ್ಯನನ್ನು ಕಂಡು ಮಾಧವನ ಮನಸ್ಸು ಪುಲಕಿತವಾಯಿತು. ಸಾವನ್ನು ಎದುರಿಸಬಲ್ಲ ಇಂಥ ವೀರಸತ್ಯಾಗ್ರಹಿ ಒಬ್ಬ ನನ್ನಾದರೂ ಕಂಡೆನಲ್ಲ, ತಾನು ಕೃತಾರ್ಥ ಎಂದುಕೊಂಡ. ಆ ದಿನದ ಭಾಷಣ ಮುಗಿದ ಮೇಲೆ ಸೂರಪ್ಪಯ್ಯ ಮಾಧವನು ವಾಸವಾಗಿದ್ದ ಹೋಟಲಿಗೆ ಬಂದ. ಮಾಧವ ಮತ್ತು ಅವನಷ್ಟೇ ಸ್ಫೂರ್ತಿಗೊಂಡಿದ್ದ ಕೃಷ್ಣ ಸೂರಪ್ಪಯ್ಯನ ಪರಿ ಚಯಮಾಡಿಕೊಳ್ಳಲು ಕಾತರರಾಗಿದ್ದರು. ಹೋಟಲಿನಲ್ಲಿ ಊಟಮುಗಿದಮೇಲೆ

"ನಿಮ್ಮ ಭಾಷಣ ಕೇಳಿದೆ, ಬಹಳ ಚೆನ್ನಾಗಿತ್ತು. ಅಂಥ ಭಾಷಣ ನಾನು ಕೇಳಿಯೇ ಇರಲಿಲ್ಲ" ಎಂದ ಮಾಧವ.

"ಬಹಳ ಸ್ಫೂರ್ತಿದಾಯಕವಾಗಿತ್ತು" ಎಂದ ಕೃಷ್ಣ.

ಈ ಹೊಗಳಿಕೆ ಕೇಳಿ ಸೂರಪ್ಪಯ್ಯ ಮೀಸೆಯ ಮೇಲೆ ಒಮ್ಮೆ ಕೈಯಾಡಿಸಿದ; ಇಂಥ ಹೊಗಳಿಕೆ ತನಗೆ ತೀರ ಸಾಧಾರಣವಾದದ್ದು ಎಂಬ ಹಾಗೆ ನಸುನಕ್ಕ.

"ಭಾಷಣಕ್ಕೇನ್ರಿ; ಇಂಥ ಭಾಷಣ ದಿನಕ್ಕೆ ಹತ್ತು ಬೇಕಾದರೆ ಮಾಡ ಬಲ್ಲೆ. ಈಗ ಬೇಕಾದ್ದು ಮುಖ್ಯವಾಗಿ ಕೆಲಸ."

"ಇಂಥ ಭಾಷಣ ಕೇಳದೆ ಹೋದರೆ ಜನರು ಎಚ್ಚರಗೊಳ್ಳುವುದು ಹೇಗೆ?" ಎಂದು ಮಾಧವ ಕೇಳಿದ.

"ಅದೇ ನೋಡಿ ನಮ್ಮ ಕಷ್ಟ. ಜನ ಭಾಷಣ ಕೇಳಿ ಚಪ್ಪಾಳೆ ತಟ್ಟಿ

ಹೋಗುತ್ತಾರೆ. ನಾಳೆ ಹೆಂಡದ ಅಂಗಡಿ ಪಿಕೆಟಿಂಗಿಗೋ, ಪರದೇಶಿ ಬಟ್ಟೆಯ ಅಂಗಡಿಯ ಪಿಕೆಟಿಂಗಿಗೋ ಬಾ ಎಂದರೆ ಒಬ್ಬನಾದರೂ ಬರಬೇಕಲ್ಲ!"

"ನನಗೂ ಅದೇ ಆಶ್ಚರ್ಯ. ಇಷ್ಟೆಲ್ಲಾ ಮಾತಾಡುತ್ತಾರೆ-ಮನೆಯಲ್ಲೋ ಅಂಗಡಿಯಲ್ಲೋ ಕುಳಿತುಕೊಂಡು. ಆದರೆ ಒಂದು ಪ್ರಭಾತಫೇರಿಗೂ ಜನ ಬರುವುದಿಲ್ಲವಲ್ಲ" ಎಂದ ಕೃಷ್ಣ.

"ನಾನೂ ನೋಡಿ, ಈಗ ಆರು ತಿಂಗಳಿಂದ ಒಂದೇ ಸಮನೆ ಅಲೆ ಯುತ್ತಿದ್ದೇನೆ. ಆದರೆ ನನ್ನ ಈ ಕುಂದಾಪುರ ತಾಲೂಕಿನ ಜನದ ಮೇಲೆ ಯಾವ ಪರಿಣಾಮವೂ ಆಗಿಲ್ಲ. ನಾನು ಮಾಡಿದ ಕೆಲಸವೆಲ್ಲ ನೀರಲ್ಲಿ ಹೋಮ. ಇಲ್ಲಿಯ ಜನದ ಭಯ ದೇವರೇ ನಿವಾರಿಸಬೇಕು" ಎಂದ ಸೂರಪ್ಪಯ್ಯ.

"ಒಂದು ಕೆಂಪು ಟೋಪಿ ಕಂಡರೇ ಸಾಕು, ಊರಿಗೆ ಊರೇ ನಡುಗಿ ಹೋಗುತ್ತದೆ. ಎಂಥ ಜನರಪ್ಪ ಇವರು" ಎಂದ ಮಾಧವ.

"ಈ ಜನವಲ್ಲಿ ದೇಶಾಭಿಮಾನವಿಲ್ಲ, ಆತ್ಮಾಭಿಮಾನವಿಲ್ಲ. ಇಲ್ಲಿ ಯಾವ ಕೆಲಸವೂ ನಡೆಯುವ ಹಾಗೇ ಇಲ್ಲ" ಎಂದು ನಿರ್ಧಾರಸ್ವರದಲ್ಲಿ ಹೇಳಿದ ಸೂರಪ್ಪಯ್ಯ.

"ಹಾಗೆ ಜನರನ್ನು ದೂರಬಾರದು. ಅವರನ್ನು ಅರಿಯ ಬೇಕು." ಹೋಟಲಿನ ಹಜಾರದ ಮೂಲೆಯಿಂದ ಮಾತು ಹೊರಟಿತು. ಆ ಮಾತು ಆಡಿದವರು ಯಾರು ಎಂದು ಮೊದಲು ಗೊತ್ತಾಗಲಿಲ್ಲ. ಅಲ್ಲಿದ್ದ ಲಾಟೀನಿನ ಮಂದವಾದ ಬೆಳಕಿನಲ್ಲಿ ಎಲ್ಲವೂ ಮಸಕುಮಸಕಾಗಿತ್ತು. ಆ ಮಾತು ಅರ್ಥ ಪೂರ್ಣವಾಗಿ ಅನುಭವದ ಪಾಕವಾಗಿ ಹೃದಯದಾಳದಿಂದಲೇ ಬಂದ ಹಾಗೆ ಕಂಡಿತು. ವಿಷಯವನ್ನು ಆಳವಾಗಿ ವಿಚಾರಿಸಿದಲ್ಲದೆ ಆ ರೀತಿ ಮಾತಾಡಲು ಅಸಾಧ್ಯವೆಂಬ ಹಾಗೆ ಅದು ತೋರಿಯಿತು. ಕ್ಷಣ ಕಾಲ ಯಾರೂ ಮಾತಾಡ ಲಿಲ್ಲ, ಅಲ್ಲಿ ಮೌನ ನೆಲಸಿತು. ಎಲ್ಲರೂ ಮಾತು ಹೊರಟ ಆ ಮೂಲೆಯನ್ನೇ ನೋಡುತ್ತಿದ್ದರು. ಕ್ರಮೇಣ ಆ ಅರೆಮಬ್ಬಿನಲ್ಲಿ ಒಂದು ಮುಖದ ಹೊರಗೆರೆ ಕಾಣಿಸಿತು; ಇನ್ನೂ ಕೊಂಚ ಹೊತ್ತು ಕಳೆದ ಮೇಲೆ ಅದು ತಕ್ಕಷ್ಟು ಸ್ಫುಟ ವಾಗಿಯೇ ಮೂಡಿತು. ಮೊದಲು ಕಂಡಿದ್ದು ಕೆದರಿದ ಕ್ರಾಪು ತಲೆ; ತಲೆ ಬೋಳಿಸಿಕೊಳ್ಳದೆ ಬಹಳ ದಿನವಾಗಿದ್ದರಿಂದಿರಬೇಕು ಕೂದಲು ಪೊದೆ ಪೊದೆ ಯಾಗಿ ಮೆದೆ ಮೆದೆಯಾಗಿ ಎದ್ದಿತ್ತು. ಅದರ ಕೆಳಗೆ ವಿಶಾಲವಾದೊಂದು ಹಣೆ

ಬಿಟ್ಟದಂತೆ ಕಾಣಿಸಿತು. ಆ ಹಣೆಯ ಮೇಲೆ ಎರೆಹುಳುಗಳಂಥ ಹತ್ತಾರು ಗೆರೆಗಳು ಆ ಕತ್ತಲಲ್ಲೂ ಎದ್ದು ಕಂಡವು. ಪಾತಾಳಕ್ಕೆ ಇಳಿದಂತಿದ್ದ ಸಣ್ಣ ಕಣ್ಣುಗಳು ಬೆಂಕಿಯ ಕೆಂಡದಂತೆ ಉಜ್ವಲವಾಗಿ ಹೊಳೆದುವು. ಉದ್ದವಾದ ಗರುಡ ಮೂಗಿನ ಕೆಳಗೆ ಮೀಸೆ ಅಸ್ತವ್ಯಸ್ತವಾಗಿ ಬೆಳೆದಿತ್ತು. ಬತ್ತಿಹೋದ ಕೆನ್ನೆಗಳ ಮೇಲೆ ಆರೇಳು ದಿನಗಳ ಕೂದಲು ಕಬ್ಬಿಣದ ಸಣ್ಣ ಚೂರುಗಳಂತೆ ನಿಂತಿದ್ದುವು. ಆ ಮುಖದಲ್ಲಿ ಸಾಮಾನ್ಯವಾದುದಕ್ಕೆ ಮಿಕ್ಕದ್ದು ಏನೋ ಹುದುಗಿರುವಂತೆ ಕಂಡಿತು. ಆದರೆ ಕೊಂಚ ಹೊತ್ತಿನಲ್ಲೇ ಸೂರಪ್ಪಯ್ಯನ ಧ್ವನಿ ಮೊಳಗಿತು.

"ನಿಮ್ಮ ಮಾತು ಕೇಳಿ ಆಶ್ಚರ್ಯವಾಗುತ್ತದೆ, ಸ್ವಾಮಿ; ತಾವು ಯಾರೋ ಗೊತ್ತಾಗಲಿಲ್ಲ. ಆದರೆ ನಿಮ್ಮ ಮಾತನ್ನ ನಾನು ಒಪ್ಪಲಾರೆ. ದೇಶದ ಬೇರೆ ಕಡೆ, ಬಂಗಾಳದಲ್ಲಿ, ಸಂಯುಕ್ತಪ್ರಾಂತ್ಯದಲ್ಲಿ, ಬೊಂಬಾಯಿಯಲ್ಲಿ ಎಷ್ಟು ಕೆಲಸ ನಡೆಯುತ್ತಿದೆ; ಎಷ್ಟೋ ಜನ ಆಗಲೇ ಜೈಲಿಗೆ ಹೋಗಿದ್ದಾರೆ. ಸತ್ಯಾಗ್ರಹಿಗಳ ತಂಡತಂಡವೇ ಸಿದ್ಧವಾಗಿದೆ. ನೀವು ಹೇಳುತ್ತೀರಿ, ನಮ್ಮ ಜನವನ್ನ ದೂರಬಾರದು — ಎಂದು. ಇನ್ನೇನು ಮಾಡಬೇಕು ಹೇಳಿ; ಈ ಜನದಲ್ಲೇ ಏನೋ ದೋಷ ಉಂಟೋ ಇಲ್ಲವೋ" —ಸೂರಪ್ಪಯ್ಯನ ಮಾತು ವೇದಿಕೆಯ ಮೇಲಿನ ಮಾತಿನಂತೆ ಮೊಳಗಿತು. ಮಾತು ಮುಗಿದ ಬಳಿಕ ಸುತ್ತಲೂ ಕಣ್ಣು ಹೊರಳಿಸಿದ. ಎಲ್ಲರ ಮುಖದಲ್ಲೂ ತನ್ನ ಮಾತಿಗೆ ಒಪ್ಪಿಗೆ ಸೂಚಿತವಾಗಿದ್ದನ್ನು ಕಂಡು ಮುಗುಳುನಗೆ ನಕ್ಕು ಆ ವಿಚಿತ್ರ ವ್ಯಕ್ತಿಯ ಕಡೆ ಕೆಳನೋಟ ಬೀರಿದ.

"ಈ ಜನ ಹೀಗಿರುವುದಕ್ಕೆ ಏನು ಕಾರಣ ಅಂತ ನಿಮ್ಮ ಅಭಿಪ್ರಾಯ?" ಮತ್ತೆ ಅದೇ ಗಂಭೀರ ಖಚಿತಧ್ವನಿ.

"ಕಾರಣ? ಕಾರಣವೇನು? ಈ ಜನ ಇರುವುದೇ ಹಾಗೇ."

"ಬೇರೆ ಕಡೆ ಹೀಗೆ ಯಾಕಿಲ್ಲ?"

"ಅದು ನಾನು ಹೇಗೆ ಹೇಳೋಣ? ಅದು ಅವರವರ ಸ್ವಭಾವ." ಸರಿಯಾಗಿ ಉತ್ತರಕೊಡಲು ಆಗುತ್ತಿಲ್ಲವಲ್ಲಾ ಎಂಬ ಕೋಪ ಬೆರೆತ ಧ್ವನಿಯಲ್ಲಿ ಸೂರಪ್ಪಯ್ಯ ನುಡಿದ.

“ಹೋಗಲಿ, ಅದಕ್ಕೆ ಕಾರಣ ನಾನು ಹೇಳಲೋ?” ಶಾಂತವಾಗಿ ಮಾತು ಜಿನುಗಿತು.

“ಹೇಳಿ, ಕೇಳೋಣ; ಅದಕ್ಕೇನಂತೆ”—ರಾಜಶೇಖರಿಯ ಮಾತು.

“ಅದಕ್ಕೆ ಇನ್ನೆಲ್ಲೂ ಕಾಣದಂಥ ಬಡತನವೇ ಕಾರಣ; ಇಂಥ ಬಡತನ ವಿದ್ದರೆ ಮನುಷ್ಯ ಮನುಷ್ಯನಾಗುವುದು ಸಾಧ್ಯವಿಲ್ಲ. ಇಂಥ ಬಡತನ ಅಭಿಮಾನವನ್ನು ಕೊಲ್ಲುತ್ತದೆ; ಅಭಿಮಾನವಿಲ್ಲದ ಕಡೆ ತಲೆಬಾಗುವುದಲ್ಲದೆ, ಸೆಟೆದು ನಿಲ್ಲುವುದಿಲ್ಲ.”

“ನಿಮ್ಮ ಮಾತು ಸರಿಯೆ. ಆದರೆ ಬಡವರಿಗಾಗಿಯೇ ಗಾಂಧೀಜಿ ಸತ್ಯಾಗ್ರಹ ಹೂಡಿರುವುದಲ್ಲವೆ? ತಮ್ಮ ಕೆಲಸದಲ್ಲಿ ತಾವೇ ಭಾಗವಹಿಸುವುದಿಲ್ಲ ವಲ್ಲ ಈ ಜನ—ಅದಕ್ಕೇನು ಹೇಳುತ್ತೀರಿ?” ತಾನು ಬಲವಾದ ಒಂದು ‘ಪೈಂಟ್’ ಹಾಕಿದೆ ಎಂಬ ಸಂತೋಷ ಅವನ ಮಾತಿನಲ್ಲಿ ಉಕ್ಕಿತು.

“ಅವರಿಗೆ ಇದು ತಮ್ಮ ಕೆಲಸ ಎಂದು ಯಾರು ಹೇಳಿದ್ದಾರೆ? ಅವರಿಗೆ ಅದು ಹೇಗೆ ಗೊತ್ತಾಗಬೇಕು?”

“ಎಷ್ಟು ದಿನಗಳಿಂದ ಗಾಂಧೀಜಿ ನೆಹರೂ ಮುಂತಾದವರು ಈ ವಿಷಯ ವನ್ನು ಪ್ರಚಾರಮಾಡುತ್ತಿದ್ದಾರೆ! ಆದರೂ ಇವರ ಕಿವಿಗೆ ಅದು ಮುಟ್ಟುವು ದಿಲ್ಲವಲ್ಲ.”

“ಅವರು ಅಷ್ಟು ಪ್ರಚಾರಮಾಡಿದ್ದರಿಂದ, ಕೆಲಸ ಮಾಡಿದ್ದರಿಂದ ಜನ ರಲ್ಲಿ ಇಷ್ಟಾದರೂ ಜಾಗ್ರುತಿ ಹುಟ್ಟಿದೆ. ಈಗ ಎರಡು ವರ್ಷಕ್ಕೆ ಮೊದಲು ಈ ದೇಶದಲ್ಲಿ ಜೀವವಾದರೂ ಇದ್ದಿತ್ತೆ? ಇನ್ನೂ ಸರಿಯಾಗಿ ಈ ವಿಷಯ ಜನಕ್ಕೆ ತಿಳಿಯಬೇಕು. ಈ ಸ್ವಾತಂತ್ರ್ಯ ಸಂಗ್ರಾಮ ತಮ್ಮದೇ ಎಂಬುದು ಅವರಿಗೆ ಅರ್ಥವಾಗಬೇಕು.”

“ನೋಡಿ ಸ್ವಾಮಿ, ನಾನು ಈಗ ಒಂದು ವರ್ಷದಿಂದ ಈ ಪ್ರದೇಶದಲ್ಲಿ ಇದೇ ಕೆಲಸ ಮಾಡುತ್ತಿರುವೆನಲ್ಲ. ಏನು ಫಲ? ನಾನು ಕಷ್ಟಪಟ್ಟದ್ದೆಷ್ಟೋ ಅಷ್ಟೆ.”

“ನೀವು ಎಂದರೆ ನಿಮ್ಮಂಥವರು ಸರಿಯಾದ ರೀತಿಯಲ್ಲಿ ಕೆಲಸಮಾಡು ತ್ತಿಲ್ಲ, ನಿಮ್ಮ ಪರಿಶ್ರಮ ಸರಿಯಾಗಿ ವಿನಿಯೋಗವಾಗುತ್ತಿಲ್ಲ—ಅಷ್ಟೆ.”

ಸೂರಪ್ಪಯ್ಯನ ಮುಖ ಕೊಂಚ ಪೆಚ್ಚಾಯಿತು. ತನ್ನನ್ನು ಆಕ್ಷೇಪಿ

ಸಲು ಇವನು ಯಾರು? ಎಂದು ಅವನ ಅಹಂಕಾರ ಕೇಳತೊಡಗಿತು. ಆದರೂ

"ಸರಿಯಾದ ರೀತಿಯಲ್ಲಿ ಎಂದರೆ? ಹೇಳಿ ನೋಡೋಣ!"

"ನೀವೆಲ್ಲ ಹೆಚ್ಚಾಗಿ ಪಟ್ಟಣದಲ್ಲೇ ಓಡಾಡುತ್ತೀರಿ. ಎಷ್ಟು ಹಳ್ಳಿಗಳಿಗೆ ಹೋಗಿದ್ದೀರಿ, ಹೇಳಿ. ಹಳ್ಳಿಯವರಂತೆ, ಬಡವರಂತೆ ನೀವೂ ಜೀವನ ನಡಸುತ್ತಿದ್ದೀರಾ? ಮುಖಂಡರಾಗುವ ಆಶೆಗಿಂತ ಕೆಲಸವನ್ನು ಪರಿಣಾಮಕರವಾಗಿ ಮಾಡುವ ಆಶೆ ಹೆಚ್ಚಾಗಬೇಕು. ವಿಶಾಲವಾದ ಜನಸಮೂಹಕ್ಕೆ ಈ ಸಂಗ್ರಾಮದ ಕಾವು ತಟ್ಟಲು ಕಾಲ ಬೇಕು. ತಿಳಿವಳಿಕೆಯಿಲ್ಲದ, ಪೋಲೀಸರೆಂದರೆ ಗಡಗುಟ್ಟಿ ನಡುಗುವ ಈ ಜನದ ಶತಮಾನಗಳ ದಾಸ್ಯಮನೋಭಾವ ಹೋಗಬೇಕಾದರೆ ಅದು ಒಂದೆರಡು ದಿನಗಳಲ್ಲಿ ಆಗುವ ಕೆಲಸವಲ್ಲ. ಅದಕ್ಕಾಗಿ ಕಾಯುವ ತಾಳ್ಮೆಯನ್ನು ನೀವೆಲ್ಲರೂ ಅಭ್ಯಾಸಮಾಡಬೇಕು."

ಮಾತು ಚಾಟಿಯೇಟಿನಂತೆ ಬಾರಿಸಿತು. ಸೂರಪ್ಪಯ್ಯ ಅಸಮಾಧಾನದಿಂದ ಮಿಡುಕಾಡುತ್ತಿರುವುದು ಎಲ್ಲರಿಗೂ ಕಂಡಿತು. ಈ ವಿಚಿತ್ರವ್ಯಕ್ತಿಯ ಮಾತು ಮಿತಿಮೀರುತ್ತಿರುವಂತೆ ಅವನಿಗೆ ತೋರಿತು.

"ನಮ್ಮನ್ನು ಬಿಟ್ಟುಬಿಡಿ. ನಮಗೆಲ್ಲ ಮುಖಂಡರಾಗುವ ಆಸೆ. ತಾವು ಅದೇನು ಕೆಲಸ ಮಾಡಿದ್ದೀರಿ? ಹೇಳೋಣವಾಗಲಿ." ಮಾತು ವ್ಯಂಗ್ಯವಾಗಿ ಕುಟುಕಿತು.

"ನಾನೆ? ನಾನು ಕೆಲಸಮಾಡುವ ಜಾತಿಯೇ ಅಲ್ಲ, ಕ್ಷಮಿಸಿ. ನಾನು ಬರುತ್ತೇನೆ" ಎಂದು ಆ ವಿಚಿತ್ರವ್ಯಕ್ತಿ ಹಾಗೆಯೇ ಮತ್ತೊಂದು ಮಾತಾಡದೆ ಎದ್ದು ಹೊರಟುಹೋದ. ಈ ವಾದದಿಂದ ಸೂರಪ್ಪಯ್ಯನಿಗೆ ತನ್ನ ಅಭಿಮಾನಕ್ಕೆ ಕೊಂಚ ಧಕ್ಕೆ ಬಂದಹಾಗೆ ತೋರಿತು. ಹೇಗಾದರೂ ಅದನ್ನು ಸರಿಪಡಿಸಿಕೊಳ್ಳಬೇಕೆಂದು ಹೋಟಲಿನ ಯಜಮಾನ ಹೊಟ್ಟೆರಾಮಯ್ಯನನ್ನು ಕುರಿತು,

"ಯಾರ್ರಿ ಅದು—ಆ ಮನುಷ್ಯ, ಭಲೆ ತಲೆಹರಟೆ ಅಂತ ಕಾಣುತ್ತದೆ" ಎಂದ.

"ಅವರೇ! ಮಠದಕಟ್ಟೆ ರಾಮಕೃಷ್ಣರಾವ್ ಅಂತ ಅವರ್ ಹೆಸರು. ಏನೋ ಬಿ. ಎ. ಪಾಸುಮಾಡಿದ್ದಾರಂತೆ—ಯಾವ ಕೆಲಸವೂ ಸಿಕ್ಕದೆ ಮನೆಯಲ್ಲೇ ಇದ್ದಾರೆ. ಯಾವುದಾದರೂ ಒಂದು ಪುಸ್ತಕವನ್ನು ಹಿಡಿದುಕೊಂಡು

ಓದುತ್ತಲೇ ಇರುತ್ತಾರೆ   ತಲೆಯೂ ಸ್ವಲ್ಪ ಕೆಟ್ಟದೆ ಅಂತ ವದಂತಿ"

"ನನಗೂ ಹಾಗೇ ಅನಿಸಿತ್ತು. ಆ ಮನುಷ್ಯನ ಮಾತು ಕೇಳಿದಿರಲ್ಲ, ಅರ್ಧ ಹುಚ್ಚು ಎನ್ನುವುದಂತೂ ಖಾತ್ರಿ" ಎಂದ ಸೂರಪ್ಪಯ್ಯ, ಎಲ್ಲರೂ ನಕ್ಕರು.

ಮಾಧವನಿಗೆ ಮಾತ್ರ ನಗಬೇಕು ಅನ್ನಿಸಲಿಲ್ಲ. ರಾಮಕೃಷ್ಣರಾಯನ ಮಾತು ಹುಚ್ಚು ಮಾತು ಅಂತಲೂ ಅವನಿಗೆ ತೋರಲಿಲ್ಲ. ಆದರೆ ಸೂರಪ್ಪಯ್ಯನಂಥ ದೇಶಭಕ್ತನನ್ನು ಅವನು ಆ ರೀತಿ ಟೀಕಿಸಿದ್ದು ಸರಿಯಲ್ಲ ಎಂದುಕೊಂಡ.

ಮಾರನೆಯ ದಿನವೇ ಪೋಲೀಸರು ವಾರಂಟು ಹಿಡಿದುಕೊಂಡು ಕುಂದಾಪುರವನ್ನೆಲ್ಲ ಸುತ್ತಿದರು. ಆದರೆ ಸೂರಪ್ಪಯ್ಯ ಅವರಿಗೆ ಸಿಕ್ಕಲಿಲ್ಲ. ಆ ಮೇಲೆ ಒಂದು ವರ್ಷದ ತನಕ ಅವನ ಪತ್ತೆಯೇ ಇಲ್ಲ. ಮತ್ತೆ ಮಾಧವ ಕೃಷ್ಣರಿಗೆ ಅವನ ವರ್ತಮಾನ ಸಿಕ್ಕಿದ್ದು ದೀಪಾವಳಿಗೆ ಅವರು ತಮ್ಮೂರಿಗೆ ಹೋದಾಗಲೇ.

*   *   *   *   *

ಮಾರನೆಯ ದಿನ ಬೆಳಗ್ಗೆ ಹೊಸಕೋಟೆಯ ದೇವಸ್ಥಾನದ ಹೆಬ್ಬಾಗಿಲಲ್ಲಿ ಸಭೆ ನೆರೆಯಿತು — ಗುಪ್ತವಾಗಿ. ಸೂರಪ್ಪಯ್ಯ, ಮಾಧವ, ಕೃಷ್ಣ, ಮೊಗವೀರ ಶೇಷ, ಗಾಣಿಗರ ಗಣಪತಿ, ಅಂಬಾಗಿಲ ಅನಂತಯ್ಯ — ಇವರೇ ಸಭಿಕರು. ಸೂರಪ್ಪಯ್ಯನ ಮುಖ ಕೊಂಚ ಸೋತಂತೆ ಇತ್ತಲ್ಲದೆ ಅವನಲ್ಲಿ ಇನ್ನಾವ ಬದಲಾವಣೆಯೂ ಕಾಣಲಿಲ್ಲ.

"ಏನು ಸೂರಪ್ಪಯ್ಯನವರೇ, ಇಷ್ಟು ದಿನ ಕಾಣಿಸಲೇ ಇಲ್ಲ," ಎಂದ ಮಾಧವ.

"ಏನು ಮಾಡುವುದು ಹೇಳಿ. ನನ್ನ ಮೇಲೆ ನಾಲ್ಕೈದು ವಾರಂಟು ಇತ್ತು. ಜೈಲಿಗೆ ಹೋಗಿ ನೆಮ್ಮದಿಯಾಗಿರಬಹುದಿತ್ತು. ನನಗೆ ಅದು ಇಷ್ಟವಿಲ್ಲ. ಕೆಲಸ ನಡೆಯಬೇಕು. ನಾನು ಜೈಲಿಗೆ ಹೋದರೆ ಕೆಲಸ ನಡೆಯುವುದು ಹೇಗೆ?"

"ಆ ಮಾತು ನಿಜ. ಈಗ ಮುಖಂಡರೆಲ್ಲ ಜೈಲಿಗೆ ಹೋಗಿದ್ದಾರೆ. ಜನರಿಗೆ, ಸ್ವಯಂಸೇವಕರಿಗೆ ದಾರಿ ತೋರಿಸುವವರೇ ಇಲ್ಲ" ಎಂದ ಅನಂತಯ್ಯ.

" ಈಗ ನೋಡಿ, ನಿಮ್ಮ ಈ ಉಪ್ಪುಂದ ಬೈಂದೂರು ಕಡೆ ಸತ್ಯಾಗ್ರಹ ಏನೇನೂ ನಡೆದೇ ಇಲ್ಲ. ಇಲ್ಲಿ ಏನಾದರೂ ನಡೆಸಿಯೇ ತೀರಬೇಕೆಂದು ನಾನು ಬಂದಿದ್ದೇನೆ. ನಿಮ್ಮೆಲ್ಲರ ಸಹಾಯವೂ ಅದಕ್ಕೆ ಬೇಕು " ಎಂದ ಸೂರಪ್ಪಯ್ಯ.

ಅಲ್ಲಿ ನೆರೆದಿದ್ದವರೆಲ್ಲ ತರುಣರು, ಹುಡುಗರು. ಮೊಗವೀರ ಶೇಷ ಮಾತ್ರ ಕೊಂಚ ವಯಸ್ಸಾದ ಮನುಷ್ಯ — ವಯಸ್ಸು ಮೂವತ್ತರ ಗಡಿ ದಾಟಿತ್ತು. ೧೯೨೧ರ ಅಸಹಕಾರ ಚಳುವಳಿಯ ಕಾಲದಿಂದಲೂ ಅವನು ಶುದ್ಧ ಗಾಂಧಿ ಭಕ್ತ. ಖಾದಿಯಲ್ಲದೆ ಏನೂ ತೊಡುತ್ತಿರಲಿಲ್ಲ. ಮಾಂಸಾಹಾರ ಅವನು ಬಿಟ್ಟುಬಿಟ್ಟು ವರ್ಷಗಳೇ ಕಳೆದಿದ್ದುವು. ಹೊಗೆಸೊಪ್ಪು, ಸಕ್ಕರೆ ಹತ್ತಿರ ಬರಗೊಡಲಾರ. ಅವನ ಮೇಲೆ ಪೋಲೀಸರಿಗೆ ಯಾವಾಗಲೂ ಕಣ್ಣು. ಈ ಸಾರಿ ಏಕೋ ಇನ್ನೂ ಅವನನ್ನು ಜೈಲಿಗೆ ಎಳೆದಿರಲಿಲ್ಲ. ಅವನ ಮುಖದಲ್ಲಿ ಹೃದಯಪರಿಶುದ್ಧಿಯ ಶಾಂತ ಕಾಂತಿ ಹೊಳೆಯುತ್ತಿತ್ತು. ಕಣ್ಣುಗಳಲ್ಲಿ ಮಗುವಿನ ನಿಷ್ಕಲ್ಮಷತೆ ಬೆಳಗುತ್ತಿತ್ತು. ಗಾಣಿಗರ ಗಣಪತಿ ಬಹಳ ಉತ್ಸಾಹಿ. ಬೈಂದೂರು ಮಿಡ್ಲ್ ಸ್ಕೂಲಿನಲ್ಲಿ ಎರಡು ವರ್ಷಗಳವರೆಗೆ ಓದಿದ್ದ. ಕೆಲವು ದಿನ ಪ್ರಾಥಮಿಕ ಶಾಲೆಯ ಅಧ್ಯಾಪಕನಾಗಿ ಕೆಲಸ ಮಾಡಿ ಕೊನೆಗೆ ಕೃಷಿ ಮಾಡಿದರೆ ದುರ್ಭಿಕ್ಷವಿಲ್ಲವೆಂಬುದನ್ನು ಮನಗಂಡು ತನ್ನೂರಿನಲ್ಲೇ ಎರಡು ಮುಡಿ ಗದ್ದೆ ಬೇಸಾಯ ಮಾಡುತ್ತಿದ್ದ. ಅಂಬಾಗಿಲ ಅನಂತಯ್ಯ ಎಲ್ಲ ಕೆಲಸಕ್ಕೂ ಮುಂದು. ಅವನು ಈವರೆಗೆ ಕೈ ಹಾಕದ ಕೆಲಸವೇ ಇರಲಿಲ್ಲ. ತಿಥಿ ಮಾಡಿಸುವುದರಿಂದ ಹಿಡಿದು ಮಾಸ್ತರು, ಹಳ್ಳಿ ಶ್ಯಾನುಭೋಗ, ಚಿಲ್ಲರೆ ಅಂಗಡಿ ಮಾಲಿಕ, ಸೈಕಲ್ ರಿಪೇರಿ ಮಾಡುವವ—ಹೀಗೆ ಎಲ್ಲದರಲ್ಲೂ ಕೈಯಾಡಿಸಿ ಬೇಸಾಯಕ್ಕೆ ಮತ್ತೆ ಇಳಿದಿದ್ದ. ಆದರೆ ಸುಮ್ಮನೆ ಕುಳಿತುಕೊಳ್ಳುವ ಆಸಾಮಿ ಅಲ್ಲ. ಪುಸ್ತಕಗಳಲ್ಲಿ ಅವನಿಗಿದ್ದ ಮೋಹ ಲೋಕವಿಶ್ರುತವಾದದ್ದು. ಪುಸ್ತಕಕ್ಕಾಗಿ ಅವನು ಕಾಲು ಹಿಡಿದು ಅಂಗಲಾಚಲೂ ಸಿದ್ಧ. ಒಂದುಸಲ ಇನ್ನೊಬ್ಬರ ಪುಸ್ತಕ ತನ್ನ ಕೈಗೆ ಬಂದರೆ ಮತ್ತೆ ಅದು ಹಿಂದೆ ತನ್ನ ಒಡೆಯನ ಕೈಗೆ ಹೋಗಲೂ ಇವನು ಬಿಡಲಾರ. ಅವನ ಪುಸ್ತಕಮೋಹ ಅಷ್ಟು ಗಾಢವಾದದ್ದು. ಈ ರೀತಿ ಅವನು ಒಂದು ಸಣ್ಣ ಪುಸ್ತಕಭಂಡಾರವನ್ನು ಆಗಲೇ ಮನೆಯಲ್ಲಿ ಬೆಳಸಿಬಿಟ್ಟಿದ್ದ.

" ಹಾಗಾದರೆ ಇಲ್ಲಿ ಏನು ಮಾಡಬೇಕು ಅಂತ ಇದ್ದೀರಿ ? " ಶೇಷ

ಸೂರಪ್ಪಯ್ಯನನ್ನು ಕೇಳಿದ.

" ಈ ದಿನ ಇಲ್ಲಿ ಕಂಭದಕೋಣೆಯ ಹೆಂಡದಂಗಡಿ ಮುಂದೆ ಪಿಕೆಟಿಂಗ್ ನಡೆಸಬೇಕು. ಪಿಕೆಟಿಂಗ್ ಯಶಸ್ವಿಯಾದರೆ ಆ ಮೇಲೆ ನಾವು ಅರಣ್ಯಸತ್ಯಾಗ್ರಹ ಶುರು ಮಾಡಬಹುದು. ನಿಮ್ಮ ಅಭಿಪ್ರಾಯವೇನು. ? "

" ಶುರುವೇನೋ ಮಾಡಬಹುದು. ಆದರೆ ಅದನ್ನು ಮುಂದುವರಿಸಿ ಕೊಂಡು ಹೋಗಲು ಆಗುತ್ತದೋ- ನೋಡಬೇಕು. " ಶೇಷ ಕೊಂಚ ಸಂದೇಹ ದಿಂದ ಎಂಬಂತೆ ಹೇಳಿದ.

" ನಿಮ್ಮಂಥವರೇ ಹೀಗೆ ಹೇಳಿದರೆ ಕೆಲಸ ನಡೆಯುವುದು ಹೇಗೆ? ಒಂದಷ್ಟು ಪ್ರಚಾರ ಮಾಡಿ ಸ್ವಯಂಸೇವಕರನ್ನು ಕೂಡಿಸಬೇಕು. "

" ಅಂತೂ ಏನಾದರೂ ಮಾಡಲೇ ಬೇಕು. ಇಲ್ಲವಾದರೆ ಶುದ್ಧ ಅವಮಾನ — ನಮ್ಮ ಈ ಪ್ರಾಂತ್ಯಕ್ಕೇ " ಅಂದ ಗಣಪತಿ.

" ಸರಿ, ನಾನಂತೂ ಎಲ್ಲದಕ್ಕೂ ಸಿದ್ಧನೇ. ಜೈಲಿಗೂ ಸರಿ " ಎಂದ ಅನಂತಯ್ಯ.

" ನಾವೂ ಇಲ್ಲಿ ಇವತ್ತು ಇರುತ್ತೇವಲ್ಲ, ನಾವೂ ಬರುತ್ತೇವೆ; ಪಿಕೆಟಿಂಗ್ ಶುರು ಮಾಡಿಯೇ ಬಿಡೋಣ. ನಾಳೆ ಸಂಜೆ ನಾವು ಕುಂದಾಪುರಕ್ಕೆ ಹೊರಡಬೇಕು " ಎಂದ ಕೃಷ್ಣ.

" ಶಾಲೆ ಶಾಲೆ ಎಂತ ಈ ಹುಡುಗರು ಏಕೆ ಪೇಚಾಡುತ್ತಾರೋ ಕಾಣೆ. ಈ ಹಾಳು ವಿದ್ಯಾಭ್ಯಾಸದಿಂದ ಏನು ಪ್ರಯೋಜನ? " ಎಂದ ಸೂರಪ್ಪಯ್ಯ.

ಆದರೆ ಮಾಧವನಿಗೆ ಹಾಗೆ ಅನ್ನಿಸಿರಲಿಲ್ಲ. ವಿದ್ಯೆಯಲ್ಲಿ ಅವನಿಗೆ ತುಂಬ ಪ್ರೀತಿ ಇತ್ತು. ಓದಬೇಕು, ಇನ್ನೂ ಓದಬೇಕು — ಅರಿವಿನ ಗಡಿ ಮುಟ್ಟಬೇಕು ಎಂಬುದೇ ಅವನ ಆಶೆ. ಆದಕಾರಣ ಅವನು ಆ ಮಾತಿಗೆ ಪ್ರತಿ ಹೇಳಲಿಲ್ಲ.

" ನನಗಂತೂ ಈ ಶಾಲ್ಕೆ ಈ ವಿದ್ಯಾಭ್ಯಾಸ ಎಲ್ಲ ಬೇಜಾರಾಗಿ ಹೋಗಿದೆ " ಎಂದ ಕೃಷ್ಣ. — ಸಂಗೀತವೊಂದು ಬಿಟ್ಟು ಅವನಿಗೆ ಇನ್ನೇನೂ ಅಷ್ಟು ಹಿಡಿಸುತ್ತಿರಲಿಲ್ಲ.

" ಸರಿ ಹಾಗಾದರೆ. ಈ ದಿನ ಸಂಜೆ ಆರು ಗಂಟೆಗೆ ನಾನು ಕಂಭದ ಕೋಣೆಯಲ್ಲಿ ನಿಮ್ಮನ್ನು ನೋಡುತ್ತೇನೆ " ಎಂದ ಶೇಷ.

" ಅಂತೂ ಈ ದಿನ ಇಲ್ಲಿ ಸರಕಾರದ ಮೇಲೆ ಯುದ್ಧ ಸಾರಲೇ ಬೇಕು. ಎಲ್ಲರೂ ಬರುತ್ತೀರಲ್ಲವೇ ? " ಸೂರಪ್ಪಯ್ಯ ಕೇಳಿದ.

" ಹೂ " ಎಂದು ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೊರಟರು. ಮಾಧವ ಮತ್ತು ಸೂರಪ್ಪಯ್ಯ ಮಾತ್ರ ಅಲ್ಲಿ ಉಳಿದರು.

" ನೋಡಿ, ಆ ದಿನ ಕುಂದಾಪುರದಲ್ಲಿ ನಿಮ್ಮ ಭಾಷಣ ಕೇಳಿದ ಮೇಲೆ ನನ್ನ ಮನಸ್ಸೇ ಒಂದು ತರಹ ಆಗಿದೆ ನೋಡಿ. ದೇಶಕ್ಕಾಗಿ ಏನಾದರೂ ಮಾಡಬೇಕೆಂಬ ಆಶೆ — ಏನು ಮಾಡುವುದಕ್ಕೂ ತೋಚದು. "

" ನಿಮಗೆ ಕೆಲಸಮಾಡುವ ದಾರಿ ತೋರಿಸುವುದಕ್ಕೇ ನಾನು ಬಂದದ್ದು. ನಮ್ಮ ಕೈಲಾದಷ್ಟು ದೇಶಸೇವೆ ಮಾಡದೆ ಹೋದರೆ ನಾವು ಬದುಕಿ ಫಲ ವೇನು ? "

ಹೌದು, ಬದುಕಿ ಫಲವೇನು ? ಎಂದು ಯೋಚಿಸುತ್ತ ಮಾಧವ ಮನೆಗೆ ಹೋದ. ಅವನ ಮನಸ್ಸು ಪುಟಚೆಂಡಿನಂತೆ ತುಂಬುತ್ತಿತ್ತು. ಹೇಳಲಾರದ ಒಂದು ಕಾತರ ಅಂತರಂಗದಲ್ಲಿ ಮನೆ ಮಾಡಿತು. ರಕ್ತಮಾಂಸಗಳಿಂದ ಕೂಡಿದ ದೇಹ ಇದ್ದಕಿದ್ದಂತೆ ಕೇವಲ ಬೆಳಕಿನದೊಂದು ಗೋಲವಾಗಿ ಮಾರ್ಪಟ್ಟಂತೆ ಅವನಿಗೆ ತೋರಿತು. ನೆಲದ ಮೇಲೆ ಕಾಲು ನಿಂತಿದ್ದರೂ ತಾನು ಆಕಾಶದಲ್ಲಿ ವೈನತೇಯನಂತೆ ತೇಲಾಡುತ್ತಿರುವ ಹಾಗೆ. ಎಷ್ಟೋ ದಿನ ಕ್ಯಾಮರಾ ಹಿಡಿದು ಓಡಾಡಿ ಕಷ್ಟಪಟ್ಟರೂ ತನಗೆ ಬೇಕಾದ ವಸ್ತುವಿನ ಮೇಲೆ ಫೋಕಸ್ ಮಾಡ ಲಾರದೆ ನಿರಾಶನಾದವನಿಗೆ ಬೇಕಾದ ಆ ವಸ್ತು ಕೊನೆಗೂ ಸಿಕ್ಕಿ ಅದು ಫೋಕಸ್ಸಿನಲ್ಲಿ ಸ್ಥಿರವಾಗಿ ನಿಂತುದನ್ನು ಕಂಡರೆ ಹೇಗೋ ಹಾಗೆ ಮಾಧವನ ಮನಸ್ಸು ಕೃತಕೃತ್ಯತೆಯ ಹೊಸ್ತಿಲಲ್ಲಿ ನಿಂತು ಗರಿಗೆದರಿತು. ಭಾರತಮಾತೆಯ ವರದ ಹಸ್ತದ ಕೆಳಗೆ ತನ್ನ ಶಿರಸ್ಸು ಬಾಗಿದ ಚಿತ್ರ ಅವನ ಕಣ್ಣ ಮುಂದೆ ಕುಣಿಯಿತು. ಸುತ್ತಮುತ್ತಲ ನೆಲಕ್ಕೂ ಒಂದು ಹೊಸಕಾಂತಿ ಬಂದಂತೆ ತೋರಿತು. ಆಕಾಶದ ಕಡೆಗೆ ಬಹುದೂರ ಏರಿ ತನ್ನ ಗರಿಗಳನ್ನು ಅಲ್ಲಾಡಿ ಸುತ್ತ ನಿಂತ ತೆಂಗಿನ ಮರ ತಲೆ ಎತ್ತಿ ಎದೆಸೆಟೆದು ನಿಂತ ಸತ್ಯಾಗ್ರಹಿಯ ಹಾಗೆ ಅವನಿಗೆ ಕಂಡಿತು. ಬೀಸುವ ಗಾಳಿಯಲ್ಲಿ ವಂದೇ ಮಾತರಂ ಗೀತದ ನುಡಿ ನುಡಿಯೂ ಮಾರ್ದನಿಗೊಂಡು ಈಜಿ ಬರುತ್ತಿರುವ ಹಾಗೆ ಭಾಸವಾಯಿತು. ಪ್ರತಿಯೊಂದು ನರನರಕ್ಕೂ ರಕ್ತ ಬಂದು ತುಂಬಿತು. ಎದೆ ಡವಗುಟ್ಟಿತು;

ಮುಂದೆ ಚಾಚಿತು. ತೋಳಿನ ಮಾಂಸಖಂಡಗಳನ್ನು ಮುಟ್ಟಿ ನೋಡಿಕೊಳ್ಳುತ್ತ, ಸಿಪಾಯಿಯ ನಡಿಗೆಯಿಂದ ಹೆಜ್ಜೆ ಹಾಕುತ್ತ ಮನೆಗೆ ತೇಲಿ ಬಂದ. "ಮಹಾತ್ಮಾ ಗಾಂಧೀಕೀ ಜೈ" ಎಂಬ ಜಯಕಾರ ಸಮುದ್ರ ನಿರ್ಘೋಷದಂತೆ ಅವನ ಕಿವಿಯಲ್ಲಿ ಮೊರೆಯುತ್ತಿತ್ತು. ಆ ಘೋಷ ಪಶ್ಚಿಮ ಸಮುದ್ರದಿಂದ ಹೊರಟು ಆಕಾಶವನ್ನೆಲ್ಲ ತುಂಬಿ ದಿಕ್ಕುದಿಕ್ಕಿಗೆ ಹರಡುತ್ತಿರುವಂತೆ ತೋರಿತು. ಸಾವಿರಾರು ಜನ ಸಾಲುಸಾಲಾಗಿ ನಿಂತು ಒಕ್ಕೊರಲಿನಿಂದ ಆ ಜಯಕಾರ ವನ್ನು ಕೂಗುತ್ತಿರುವ ದೃಶ್ಯ, ಆ ಕೂಗಿಗೆ ಬೆಟ್ಟಬೆಟ್ಟಗಳೂ ತತ್ತರಿಸಿ ಬೀಳುವ, ಗುಂಡುತುಪಾಕಿಗಳಿಂದ ಸಜ್ಜಿತರಾದ ಸೈನಿಕರೂ ಅದುರಿ ಕುಸಿದು ಬೀಳುವ ನೋಟ ಅವನಿಗೆ ಕಾಣಿಸುತ್ತಿತ್ತು.

"ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ ಮಾಧವಾ" ಎಂದು ವಾಸು ದೇವಯ್ಯ ಕೇಳಿದರು. ತಂದೆಯಲ್ಲಿ ವಿಶೇಷವಾದ ಭಕ್ತಿ ಮಾಧವನಿಗೆ. ವಾಸುದೇವಯ್ಯನವರು ಉದಾರ ಮನಸ್ಕರು. ಕೋಪಕ್ಕಿಂತ ಹೆಚ್ಚಾಗಿ ಪ್ರೀತಿ ಯಿಂದ ಕೆಲಸ ಸಾಧಿಸುವ ಗುಣ ಅವರದ್ದು. ಶಾಂತವಾದ ಮಾತು, ಮನಸ್ಸನ್ನು ಮುಟ್ಟುವ, ತಟ್ಟುವ, ಒಲಿಸಿಕೊಳ್ಳುವ ನಡೆ. ಯಾರ ಮನಸ್ಸನ್ನೇ ಆಗಲಿ ಅವರು ನೋಯಿಸುವುದು ಕಡಿಮೆ. ಹಾಗೆ ನೋಯಿಸಿದಾಗ, ನೋಯಿಸಲೇ ಬೇಕಾಗಿ ಬಂದಾಗ, ನೋಯಿಸಿಕೊಂಡವರಿಗಿಂತ ಇವರೇ ಹೆಚ್ಚಾಗಿ ಸಂಕಟ ಪಡುತ್ತಿದ್ದರು. ಅವರ ಈ ಗುಣಗಳನ್ನು ಅರಿತಿದ್ದ ಮಾಧವ ತನ್ನ ತಂದೆಯಲ್ಲಿ ವಿಶೇಷ ಗೌರವ ತೋರಿಸುತ್ತಿದ್ದ.

"ಸೂರಪ್ಪಯ್ಯ ಬಂದಿದ್ದರು. ನಾನು, ಕೃಷ್ಣ, ಶೇಷ, ಅನಂತಯ್ಯ ಎಲ್ಲ ಕೂಡಿ ದೇವಸ್ಥಾನದಲ್ಲಿ ಮಾತಾಡುತ್ತಿದ್ದೆವು."

"ಸೂರಪ್ಪಯ್ಯ? ಯಾವ ಸೂರಪ್ಪಯ್ಯ?"

"ಅವರೇ — ಆ ಸ್ವಯಂಸೇವಕರು."

"ಏನು ವಿಶೇಷ?"

"ಇಲ್ಲಿ ಏನಾದರೂ ಚಳುವಳಿ ನಡೆಸಬೇಕು ಅಂತ ಬಂದಿದ್ದಾರೆ. ಕಡೆ ಏನೂ ನಡೆಯಲಿಲ್ಲ ಅಂತ ಬಹಳ ಪೇಚಾಡುತ್ತಿದ್ದಾರೆ."

"ನಿಮ್ಮ ಸಭೆಯಲ್ಲಿ ಏನು ತೀರ್ಮಾನವಾಯಿತು?" ಎಂದು ನಸುನಗೆ ಯಿಂದ ಕೇಳಿದರು ವಾಸುದೇವಯ್ಯ.

" ಈ ದಿನ ಸಂಜೆ ಕಂಭದಕೋಣೆ ಹೆಂಡದಂಗಡಿಯ ಮುಂದೆ ಪಿಕೆಟಿಂಗ್ ನಡಸಬೇಕೆಂದು ನಿಶ್ಚಯಿಸಿದ್ದಾರೆ.

" ನಡಸುವವರು ಯಾರು ? "

" ನಾವೆಲ್ಲರೂ "

" ಏನು, ನೀನೂ ಸ್ವಯಂಸೇವಕನಾಗಿ ಬಿಡುತ್ತೀಯ ? "

" ಈವತ್ತು ಹೋಗಿ ಬರುತ್ತೇನೆ — ಅಷ್ಟೆ. "

" ಅಷ್ಟರಿಂದ ಏನು ಪ್ರಯೋಜನ ಮಗೂ; ನಿನಗೆ ವಿದ್ಯಾಭ್ಯಾಸ ಸಾಕು ಅನ್ನಿಸಿತೇ ? "

" ಇಲ್ಲ "

" ಹಾಗಾದರೆ ಈ ಕೆಲಸಕ್ಕೆ ಈಗ ತೊಡಗುವುದು ಬೇಡ. ಎರಡು ಕೆಲಸ ಒಂದೇ ಸಲಕ್ಕೆ ಮಾಡಲು ಸಾಧ್ಯವಿಲ್ಲ. "

"ಇಲ್ಲ ಇವತ್ತು ಹೋಗುತ್ತೇನೆ. ಬರುತ್ತೇನೆಂದು ಅವರಿಗೆಲ್ಲ ಹೇಳಿದ್ದೇನೆ."

" ಆಗಲಿ, ಹೋಗು; ಬೇಡ ಅನ್ನುವುದಿಲ್ಲ. ಆದರೆ ಸ್ವಲ್ಪ ಯೋಚನೆ ಮಾಡು " ಎಂದರು, ಮತ್ತೆ ಅವರು ಏನೂ ಮಾತಾಡಲಿಲ್ಲ. ಮಾಧವನ ಉತ್ಸಾಹ ಕೊಂಚ ಕುಗ್ಗಿತು, ತನ್ನ ತಂದೆಯ ಮಾತು ಸರಿ ಎನ್ನಿಸಿತು; ಆದರೆ ಉತ್ಸಾಹ ಬಹಳ ಕಾಲ ತಗ್ಗಿ ಇರುವ ಕಾಲ ಅದಲ್ಲ. ಎಲ್ಲ ಬಗೆಯ ಸಣ್ಣಸಣ್ಣ ಅಡೆತಡೆಗಳನ್ನು ನುಂಗಿ ಮುನ್ನುಗ್ಗುವ ಹೊಸ ಪ್ರವಾಹದಂತೆ ಮನಸ್ಸು ಮುಂದೋಡಿತು.

ಆ ಸಂಜೆ ಹೆಂಡದಂಗಡಿಯ ಮುಂದೆ ಈ ಸ್ವಯಂಸೇವಕರೆಲ್ಲಾ ನೆರೆದರು. ಆರು ಗಂಟೆಯ ಹೊತ್ತು. ಸುರಾದೇವಿಯ ಭಕ್ತರೆಲ್ಲ ಒಬ್ಬೊಬ್ಬರಾಗಿ ಆ ಕಡೆ ಚಿತ್ತಯಿಸುವ ಕಾಲ. ದೇವಿಯ ಪೂಜಾರಿ ಮಂಜಾಸ ಈ ಗಾಂಧಿಟೋಪಿಗಳನ್ನು ನೋಡಿ ಹುಬ್ಬು ಗಂಟಿಕ್ಕಿದ. ಒಂದಕ್ಕೆ ಹತ್ತು ತೆತ್ತು ಆ ವರ್ಷ ಅವನು ಕಂಟ್ರಾಕ್ಟು ವಹಿಸಿಕೊಂಡಿದ್ದ. ಬೇರೆ ಕಡೆ ಏನೇ ಆಗಲಿ ತನ್ನ ಲಾಭಕ್ಕಂತು ಮೋಸವಿಲ್ಲ ಎಂದು ನಂಬಿದ್ದವನಿಗೆ ಈ ಗಾಂಧಿಕಡೆಯವರನ್ನು ಕಂಡು ಗಾಬರಿಯಾಯಿತು. ಬಂತಪ್ಪ ಗ್ರಹಚಾರ ಎಂದು ಕೊಂಡ; ಸೂರಪ್ಪಯ್ಯನ ನೇತೃತ್ವದಲ್ಲಿ ಸ್ವಯಂಸೇವಕದಳ ಹೆಂಡದಂಗಡಿಗೆ ಸ್ವಲ್ಪ ದೂರದಲ್ಲಿ ಎರಡು ಸಾಲಾಗಿ ನಿಂತಿತು. ಕುಡಿಯಲು ಹೋಗುವವರು ಈ ಎರಡು ಸಾಲುಗಳ

ನಡುವಿನಿಂದಲೇ ಹೋಗಬೇಕು. ಈ ತಮಾಷೆಯನ್ನು ನೋಡಲು ಸುತ್ತು-ಮುತ್ತಣ ಅಂಗಡಿಯವರೂ, ಅಕ್ಕಪಕ್ಕದ ಮನೆಯವರೂ, ಸ್ವಲ್ಪ ದೂರದಲ್ಲೇ ತಮಗೂ ಈ ಸ್ವಯಂಸೇವಕ ದಳದವರಿಗೂ ಏನೇನೂ ಸಂಬಂಧವಿಲ್ಲವೆಂಬದನ್ನು ರುಜುವಾತು ಪಡಿಸುವುದಕ್ಕೋ ಎಂಬಂತೆ ನಿಂತರು. ಅಷ್ಟು ಜನರ ಮಧ್ಯೆ ನಿಂತ ಮಾಧವನ ಮನಸ್ಸು ಒಂದು ತರಹವಾಯಿತು. ಜನರ ಮಧ್ಯೆ ಬಂದರೆ ಅವನಿಗೆ ಯಾವಾಗಲೂ ಹಾಗೇ. ಎಲ್ಲ ಕಣ್ಣುಗಳೂ ತನ್ನ ಮೇಲೇ ಇರುವ ಹಾಗೆ, ತನ್ನ ಅಡಿಯಿಂದ ಮುಡಿಯವರೆಗೂ ಆ ಕಣ್ಣುಗಳು ಪರೀಕ್ಷಿಸುತ್ತಿರುವ ಹಾಗೆ ಅವನಿಗೆ ಅನಿಸಿತು; ಮೈ ಬೆವರಿತು; ಕಾಲು ಕೊಂಚ ನಡುಗಿತು; ಮುಖವೆತ್ತಿ ನೋಡುವ ಸಾಹಸ ಅವನಿಗಾಗಲಿಲ್ಲ. ಆದರೆ ಸೂರಪ್ಪಯ್ಯ ತಾನೊಬ್ಬ ಮಹಾ ಸೇನಾನಿಯೋ ಎಂಬಂತೆ ಅಷ್ಟ ದಿಕ್ಕಿಗೂ ಕಣ್ಣು ಹರಿಸುತ್ತ ನಿಂತ ಆ ಠೀವಿಯನ್ನು ಆ ಗಂಡು ನಿಲುವನ್ನು ಕಂಡು ಮಾಧವ ಮನಸ್ಸಿನಲ್ಲಿಯೇ "ಶಾಭಾಸ್" ಎಂದ. ಕೃಷ್ಣ ಅನಂತಯ್ಯನೊಡನೆ ಏನೋ ಪಿಸುಮಾತು ಆಡುತ್ತಿದ್ದ. ಮೊಗವೀರ ಶೇಷನ ಮುಖ ಎಂದಿನಂತೆಯೇ ಶಾಂತವಾಗಿತ್ತು. ಗಾಣಿಗರ ಗಣಪತಿ ಮಾತ್ರ ಬೆಂಕಿಯ ಕೆಂಡ ತುಳಿಯುತ್ತಿರುವವನಂತೆ ಕಾಲನ್ನು ಬದಲಿಸುತ್ತ ನಿಂತಿದ್ದ.

"ಗಾಂಧೀ ಮಹಾರಾಜಕೀ ಜೈ"– ಸೂರಪ್ಪಯ್ಯನ ಕಂಠ ಮೊಳಗಿತು.

"ಗಾಂಧೀ ಮಹಾರಾಜಕೀ ಜೈ" ಉಳಿದೆಲ್ಲರ ಕಂಠಗಳೂ ಮೊಳಗಿದುವು. ಮಾಧವನ ಬಾಯಿಂದಲೂ ಜಯಕಾರ ಅಸ್ಪಷ್ಟವಾಗಿ ಹೊರಟಿತು. ಅಷ್ಟು ಜನರ ನಡುವೆ ನಿಂತು ಹಾಗೆ ಕಿರುಚುವುದು ಏಕೋ ಅವನಿಗೆ ಹಿತವೆನಿಸಲಿಲ್ಲ.

"ವಂದೇ ಮಾತರಂ" ಮತ್ತೆ ಅದೇ ಕಂಚಿನ ಕಂಠ ಮೊಳಗಿತು.

"ವಂದೇ ಮಾತರಂ" ಎಲ್ಲರೂ ದನಿಗೂಡಿಸಿದರು. ಕೂಗು ಅಕ್ಕಪಕ್ಕದಲ್ಲಿ ಶ್ರೋತೃಗಳಾಗಿ ನಿಂತಿದ್ದ ಕೆಲವರನ್ನೂ ಹೊಡೆದೆಬ್ಬಿಸಿತು. ಅವರೂ "ವಂದೇ ಮಾತರಂ" ಎಂದರು. ಇದನ್ನು ಕಂಡು ಸೂರಪ್ಪಯ್ಯನ ಸಂತೋಷ ಹೇಳಿ ತೀರದು. ಅವನು ಮತ್ತೆ 'ವಂದೇ ಮಾತರಂ' ಎಂದು ಗರ್ಜಿಸಿದ.

ಆ ಗರ್ಜನೆ ವಿದ್ಯುತ್ತಿನಂತೆ ಸುತ್ತಲೂ ಹರಡಿತು. ಅದರ ಪ್ರತಿಧ್ವನಿ ಸುತ್ತಮುತ್ತಲಿನ ಮರಗಿಡಗಳನ್ನು ಮುತ್ತಿ ಆಕಾಶಕ್ಕೇರಿ ಮೋಡಗಳೊಡನೆ ಆಡಿ ಮತ್ತೆ ಕೆಳಗಿಳಿದು ಪ್ರೇಕ್ಷಕರ ಮನಸ್ಸನ್ನು ಕವಿದು ತಿವಿಯಿತು.

ನೂರು ಕಂಠಗಳು ಮೊಳಗಿದುವು: " ವಂದೇ ಮಾತರಂ " – ಸಮುದ್ರದ ಗರ್ಜನೆಯಂತೆ.

ಈ ಕೂಗಿನಿಂದ ಸುತ್ತಮುತ್ತಲೂ ಒಂದು ಹೊಸ ವಾತಾವರಣ ಏರ್ಪಟ್ಟಿತು. ಮಾಧವನ ಗಾಬರಿ ತೊಲಗಿತು. ನಾಚಿಕೆ ಹಿಮ್ಮೆಟ್ಟಿತು. ತಾನು ತನ್ನ ಸುತ್ತಲಿರುವ ಜನರಿಂದ ಬೇರೆ ಎಂಬ ಭಾವ ಅವನಿಗೆ ಅರಿವಿಲ್ಲದಂತೆಯೇ ಮಾಯವಾಯಿತು. ನೆಲವನ್ನು ನೋಡುತ್ತಿದ್ದ ಕಣ್ಣು ಮೇಲಕ್ಕೆ ಎದ್ದು ಸುತ್ತಲೂ ಹರಿಯಿತು. ಅಲ್ಲಿ ಪ್ರತಿಯೊಂದು ಮುಖದಲ್ಲೂ ಈ ಸ್ವಯಂ ಸೇವಕರು ತಮ್ಮವರು ತಮ್ಮ ಜನ ಎಂಬ ಭಾವ ಹೊಳೆಯುತ್ತಿದ್ದುದನ್ನು ಕಂಡು ಅವನು ಬೆರಗಾದ. ಸುತ್ತಲೂ ನೋಡಿದ: ಎಂಥ ಜನರು ಅವರು. ಸೊಂಟವ ಸುತ್ತ ಒಂದು ಹರಕು ಪಂಚೆಯಲ್ಲದೆ ಇನ್ನಾವ ಬಟ್ಟೆಯೂ ಅವರ ಮೈ ಮೇಲೆ ಕಾಣದು. ಅವರೆಲ್ಲರೂ ಸುತ್ತಮುತ್ತಲೂ ಹಗಲೆಲ್ಲ ಬೆವರು ಹರಿಸಿ ಗೇಯುವ ನೆಲದ ಮಕ್ಕಳು. ಅರೆಹೊಟ್ಟೆಯುಂಡು ದೇಹವನ್ನು ಅರೆಯುವ ಹತಭಾಗ್ಯರು. ಅವರ ಎದೆ ಸೀಳಿದರೂ ಒಂದಕ್ಷರ ಕಾಣದು. ಅದಾರು ಅಲ್ಲಿ ಜನದ ನೆರವಿಯಲ್ಲಿ ಅಡಗಿಕೊಳ್ಳುತ್ತಿರುವವನು ? ಮಾಧವನ ಒಕ್ಕಲು – ಸೋಮ. ಅವನ ಹೊಟ್ಟೆ ಗುಡಾಣದಂತಾಗಿತ್ತು — ಏನೋ ಕಾಹಿಲೆಯಿಂದ; ಮುಖ ಬಿಳಿಚಿಕೊಂಡಿತ್ತು; ಕಣ್ಣುಗುಡ್ಡೆ ಪಾತಾಳಕ್ಕೆ ಇಳಿದಿತ್ತು. ಮಾಧವ ನೋಡುತ್ತ ಬಂದಂದಿನಿಂದ ಅವನಿಗೆ ಇದೇ ಕಾಹಿಲೆ. ಅದೇ ಕಾಹಿಲೆಯಲ್ಲೇ ಅವನು ಗೇಯುತ್ತ ಬಂದಿದ್ದಾನೆ — ಒಂದು ದಿನವೂ ತಪ್ಪದೆ; ದಿನಾ ಕಾಡಿಗೆ ಹೋಗಿ ಸೊಪ್ಪು ತರುತ್ತಾನೆ; ಗದ್ದೆ ಉಳುತ್ತಾನೆ; ಸೌದೆ ಒಡೆಯುತ್ತಾನೆ; ಅಣೆಗೆ ಹೋಗಿ ಕಲ್ಲು ಕಡಿಯುತ್ತಾನೆ. ಉಸ್ ಉಸ್ ಅನ್ನುತ್ತಾನೆ; ಅಪ್ಪಾ, ಅನ್ನುತ್ತಾನೆ; ಹಾಗೆಯೇ ಕೆಲಸ ಮಾಡುತ್ತಾನೆ. ಔಷಧ ಉಪಚಾರ ಅವನಿಗೆ ತಿಳಿಯದು. ಆಗಾಗ ಕಾಹಿಲೆ ಜಾಸ್ತಿಯಾದಾಗ ದೈವಕ್ಕೆ ಒಂದು ಕೋಳಿ ಕೊಡುತ್ತಾನೆ; ಜೋಯಿಸರಿಂದ ಒಂದು ಚಿಟಿಕೆ ವಿಭೂತಿ ತರುತ್ತಾನೆ. ಹಾಗೇ ಬದುಕುತ್ತಲೇ ಇದ್ದಾನೆ. ಅವನೂ ಬಂದಿದ್ದಾನೆ ಸಂಜೆ ಹೊತ್ತು ಕುಡಿಯಲು ! ತನ್ನ ಧಣಿಗಳ ಮಗನನ್ನು ಕಂಡು ನಾಚಿ ತಲೆಮರಸಲು ಯತ್ನಿಸುತ್ತಾನೆ. ಹಾಗೇ ತಿರುಗಿ ನೋಡಿದರೆ ಅಲ್ಲಿ ನಾಗಿ: ಅವರ ಮನೆಯಲ್ಲೇ ದಿನವೆಲ್ಲ ಕೆಲಸ ಮಾಡುತ್ತಿರುವ [illegible] ಮುಚಿಯೂ

ಮುಚ್ಚದಂತೆ ಇತ್ತು. ಸೊಂಟಕ್ಕೆ ಸುತ್ತಿಕೊಂಡು ಒಂದು ತುದಿಯನ್ನು ಕೊರಳ ನೂಲಿಗೆ ಸೆಕ್ಕಿಸಿಕೊಂಡಿದ್ದಳು. ಸೀರೆ ತೀರ ಚಿಕ್ಕದಾಗಿದ್ದುದರಿಂದ ಅವಳ ಬತ್ತಿ ಹೋದ ಜೋಲುಮೊಲೆಗಳು ಅತ್ತಿತ್ತ ತೂಗುತ್ತಿದ್ದುವು. ಅವಳ ತಲೆಯ ಮೇಲೆ ಕೂದಲು ಒಣಹುಲ್ಲಿನಂತೆ ಜಡೆಕಟ್ಟಿತ್ತು. ಅವಳೂ ಬಂದಿದ್ದಳು - ಹೆಂಡ ಕುಡಿಯಲಿಕ್ಕೆ: ಅವಳು ದಿನವೆಲ್ಲ ದುಡಿದರೂ ಅವಳಿಗೆ ಮತ್ತು ಅವಳ ಮಗಳು ಸುಬ್ಬಿಗೇ ಸಾಲದು. ಆದರೂ ಹೆಂಡದ ಈ ಚಪಲ! ನೋಡಿದ. ನೋಡಿ ಮಾಧವನ ಕರುಳು ಕಿವುಚಿದಂತಾಯಿತು. ಆ ಜನವೆಲ್ಲ ಆ ಮುಹೂರ್ತದಲ್ಲಿ ಅವನಿಗೆ ತನ್ನ ಮನೆಯವರಂತೆ, ತನ್ನವರಂತೆಯೇ ಕಂಡರು.

ಹೆಂಡ ಕುಡಿಯಲು ಯಾರೂ ಮುಂದೆ ಬರಲಿಲ್ಲ. ಅಂಗಡಿಯ ಮುಂದೆ ಕುಳಿತ ಮಂಜಾಸ ಒಂದು ಚಿಪ್ಪಿನಲ್ಲಿ ಹೆಂಡ ಸುರಿದುಕೊಂಡು, ಎಲ್ಲರಿಗೂ ಕಾಣುವಂತೆ ಹೀರುತ್ತ ತನ್ನ ಕೆಂಗಣ್ಣುಗಳನ್ನು ತಿರುಗಿಸುತ್ತ ಕೂತಿದ್ದ. ಕ್ಷಣ ಕ್ಷಣಕ್ಕೂ ಕುಡಿಯಲು ಬಂದವರ ಚಪಲ ಹೆಚ್ಚುತ್ತಿತ್ತು. ಕಡೆಗೆ ಒಬ್ಬ ನೇರ ವಾಗಿ ಸ್ವಯಂಸೇವಕರ ಸಾಲಿನ ನಡುವೆ ಬಂದ. ತಕ್ಷಣ ಸೂರಪ್ಪಯ್ಯ " ಅಣ್ಣಾ ಹೆಂಡ ಕುಡಿಯ ಬೇಡಪ್ಪಾ: ಕೈ ಮುಗಿದು ಬೇಡಿಕೊಳ್ಳುತ್ತೇನೆ. ಅದರಿಂದ ದುಡ್ಡು ಹಾಳು; ಆರೋಗ್ಯಕ್ಕೆ ಕೇಡು, ಮನೆಯವರ ತುತ್ತು ಕಸಿದ ಪಾಪ — ಕುಡಿಯಬೇಡ " ಎಂದ.

ಮುಂದೆ ಬಂದವ ಕೊಂಚ ಹೊತ್ತು ಸುಮ್ಮನಿದ್ದು;

" ದಾರಿ ಬಿಡಯ್ಯ; ನಾನು ಕುಡಿದು ಹಾಳಾಗಿ ಹೋದರೆ ನಿನಗೇ-ನಯ್ಯ " ಎಂದ ಕೊಂಚ ಬಿರುಸಿನಿಂದಲೇ.

" ಯಾರೂ ಕುಡಿಯಬಾರದು. ಕುಡಿದು ಬುದ್ಧಿ ಕೆಡಿಸಿಕೊಂಡು ದನಗಳ ಹಾಗೆ ಆಡಬಾರದು, ಎಂದು ಮಹಾತ್ಮಾಗಾಂಧಿಯವರು ನಿಮ್ಮ ಒಳ್ಳೆಯದಕ್ಕಾಗಿಯೇ ಹೇಳಿದ್ದಾರೆ. ಅಣ್ಣಾ; ನನ್ನ ಮಾತು ಕೇಳು " ಎಂದ ಅನಂತಯ್ಯ.

" ಮಹಾತ್ಮಾ ಗಾಂಧೀಕಿ ಜೈ " ಎಂದರು ಉಳಿದವರು.

" ನಿಮ್ಮ ಗಾಂಧಿ ಗೀಂಧಿ ನನಗೆ ಬೇಡ; ನನಗೆ ಈಗ ಹೆಂಡ ಬೇಕು. ದಾರಿ ಬಿಟ್ಟು ನಿಲ್ತೀರೋ —" ಅವನ ಧ್ವನಿಯಲ್ಲಿ ರೋಷ ಬುಸುಗುಟ್ಟುತ್ತಿತ್ತು.

ಈಗ ಮೋಗವೀರ ಶೇಷ ಬಂದು ದಾರಿಯುದ್ದಕ್ಕೂ ಎರಡು ಸಾಲುಗಳ

ನಡುವೆ ಅಡ್ಡಲಾಗಿ ಮಲಗಿ, "ನೋಡು ಅಣ್ಣಾ, ಕುಡಿಯ ಬೇಡ ಎಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇವೆ. ನಮ್ಮ ಮಾತು ಕೇಳದೆ, ನೀನು ಹೋಗಿಯೇ ತೀರುವೆನೆಂದು ಹಟ ಹಿಡಿದರೆ ಏನು ಮಾಡುವುದು? ಆದರೆ ನೀನು ನನ್ನ ದೇಹ ತುಳಿದು ಕೊಂಡೇ ಹೋಗಬೇಕು. ಹಾಗೂ ಮಾಡಿ ಬಿಡು" ಎಂದ ಶೇಷ.

ಈಗ ಆ ಕುಡುಕ ಅಪ್ರತಿಭನಾದ ಏನು ಮಾಡುವುದೆಂದು ತೋಚಲಿಲ್ಲ. ಕೊಂಚ ಹಿಂದೆ ಮುಂದೆ ನೋಡುತ್ತಾ ನಿಂತ. ಶೇಷನ ಮುಖದ ಕಡೆ ಅವನು ನೋಡಿದ: ಆ ಮುಖ ಹುಣ್ಣಿಮೆಯ ಚಂದ್ರನಂತೆ ಪ್ರಕಾಶಮಾನವಾಗಿತ್ತು, ತಂಪಾಗಿತ್ತು. ಅವನ ಕಣ್ಣುಗಳಲ್ಲಿ ನೀರು ತುಂಬಿದಂತೆಯೂ ತೋರಿತು. "ಥೂ, ಹಾಳಾಗಿ ಹೋಗಲಿ;" ಎಂದು ಗೊಣಗುತ್ತ ಅವನು ಹಿಮ್ಮೆಟ್ಟಿದ.

ಮಾಧವನ ಮನಸ್ಸು ತುಡಿಯುತ್ತಿತ್ತು. ಏನೇನೋ ಅಸ್ಪಷ್ಟವಾದ ಭಾವಗಳು ಅವನ ಮನಸ್ಸಿನಲ್ಲಿ ಬೆಳಕಿನ ಗುಳ್ಳೆಗಳಂತೆ ಗುಳುಗುಳಿಸಿದುವು. ಏನಾದರೂ ಆಡಬೇಕು, ಏನಾದರೂ ಮಾಡಬೇಕೆಂಬ ಆಶೆ ಅದಮ್ಯವಾಗಿ ಬೆಳೆಯಿತು. ಎಷ್ಟು ಪ್ರಯತ್ನಿಸಿದರೂ ಒಂದು ಮಾತೂ ಹೊರಡಲಿಲ್ಲ.

ಅಷ್ಟರಲ್ಲಿ ಹೆಂಡ ಕುಡಿದು ಅಮಲೇರಿದ ಹೆಂಡದಂಗಡಿಯೊಡೆಯ ತೂರಾಡುತ್ತಾ ಅವರ ಕಡೆ ಬಂದ. ಅವನ ಕಣ್ಣು ಕೆಂಡದಂತೆ ಉರಿಯುತ್ತಿತ್ತು. ಮುಖದಲ್ಲಿ ಹುಲಿ ಸಿಂಹಗಳ ಕ್ರೂರ ಭಾವ ಹೊರಸೂಸುತ್ತಿತ್ತು. ಅವನು ಅವರ ಮುಂದೆ ತೂರಾಡುತ್ತಾ ನಿಂತು ಕೆಟ್ಟ ಮಾತು ಆಡತೊಡಗಿದ: " ಈ ಬೋಳಿಮಕ್ಕಳಿಗೆ ಬೇರೆ ಕೆಲಸವಿಲ್ಲ. ತಿಂದ ಕೊಬ್ಬು. ಬಿಳಿ ಬಟ್ಟೆ ಹಾಕಿ-ಕೊಂಡು ಬಂದು ನನ್ನ ಯಾಪಾರ ಕೆಡಿಸುತ್ತಾರೆ. ಹಲ್ಲು ಮುರಿದೇನು," ಅಂದ.

ಆ ಮಾತಿಗೆ ಯಾರೂ ಉತ್ತರ ಹೇಳಲಿಲ್ಲ.

"ಯಾಕಪ್ಪಾ ಸುಮ್ಮನೆ ಕೆಟ್ಟ ಮಾತು ಆಡುತ್ತೀ? ಈ ಜನರನ್ನ ನಾವು ಕುಡಿಯ ಬೇಡಿರೆಂದು ಬೇಡಿಕೊಳ್ಳುತ್ತಿದ್ದೇವೆ" ಎಂದ ಮಾಧವ. ಕೂಡಲೇ ರಾಕ್ಷಸಾಕಾರದ ಮಂಜಾಸ ತನ್ನ ಕೈಗಳನ್ನು ಆಡಿಸುತ್ತಾ ಮಾಧವನ ಮುಂದೆ ಪರ್ವತಾಕಾರದಲ್ಲಿ ಬೆಳೆದು ನಿಂತು "ಬೇಡಿ ಕೊಳ್ಳುತ್ತಾನಂತೆ, ನನ್ನ ವ್ಯಾಪಾರ ಹಾಳು ಮಾಡುವುದಕ್ಕೆ ಬಂದಿದ್ದಾನೆ, ಮತ್ತೆ ತಲೆ ಹರಟೆ; ತಲೆ ಒಡೆದು ಬಿಡ್ತೇನೆ, ನೋಡು," ಎಂದು ಹೂಂಕರಿಸಿದ.

ಮಾಧವನ ಎದೆ ಡವಡವ ಎನ್ನತೊಡಗಿತು. ಹೆಂಡದಂಗಡಿಯೊಡೆಯನ ಆ ಭೀಕರಾಕೃತಿಯನ್ನು ಕಂಡು ಮೈ ಕೊಂಚ ನಡುಗಿತು. ಆರೀತಿ ಯಾರಿಂದಲೂ ಬಯ್ಯಿಸಿಕೊಂಡು ಅಭ್ಯಾಸವಿಲ್ಲದ ಮಾಧವನ ರಕ್ತ ಕುದಿಯಿತು. ಆದರೆ 'ಶಾಂತಿ, ಸಹನೆಯ' ಆ ಉಪದೇಶ ಥಟ್ಟನೆ ಜ್ಞಾಪಕ ಬಂತು. 'ನನ್ನ ತಲೆಯೊಡೆಯುವುದರಿಂದ ನಿನಗೆ ಸಂತೋಷವಾಗುವ ಹಾಗಿದ್ದರೆ ಒಡೆದು ಬಿಡು, ಹೂಂ' ಎಂಬ ಮಾತು ಮಾಧವನ ಬಾಯಿಂದ ಅವನಿಗೆ ಅರಿವಿಲ್ಲ ದಂತೆಯೇ ಹೊರಟು ಬಿಟ್ಟಿತು. ಅದೇ ಸಮಯಕ್ಕೆ ಸರಿಯಾಗಿ ಸೂರಪ್ಪಯ್ಯ

"ಈ ಹೆಂಡದಿಂದ ಇಷ್ಟು ಜನದ ಮನೆ ಮುರಿಯುತ್ತಿರುವಾಗ ನಿನ್ನ ವ್ಯಾಪಾರ ಕೆಟ್ಟು ಹೋದರೆ ಏನಾಯಿ ತು? ನಿನ್ನ ರಕ್ಷಕರು ಆ ಪೋಲೀಸರು ಇದ್ದಾರಲ್ಲ; ಅವರಿಗೆ ಹೇಳಿಕಳಿಸು. ನಿನಗೊಬ್ಬನಿಗೆ ಎಷ್ಟು ಜನಕ್ಕೆ ಹೊಡೆಯಲು ಸಾಧ್ಯವಾದೀತು?" ಎಂದ. ಮಾತು ಬಿರುಸಾಗಿತ್ತು, ಕಠೋರವಾಗಿತ್ತು.

ಹೆಂಡದಂಗಡಿಯೊಡೆಯ ಸೂರಪ್ಪಯ್ಯನ ಮುಖದ ಕಡೆಗೆ ನೋಡಿದ, ಅಲ್ಲಿದ್ದ ನಿರ್ಧಾರ ಮುದ್ರೆಯನ್ನು ಕಂಡು ಕೊಂಚ ತಬ್ಬಿಬ್ಬಾದ. ಸುತ್ತಲೂ ಕಣ್ಣು ಬಿಟ್ಟು ನೋಡಿದ. ನೆರೆದವರಲ್ಲಿ ಯಾರೂ ತನ್ನ ಪರವಾಗಿ ಮಾತಾಡು ವಂತಾಗಲೀ, ಹೊಡೆದಾಟದಲ್ಲಿ ಭಾಗವಹಿಸುವಂತಾಗಲೀ ತೋರಲಿಲ್ಲ, ಸ್ವಲ್ಪ ಹೊತ್ತು ಏನೇನೋ ಗೊಣಗಿಕೊಳ್ಳುತ್ತ ನಿಂತಿದ್ದು ಆ ಮೇಲೆ ಅಂಗಡಿ ಯೊಳಕ್ಕೆ ಹೋಗಿ ಬಂದು ಪುಸ್ತಕ, ಪೆನ್ಸಿಲ್ ತಂದು 'ನನಗೆ ನಿಮ್ಮ ಹೆಸರು, ವಿಳಾಸ ಬೇಕು'—ಎನ್ನುತ್ತಾ ಹತ್ತಿರದಲ್ಲೇ ನಿಂತಿದ್ದ ಕೃಷ್ಣನ ಕಡೆಗೆ ತಿರುಗಿ "ನಿನ್ನ ಹೆಸರೇನೋ" ಎಂದ. ಅವನ ಮಾತಿನ ಧಾಟಿ ಕೇಳಿ ರೇಗಿದ ಕೃಷ್ಣ ಕೊಂಚ ಹೊತ್ತು ಸುಮ್ಮನಿದ್ದು ಬಳಿಕ "ನನ್ನ ಹೆಸರು ಲಾರ್ಡ್ ವಿಲ್ಲಿಂಗ್ಡನ್" ಎಂದ. ಈ ಉತ್ತರವನ್ನು ಅಲ್ಲಿ ನೆರೆದವರಲ್ಲಿ ಯಾರೂ ನಿರೀಕ್ಷಿಸಿರಲಿಲ್ಲ. ಅದನ್ನು ಕೇಳಿ ಎಲ್ಲರೂ ಗೊಳ್ಳೆಂದು ನಕ್ಕುಬಿಟ್ಟರು. ನಗುವಿನ ಅಲೆಅಲೆ ಹರಿದು ಎಲ್ಲ ಮುಖಗಳೂ ಅರಳಿದುವು. ಹೆಂಡದಂಗಡಿಯವನು ಮಾತ್ರ ಹಲ್ಲು ಕಚ್ಚಿ ನಿಂತು ನೆಲ ನೋಡತೊಡಗಿದ. ಮುಂದೆ ಏನು ಮಾಡಬೇಕೋ ಅವನಿಗೆ ತೋಚಲಿಲ್ಲ. "ನಿಮಗೆಲ್ಲ ಮಾಡಿಸ್ತೀನಿ, ಈಗಲೇ ಪೋಲೀಸರಿಗೆ ರಿಪೋರ್ಟು ಕೊಟ್ಟು ಜೈಲಿಗೆ ಹಾಕಸ್ತೀನಿ" ಎಂದು ಮುಂತಾಗಿ ರೇಗಾಡುತ್ತ ಅಂಗಡಿಯೊಳಗೆ ಹೋಗಿ ಕೂತ.

ಆಗಲೇ ಎಂಟೂವರೆ ಗಂಟೆ ಆಗಿ ಹೋಗಿತ್ತು. ಬಾಲಚಂದ್ರನ ಕಿರು ಬೆಳಕು ಕತ್ತಲೆಯ ನೊರೆಯಂತೆ ಅಲ್ಲಲ್ಲಿ ಹರಡಿತ್ತು. ಅಂಗಡಿಯೊಳಗಿಂದ ಹುಳಿ ಹೆಂಡದ ವಾಸನೆ ಹೊಡೆಯುತ್ತಿತ್ತು. ಗಾಳಿ ಸ್ತಬ್ಧವಾಗಿತ್ತು. ಮರಗಿಡ ಬಳ್ಳಿಗಳು ಮೌನವಾಗಿ ನಿಂತಿದ್ದುವು. ತೆಳ್ಳಗೆ ಮೋಡ ಹಬ್ಬಿದ್ದ ಆಕಾಶದಲ್ಲಿ ನಕ್ಷತ್ರಗಳು ಉಜ್ವಲವಾಗಿ ಹೊಳೆಯುತ್ತಿದ್ದುವು. ಬಂದು ನೆರೆದಿದ್ದ ಜನರೆಲ್ಲ ಒಬ್ಬೊಬ್ಬರಾಗಿ ಹೊರಡ ತೊಡಗಿದರು. ಹೆಂಡ ಕುಡಿಯಲೆಂದು ಬಂದ ಅನೇಕರು ಬೇರೇನೂ ದಾರಿ ಕಾಣದೆ ಮನೆಯ ಹಾದಿ ಹಿಡಿದರು. ಸ್ವಯಂ ಸೇವಕರೂ ಕೂಡಾ ಇಂದು ತಾವು ಮಾಡಿದ ಕೆಲಸ ಸಾಕು ಎಂದು ಅಲ್ಲಿಂದ ಹೊರಟರು. ಹೊರಡುವ ಮುನ್ನ ಒಂದು ಸಲ 'ಮಹಾತ್ಮಾ ಗಾಂಧೀಕಿ ಜೈ,' 'ವಂದೇ ಮಾತರಂ' ಎಂದು ಗರ್ಜಿಸಲು ಮರೆಯಲಿಲ್ಲ.

ಮಾಧವನಿಗೆ ಇದೊಂದು ಹೊಸ ಅನುಭವವಾಯಿತು. ಜನದ ಮುಂದೆ ಅಷ್ಟು ನಿಂತದ್ದೇ ಅವನ ಮನಸ್ಸಿನ ಕಿಟಕಿಗಳನ್ನು ತೆರೆದು ಗಾಳಿಯಾಡಲು ಬಿಟ್ಟಂತೆ ಆಯಿತು. ತನ್ನ ಅಂತರಂಗದ ಗುಹೆಯಲ್ಲೇ ಪವಡಿಸುತ್ತಿದ್ದ ಅವನ ಜೀವ ಹೊರ ಜಗತ್ತಿನಲ್ಲಿ ಸೂರ್ಯನ ಬೆಳಕಿನಲ್ಲಿ ಅಷ್ಟು ಹೊತ್ತು ಸಂಚಾರ ಮಾಡಿದಂತಾಯಿತು. ಅವನ ಮನಸ್ಸು ಅರಳಿತು. ಹೀಗೆ ತಾನು ಜನ ದೊಡನೆ ಬೆರೆಯಬೇಕು ಅಂತ ಅವನ ಬಹುದಿನದ ಆಸೆ. ಆದರೆ ಜನರನ್ನು ಕಂಡರೆ ಅಸಾಧ್ಯ ಅಳುಕು. ಬೀದಿಯಲ್ಲಿ ನಡೆಯುತ್ತಿದ್ದರೆ ತನ್ನ ನಡಿಗೆಯನ್ನು ನೋಡಿ ಯಾರು ನಗುವರೋ ಎಂಬ ದಿಗಿಲು. ಸಭೆಯಲ್ಲಿ ಕುಳಿತಿದ್ದರೆ ಎಲ್ಲರ ಕಣ್ಣೂ ತನ್ನ ಅಂಗಾಂಗಗಳನ್ನು ಭೈರಿಗೆಯಂತೆ ಕೊರೆಯುತ್ತಿವೆ ಎಂಬ ಅನುಮಾನ. ತನ್ನ ಸ್ನೇಹಿತರ ಜೊತೆಯಲ್ಲಿ ಯಾರಾದರೂ ಅಪರಿಚಿತರು ಇದ್ದರೆ ಅವನ ಬಾಯಿಗೆ ಬೀಗ ಬಿದ್ದಂತೆಯೇ ಸರಿ. ಹೊಸಬರೊಡನೆ ಮಾತಾಡಲೇ ಬೇಕಾದ ಪ್ರಸಂಗ ಬಂದರಂತೂ ಅವನಿಗೆ ಎಲ್ಲಿಲ್ಲದ ಗಾಬರಿ. ನಾಲಗೆತುದಿಯ ತನಕ ಬಂದ ಮಾತು ಅಲ್ಲಿಯೇ ಅಂಟಿಕೊಳ್ಳುತ್ತದೆ. ಎಷ್ಟು ಒದರಿದರೂ ಅದು ಬೇರೆ ಕೆಳಕ್ಕೆ ಬೀಳದು. ಯಾರಾದರೂ ತನ್ನನ್ನು ಗೇಲಿ ಮಾಡಿದರೆ ಪ್ರತಿಯಾಗಿ ಗೇಲಿಮಾಡಬೇಕೆಂದು ಮನಸ್ಸು ಹೇಳುತ್ತದೆ. ಅದಕ್ಕೆ ತಕ್ಕ ಕೆಂಡದಂಥ ಮಾತು ಮನಸ್ಸಿನಲ್ಲಿ ರೂಪುಗೊಳ್ಳುತ್ತದೆ. ಆದರೆ ಮಾತು ಮಾತ್ರ ಗಂಟಲನ್ನು ಬಿಟ್ಟು ಹೊರಕ್ಕೆ ಬರಲೊಲ್ಲದು. ಇದರಿಂದ ಅವನು

ತುಂಬ ಸಂಕಟ ಪಟ್ಟುಕೊಂಡಿದ್ದ. ತನ್ನ ಮೇಲೆ ತಾನು ಸಿಟ್ಟು ಮಾಡಿಕೊಂಡು ಹಲ್ಲು ಕಡಿದಿದ್ದ. ಈ ದಿನ ಈ ಪಿಕೆಟಿಂಗ್ ನಡಸಿದ್ದರಿಂದ ಮನಸ್ಸಿನ ಹೊಸದೊಂದು ಬಾಗಿಲು ತೆಗೆದಂತಾಯಿತು. ಆ ಬಾಗಿಲಿನ ಮೂಲಕ ಹೊರಟರೆ ಯಾವ ಜನರನ್ನೂ ಎದುರಿಸಿ ನಿಲ್ಲಬಹುದು — ಎಂಬ ಧೈರ್ಯ ಬಂತು. ಅದೇ ಧೈರ್ಯದಿಂದ, ಉತ್ಸಾಹದಿಂದ ಮನೆಗೆ ಬಂದು ಊಟಮಾಡಿ ಮಲಗಿದ. ಬಹಳ ಹೊತ್ತು ನಿದ್ದೆ ಬರಲಿಲ್ಲ. ಕೆಳಗೆ ಅಂಗಳಕ್ಕಿಳಿದು ಅಲ್ಲಿ ಇದ್ದ ಹೊಡಿಮುಂಚದ ಮೇಲೆ ಕುಳಿತು ಆಕಾಶವನ್ನು ನೋಡತೊಡಗಿದ. ವಿಶಾಲ ವಾದ ನೀಲಾಕಾಶದ ವಿಸ್ತಾರ ವೈಭವವನ್ನು ನೋಡುತ್ತ ತಲ್ಲೀಲನಾದ. ಆಕಾಶ ದಲ್ಲೆಲ್ಲ ಶರತ್ಕಾಲದ ಬೆಳ್ಳಿ ಮೋಡಗಳು ಹರಡಿಕೊಂಡಿದ್ದುವು. ಅವುಗಳ ನಡುವೆ ಅಸಂಖ್ಯ ನಕ್ಷತ್ರಗಳು ಮಿನುಗುತ್ತಿದ್ದುವು. ಚಂದ್ರ ಮುಳುಗಿ ಕತ್ತಲು ಕವಿದಿತ್ತು. ನಕ್ಷತ್ರಗಳ ಬೆಳಕು ಉಜ್ವಲವಾಗಿ ಹರಡಿತ್ತು. ಆ ಆಕಾಶವನ್ನು ನೋಡ ನೋಡುತ್ತ ಹೋದಂತೆ ಮಾಧವನ ಮನಸ್ಸು ಹಿಗ್ಗುತ್ತ ಹೋಗಿ ಆ ಆಕಾಶವನ್ನೆಲ್ಲ ಆವರಿಸಿ ನಿಂತಿತು. ಆ ಆಕಾಶ, ಆ ಮೇಘ ಸಮೂಹ, ಆ ನಕ್ಷತ್ರಕೋಟಿ — ಅವಕ್ಕೂ ತನಗೂ ಭೇಧವಿಲ್ಲ ಎಂದು ತೋರಿತು. ಒಂದು ಸೃಷ್ಟಿಯ ಅಂಗಾಂಗಗಳು ತಾವು ಎನ್ನಿಸಿತು, ಮನಸ್ಸು ಶಾಂತವಾಯಿತು. ಒಂದು ವಿಶೇಷ ರೀತಿಯ ಧೈರ್ಯ ಅವನ ಅಂತರಂಗವನ್ನು ಆವರಿಸಿತು. ತಾನು ಏಕಾಂಗಿಯಲ್ಲ, ಈ ಎಲ್ಲವೂ ತನ್ನ ಜೊತೆಗಾರರು, ತಾನು ಅಂಜಬೇಕಾಗಿಲ್ಲ ಎಂದುಕೊಂಡು ಮತ್ತೆ ಹಾಸಿಗೆಯ ಮೇಲೆ ಹೋಗಿ ಉರುಳಿದ. ಸ್ವಲ್ಪ ಹೊತ್ತಿನಲ್ಲಿಯೇ ಗಾಢವಾದ ನಿದ್ದೆ ಬಂತು.

೬

ಇನ್ನೇನು ಡಿಸೆಂಬರು ತಿಂಗಳು ಬಂದೇ ಬಿಡುತ್ತದೆ: ಆ ಮೇಲೆ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಉಳಿವದ್ದು ಮೂರೇಮೂರು ತಿಂಗಳು. ಬಹಳ ಚೆನ್ನಾಗಿಯೇ ಓದಬೇಕೆಂದು ಮಾಧವ ನಿರ್ಧರಿಸಿಕೊಂಡಿದ್ದ. ಆದರೆ ಇತ್ತೀಚೆಗೆ ಪಾಠಗಳನ್ನು ಓದಲೇ ಆಗುತ್ತಿಲ್ಲ. ಲಂಗರುಕಿತ್ತ ಹಾಯಿದೋಣಿಯಂತೆ ಮನಸ್ಸು ಗಾಳಿ ಹೊಡೆದತ್ತ, ತೆರೆ ಬಡಿದತ್ತ ಸಾಗತೊಡಗಿತ್ತು. ಓದಲೆಂದು ಕುಳಿತರೇ ಸಾಕು; ಮನಸ್ಸಿನ ನೂರು ಬಾಗಿಲುಗಳು ದಢಾರನೆ ತೆರೆದು ಕೊಳ್ಳುವುವು. ಒಂದೊಂದು ಬಾಗಿಲಿನಾಚೆಗೂ ಒಂದೊಂದು ಸೊಗಸುನೋಟ; ಒಂದೊಂದು ಇಂದ್ರಜಾಲದ ಆಟ; ಯಾವಕಡೆ ಅಡಿಯಿಡಲೆಂದು ನಿಶ್ಚಯಿಸ ಲಾರದಷ್ಟು ಪ್ರತಿಯೊಂದು ದೃಶ್ಯವೂ ಸುಂದರವಾದುದು.

ಒಂದೊಂದು ದಾರಿಯಲ್ಲೂ ಅಷ್ಟಷ್ಟು ದೂರ ಮಾತ್ರಹೋಗಲು ಸಾಧ್ಯ; ಮುಂದೆ ದಟ್ಟಕತ್ತಲು. ನಿಂತು ನೋಡಿದರೆ ಆ ಕತ್ತಲಲ್ಲೂ ನಡುವೆ ಅಲ್ಲೊಂದು ಇಲ್ಲೊಂದು ದಾರಿದೀಪ ಕಲೆಯೆತ್ತಿ ನಿಂತು "ಮುಂದೆ, ಮುಂದೆ ಬಾ" ಎಂದು ಕರೆಯುತ್ತದೆ. ಆದರೆ ಇನ್ನೂ ಆ ಕತ್ತಲ ದಾರಿಗಳಲ್ಲಿ ಓಡಾಡುವ ಧೈರ್ಯ ಮಾಧವನಿಗೆ ಇಲ್ಲ. ಆದರೆ ಅವುಗಳ ಆ ಆಕರ್ಷಣೆಗೆ ಪತಂಗದಂತೆ ತಹತಹಪಡುತ್ತಾನೆ. ಕೆಲವು ಸಲ ಅಲ್ಲಿ ಮಾಡುವ ಕೆಲವು ನೋಟಗಳನ್ನು ಕಂಡು ಮಾಧವನಿಗೆ ಆಶ್ಚರ್ಯವಾಗುತ್ತದೆ. ಎಂದೂ ಕೇಳದ, ಎಂದೂ ನೋಡದ, ಎಂದೂ ಊಹಿಸದ ಹೊಸಹೊಸ ಚಿತ್ರಗಳು ಬಂದು ಅರಳುತ್ತವೆ. ಹುಣ್ಣಿಮೆಯ ಚಂದ್ರ ಪುಟ್ಟಮಗುವಿನಂತೆ ಅಂಬೆಗಾಲಿಟ್ಟು ಬರುತ್ತಾನೆ. ಆ ಮಗುವಿನ ನಗೆಯ ಗುಳ್ಳೆಗಳಂತೆ ನಕ್ಷತ್ರಗಳು ಸಿಡಿಯುತ್ತವೆ. ಬಿಳಲುಬಿಟ್ಟ ದೊಡ್ಡ ಆಲದ ಮರದಂತೆ ಗಾಂಧಿ ಬಂದು ಕಣ್ಣಮುಂದೆ ನಿಲ್ಲುತ್ತಾರೆ: ಅದರ ಕೆಳಗೆ ಮಾಧವನಂಥ, ಅವನಿಗೂ ಕಿರಿಯರಾದಂಥ ನೂರಾರು ಹುಡುಗರು ಚಿಕ್ಕಚಿಕ್ಕ ಹಕ್ಕಿಗಳಂತೆ ಕುಪ್ಪಳಿಸುತ್ತಾರೆ. ಒಮ್ಮೆ ಇದ್ದಕ್ಕಿದ್ದಂತೆ ಆಕಾಶದ ಆನೆಬಾಗಿಲು ದಢಾರನೆ ತೆರೆಯುತ್ತದೆ. ಅಲ್ಲಿಂದ ಬೆಳಕಿನ ಪಲ್ಲಕ್ಕಿಯೊಂದು ಸರಸರನೆ ಮೋಡಗಳನ್ನು ಭೇದಿಸಿಕೊಂಡು ಕೆಳಕ್ಕಿಳಿದು ನೆಲಕ್ಕೆ ಒಂದಂಗುಲ

ಬಿಟ್ಟು ನಿಲ್ಲುತ್ತದೆ. ಅದನ್ನು ಹೊತ್ತು ಬಾಗಿನಿಂತ ಜೋಯಿಗಳು ಒಂದು ಕ್ಷಣ ಕಾಲ ಯಾರದೋ ದಾರಿ ಕಾಯುತ್ತಿರುವವರಂತೆ ಹಾಗೆಯೇ ನಿಂತು ಮರು ಕ್ಷಣವೇ ಸುರಸುರಬತ್ತಿಯಂತೆ ಮೇಲಕ್ಕೇರಿ ಮೋಡಗಳ ನಡುವೆ ಮರೆಯಾಗು ತ್ತಾರೆ

ಆಹಾ, ಅದೋ ಆ ಹಿಂಬಾಗಿಲು ತೆರೆಯಿತು. ಅದರ ಮೂಲಕ ಆಚೆ ಹೋದರೆ ಸಾಕು, ಕಂಬನಿಗಳ ಕೊಳ್ಳ ಸಿಗುತ್ತದೆ. ಆ ಕೊಳ್ಳದ ಸುತ್ತಲೂ ನೂರಾರು ಹದ್ದುಗಳು ನೆರೆದು ಮಾಂಸಖಂಡಗಳನ್ನು ಕುಕ್ಕುತ್ತವೆ. ಅಲ್ಲಿ ಮೇಲೆ ಮೋಡ ಕವಿದ ಆಕಾಶ. ಅಲ್ಲಿ ಹಗಲೂ ಒಂದೇ, ಇರುಳೂ ಒಂದೇ — ಮುಸುಕು ಮಬ್ಬು ಕವಿದಿರುತ್ತದೆ. ಕಾರುತಿಂಗಳಲ್ಲಿ ಮಳೆಯ ಒಂದು ಆವೃತ್ತಿ ಮುಗಿದು ಇನ್ನೊಂದು ಆವೃತ್ತಿ ಶುರುವಾಗುತ್ತಿರುವಾಗ ಹೇಗೆ ಕಾಣುವುದೋ ಹಾಗೆಯೇ ಸುತ್ತಲಿನ ವಾತಾವರಣ. ಕೊಳ್ಳದ ದಂಡೆಯ ಮೇಲೆ ನಾನಾ ಜಾತಿಯ ನಾನಾ ವಯಸ್ಸಿನ, ನಾನಾ ಉಡುಪು ತೊಟ್ಟ ಮನುಷ್ಯರು ತಲೆಗೆ ಕೈ ಕೊಟ್ಟು ಅಳುಮೋರೆಯಿಂದ ಕುಳಿತು ಮುಖವನ್ನು ಗಂಟುಗಂಟಾಗಿ ಮಾಡು ತ್ತಾರೆ. ಹದ್ದುಗಳು ಬಂದು ಮೈಯನ್ನು ಕೊಕ್ಕಿನಿಂದ ಕುಕ್ಕಿ ರಕ್ತ ಸುರಿದರೂ ಅವರು ಕೈಯೆತ್ತಿ ಅವುಗಳನ್ನು ಅಟ್ಟಲಾರರು. ಅಯ್ಯೋ ಎನ್ನುತ್ತ, ಅಪ್ಪ ಎನ್ನುತ್ತ ಮೈಯ ಇನ್ನೊಂದು ಭಾಗವನ್ನು ಹದ್ದಿನ ಕೊಕ್ಕಿಗೆ ನೀಡುವರು. ಮಾಧವನು ಅಲ್ಲಿ ಬಹಳವಾಗಿ ಸಂಚರಿಸುತ್ತಾನೆ. ಎಷ್ಟೋ ಸಲ ಕೊಳ್ಳದ ದಡದ ಮೇಲೆ ಕುಳಿತು ಎಲ್ಲರಂತೆ ತಾನೂ ಕಂಬನಿ ಸುರಿಸುತ್ತಾನೆ. ಎಲ್ಲಿಂದಲೋ ಏಕೋ ಎಂಥದೋ ನೆನಪುಗಳ ಹಿಂಡು ಬಂದು ಮನಸ್ಸನ್ನು ನುಗ್ಗುತ್ತದೆ. ಯಾವುದೋ ಕಾಣದ ಕೈ ಕರುಳನ್ನು ಕಿವುಚುತ್ತದೆ. ಹೃದಯದ ಕೆಳಗೆ ಒಂದು ಸ್ಪಿರಿಟ್‌ಲ್ಯಾಂಪ್ ಉರಿಯತೊಡಗುತ್ತದೆ, ಹೃದಯ ಕರಗಿ ನೀರಾಗಿ ಹರಿಯ ತೊಡಗುತ್ತದೆ. ಬಾಲ್ಯದಲ್ಲಿ ನಡೆದ, ಮರೆತುಹೋದ ನೂರಾರು ವಿದ್ಯಮಾನ ಗಳು ಇದ್ದಕ್ಕಿದ್ದಂತೆ ಬಂದು ಕಾಡುತ್ತವೆ: ತನಗೆ ಮೂರೇ ಮೂರು ವರ್ಷ ನಡೆಯುತ್ತಿದ್ದಾಗ ತಾನು ಪೇರಳೆ ಮರ ಹತ್ತಲು ಹೋಗಿ ಜಾರಿ ಬಿದ್ದದ್ದು ಈಗ ನೆನಪಿಗೆ ಬಂದು ಮೈ ಇದೇ ತಾನೆ ತರಿದು ಹೋಗಿದೆ ಎನ್ನುವಷ್ಟು ನೋವಾ ಗುತ್ತದೆ; ನಾಲ್ಕು ವರುಷವಾಗಿದ್ದಾಗ ಉಪ್ಪುಂದದ ಜಾತ್ರೆಯಲ್ಲಿ ತಪ್ಪಿಸಿ ಕೊಂಡು ಹೋಗಿ ಅಷ್ಟು ಜನದ ಮಧ್ಯವೂ ಏಕಾಂಗಿಯಾಗಿ ಅಲೆಯುತ್ತಾ

'ಅಮ್ಮಾ, ಅಮ್ಮಾ' ಎಂದು ಬಿಕ್ಕಿ ಬಿಕ್ಕಿ ಅಳುತ್ತಾ ಅಶ್ವತ್ಥದ ಕಟ್ಟೆಯ ಕೆಳಗೆ ಅದೆಷ್ಟೋ ಹೊತ್ತು ತಾನು ಕುಳಿತದ್ದು ಮತ್ತೆ ಹಠಾತ್ತಾಗಿ ಮನಸ್ಸಿಗೆ ದಾಳಿಯಿಟ್ಟು 'ಅಯ್ಯೋ, ಅಯ್ಯೋ, ಅಮ್ಮಾ, ಅಮ್ಮಾ' ಎಂದು ಮತ್ತೆ ಅಳಬೇಕೆನ್ನಿಸುತ್ತದೆ. ಆಸಾಡಿ ತಿಂಗಳಲ್ಲಿ ಮಳೆ ಒನಕೆಯಂತೆ ಮನೆಮಾಡನ್ನು ಬಡಿಯುತ್ತಿರುವಾಗ ಚಳಿಗಾಳಿ ಸುಯ್ಯೆಂದು ಬೀಸುತ್ತಿರುವಾಗ ತಾನು ತನ್ನ ಪುಟ್ಟಹಾಸಿಗೆಯಲ್ಲಿ ತನ್ನ ತಾಯಿಯನ್ನಪ್ಪಿ ಬೆಚ್ಚಗೆ ಮಲಗಿದ ನೆನಪು ಬಂದು ಆ ಬಿಸಿಗಾಗಿ, ಆ ಸುಖಕ್ಕಾಗಿ, ಆ ಸುರಕ್ಷಿತ ಸಮಾಧಾನಕ್ಕಾಗಿ ಮತ್ತೆ ಮನಸ್ಸು ಹಾತೊರೆದು ಒದ್ದಾಡುತ್ತದೆ.

ಈ ಸಂಕೀರ್ಣಭಾವಗಳನ್ನು ಹೇಗಾದರೂ ಹೊರಗೆಡಹದೆ ಗತ್ಯಂತರ ವಿಲ್ಲವೆಂದು ಮಾಧವನಿಗೆ ಎಷ್ಟೋ ಸಲ ಎನ್ನಿಸುತ್ತದೆ. ಪದರು ಪದರಾಗಿ, ತರ ತರಗಳಾಗಿ, ಸುರುಳಿ ಸುರುಳಿಯಾಗಿ ಬಿಚ್ಚುತ್ತಿರುವ ಈ ಭಾವನೆಗಳಿಗೆ ತಕ್ಕ ಮಾತು ಸಿಕ್ಕದೆ ಮಿಡುಕಾಡುತ್ತಾ ತೆರೆದ ಪುಸ್ತಕ ತೆರೆದಂತೆಯೇ ಕಣ್ಣ ಮುಂದೆ ಇದ್ದೂ ಅದೃಶ್ಯವಾಗುತ್ತಿರಲು ಶೂನ್ಯದೃಷ್ಟಿಯಿಂದ ಕೂತು ಕೊಳ್ಳುತ್ತಾನೆ. ಎಷ್ಟೋ ಸಲ ಕಾಗದ ಪೆನ್ಸಿಲು ತೆಗೆದುಕೊಂಡು ಏನೋ ಅಷ್ಟು ಗೀಚಿ ಕಾಗದವನ್ನು ಆ ಕಡೆಗೆ ಎಸೆದು ನಿಟ್ಟುಸಿರು ಬಿಡುತ್ತಾನೆ.

ಆದರೆ ಆ ಇನ್ನೊಂದು ಬಾಗಿಲು? ಕೂಡದು, ಅದನ್ನು ನೆನಸಿಕೊಳ್ಳಲೂ ಕೂಡದು. ಅದಕ್ಕೆ ಜೋಡು ಬೀಗ ಹಾಕಿ ಭದ್ರಪಡಿಸಿ, ಭೀಷ್ಮಸಂಕಲ್ಪದ ಮೊಹರು ಅದಕ್ಕೆ ಹಾಕಿದೆ. ಆದರೂ ಅದರ ಬಾಗಿಲೇ ಅದೆಷ್ಟು ಚೆಂದ! ಅದು ಬಾಗಿಲೇ ಅಲ್ಲ, ನಿಜವಾಗಿಯೂ. ಮೈತುಂಬ ಹೂತಳೆದು ನಿಂತ ಮಲ್ಲಿಗೆಬಳ್ಳಿ, ಜಾಜಿಬಳ್ಳಿ ಹೆಣೆದು ಹೆಣೆದು ಮಾಡಿದ್ದು ಆ ಬಾಗಿಲು. ಅದರ ಮೇಲೆಲ್ಲ ಕೆಂಪುಕೊಕ್ಕಿನ ಹಸರು ಗಿಳಿಗಿಳು; ಅದರ ಮೇಲೆ ಬೆಳುದಿಂಗಳನ್ನು ಲೇಪಿಸಿ ನಕ್ಷತ್ರಗಳನ್ನು ಕೆತ್ತಿದ್ದಾರೆ. ವಸಂತಕಾಲದ ಚಿಗುರೆಲೆಗಳ ಕೆಂಪು ಅಲ್ಲಿ ದಟ್ಟಯಿಸಿದೆ; ಕೋಗಿಲೆಯ ಇಂಚರ ಅಲ್ಲಿ ಕ್ಷಣಕ್ಷಣವೂ ಸಂಚರಿಸುತ್ತದೆ. ವೀಣೆ ತಂಬೂರಿ ಸಿತಾರು ಕೊಳಲುಗಳ ಸ್ವರಮೇಳ ಆ ಬಾಗಿಲ ಬೀಗದ ಸಂದಿಯಿಂದ ತಂಗಾಳಿಯಲ್ಲಿ ತೇಲಿ ಬರುವ ದೂರದ ಮಧುರ ಸಂಗೀತದಂತೆ ಬಂದು ಪಿಸುಗುಟ್ಟುತ್ತದೆ. ಬೇಕೆಂತಲೇ ಆ ಬಾಗಿಲ ಮುಂದೆ ಮಾಧವ ಒಂದು ಗೋಣಿಚೀಲದ ಪರದೆ ಇಳಿಬಿಟ್ಟಿದ್ದಾನೆ. ಆದರೆ ಪರದೆ ಪ್ರತಿಕ್ಷಣವೂ

ಪ್ರತಿಯೊಂದು ಗಾಳಿಯಲೆಗೂ ಸರಿದು ಬಾಗಿಲಿನ ಒಂದೊಂದು ಅಂಗುಲವನ್ನು ತೆರೆದು ತೋರುತ್ತದೆ.... ಆದರೆ ಅದರ ವಿಷಯ ಯೋಚಿಸಕೂಡದಲ್ಲ; ಖಂಡಿತ ಕೂಡದು. ಆ ಬಾಗಿಲ ಹತ್ತಿರ ಹೋಗುವುದಿಲ್ಲ, ಹೋದರೂ ಬಾಗಿಲನ್ನು ಖಂಡಿತ ತೆರೆಯುವುದಿಲ್ಲ ಎಂದು ಎಷ್ಟು ದೇವರ ಆಣೆಯಿಟ್ಟುಕೊಂಡಿಲ್ಲ ಅವನು ? ಆದರೆ ಅವನು ತನ್ನ ಭಾಷೆಯನ್ನು ತಾನೇ ಅದೆಷ್ಟು ಸಲ ಮುರಿದು ಬಿಟ್ಟಿದ್ದಾನೆ. ಮತ್ತೆಮತ್ತೆ ದೇವರನ್ನು ಮರೆ ಹೊಕ್ಕಿದ್ದಾನೆ: "ಅಯ್ಯೋ ತಂದೆ, ಕ್ಷಮಿಸು ಈ ಪಾಪಿಯನ್ನು. ಮತ್ತೆ ಅಲ್ಲಿ ಆ ಬಾಗಿಲ ಬಳಿ ಸುಳಿಯುವುದಿಲ್ಲ." ಸುಳಿಯುವುದಿಲ್ಲ ! ಪ್ರತಿದಿನವೂ ಪ್ರತಿನಿಮಿಷವೂ ಆ ಬಾಗಿಲ ಹತ್ತಿರವೇ ಸುಳಿದಾಟ. ಅದನ್ನು ಮರೆಯಲು ಯತ್ನಿಸಿದಷ್ಟೂ ಅದರ ನೆನಪು ತೀವ್ರ ವಾಗುತ್ತದೆ. ಕ್ಷಣಕ್ಷಣವೂ ಮಾಧವನ ಆತ್ಮಗೌರವ ಚೂರುಚೂರಾಗುತ್ತದೆ. ಗೋಳೋ ಎಂದು ಅಳುತ್ತಾನೆ, ಅತ್ತು ಕಣ್ಣು ಕೆಂಪಾಗುತ್ತದೆ. ಸುರಿದ ಕಣ್ಣೀರು ಆರುವ ಮೊದಲೇ ಮತ್ತೆ ಆ ಬಾಗಿಲ ಬಳಿ ಅವನ ಕಾಲು ಸುಳಿ ದಾಡುತ್ತಿರುತ್ತದೆ.

ಬೇಡ ಬೇಡವೆಂದರೂ ಕೂಡ ಕೂಡದೆಂದರೂ ಆ ಬಾಗಿಲು ಚಂದ್ರನನ್ನು ಕವಿದ ಮೋಡ ಸರಿಯುವಂತೆ ಮೆಲ್ಲನೆ, ಬಹು ಮೆಲ್ಲನೆ ಮೃದುವಾಗಿ ಮಧುರ ವಾಗಿ ಸರಿದು ನಿಲ್ಲುತ್ತದೆ. ವೀಣೆ ಸಿತಾರು ತಂಬೂರಿಗಳು ಝೇಂಕರಿಸುತ್ತವೆ. ಮಾದಕ ಸುಗಂಧವೊಂದು — ಬಹುಶಃ ಅದು ಸುರಲೋಕದ ಮಂದಾರದ್ದೇ ಇರಬೇಕು — ಒಳಗಿನ ಕೋಣೆಯಿಂದ ಹೊರ ಹೊಮ್ಮಿ ಮಾಧವನ ನರ ನರವನ್ನೂ ತುಂಬಿ ತುಳುಕಿ ಕೆರಳಿಸುತ್ತದೆ. ತಲೆ ಸುತ್ತ ತೊಡಗುತ್ತದೆ. ಚಿತ್ತ ಬುಗುರಿಯಂತೆ ತಿರುಗುತ್ತ ನೆಲಬಿಟ್ಟು ಎರಡಂಗುಲ ಏರಿ ನಿಲ್ಲುತ್ತದೆ. ತೆರೆದ ಬಾಗಿಲ ಹೊಸ್ತಿಲ ಬಳಿ ನಿಂತು ಮಾಧವ ಮಂತ್ರಮುಗ್ಧನಂತೆ ನೋಡುತ್ತಾನೆ. ಬೇಡ ಬೇಡ ಬೇಡ ಎನ್ನುತ್ತಿದ್ದ ವಿವೇಕ ಹಾವುಕಚ್ಚಿದ ಹಕ್ಕಿಯಂತೆ ವಿಲವಿಲ ಒದ್ದಾಡುತ್ತಾ ಇರುತ್ತದೆ. ಒಳಗೆ ಮಂದವಾದ, ಕಣ್ಣನ್ನು ತಣಿಸುತ್ತ ಉದ್ದೀ ಪಿಸುವ, ಹಸುರು ಬೆಳಕು — ಅಲ್ಲ, ಕೆಂಪು, ನೀಲಿ, ಅರಸಿನ — ಕಾಮನ ಬಿಲ್ಲಿನ ಬಣ್ಣಬಣ್ಣವಾಗಿ ಮಾರ್ಪಡುತ್ತಾ ಆ ಬೆಳಕು ವೀಣೆಯ ಇಂಚರಕ್ಕೆ ತಾಳವಿಡುತ್ತ ಕುಣಿಯುತ್ತದೆ. ಆ ಬೆಳಕಿನ ಹಿನ್ನೆಲೆಯಲ್ಲಿ ಒಂದು ರೇಸಿಮೆಯ ಪಾರದರ್ಶಕವಾದ ತೆರೆ ತಂಗಾಳಿಗೆ ಚಂಚಲವಾದ ತಂಗೊಳದ ಮೇಲುಮೈ

ಯಂತೆ ಮರ್ಮರಿಸುತ್ತದೆ. ಕಾಲ ಗೆಜ್ಜೆಗಳ ಝಣಝಣತ್ಕಾರ ಹೆಡೆಯೆತ್ತಿ ಅಪ್ಪಳಿಸುವ ಕಾಳೋರಗದಂತೆ ಹೃದಯವನ್ನು ಕಚ್ಚಿ ಕೆಣಕಿ ಜುಮ್ಮುದಟ್ಟಿಸಿ ಹುಚ್ಚೆಬ್ಬಿಸುತ್ತದೆ. ಮತ್ತೆ ಮತ್ತೆ ಅದೇ ಝಣರು ಝಣರು ಝಣ ಝಣಣಣ........

ಮಾಧವ ಹೊಸ್ತಿಲಿಂದ ಒಂದು ಹೆಜ್ಜೆ ಮುಂದಿಡುತ್ತಾನೆ — ನಿದ್ದೆಯಲ್ಲೇ ನಡೆದಾಡುವವನಂತೆ. ತೆರೆ ಹಠಾತ್ತನೆ ಸರಿಯುತ್ತದೆ. ಬೆಳಕು ಕೊಂಚ ತೀಕ್ಷ್ಣವಾಗುತ್ತದೆ. ಒಳ ಕೋಣೆಯ ಮೂಲೆ ಮೂಲೆಯೂ ಬೆಳುದಿಂಗಳಿನಿಂದ, ಬೆಳ್ಳಿ ಬೆಳಕಿನಿಂದ ತುಂಬುತ್ತದೆ. ಒಳಗಿನ ವಾತಾವರಣದ ಕಾವು ಕ್ರಮ ಕ್ರಮವಾಗಿ ಏರುತ್ತಾ ಬಂದು ಎದೆ ಬೆಚ್ಚಗಾಗಿ, ಬಿಸಿಯಾಗಿ, ಬೆಂಕಿಯ ಕೆಂಡವಾಗಿ ಧಗಧಗಿಸುತ್ತದೆ.

ಒಳಗಿನ ಬೆಳಕು ಝಗ ಝಗಿಸುತ್ತದೆ. ಕಾಲಗೆಜ್ಜೆಗಳ ಝಣತ್ಕಾರ ನಿಲ್ಲುತ್ತದೆ. ವೀಣೆ ತಂಬೂರಿ ಕೊಳಲು ಮೃದಂಗಗಳ ನಾದ ಇಳಿಯುತ್ತ ಬಂದು ಪಿಸುಮಾತಿನಂತೆ ಗಾಳಿಯಲ್ಲಿ ಹೊಟ್ಟೆಯೊಳೆಯುತ್ತದೆ.

ಸಾವಿರ ಕ್ಯಾಂಡಲ್ಲುಗಳ ವಿದ್ಯುದ್ದೀಪ ತೆರೆಯಾಚೆ ಕೇಂದ್ರೀಕೃತವಾಗುತ್ತದೆ.

ಅಲ್ಲಿ ——

ಅಲ್ಲಿ ಒಬ್ಬಳು ತರುಣಿ. ಗಂಡಸಿನ ಮನಸ್ಸಿನಲ್ಲಿ ಯುಗಯುಗಗಳಿಂದ ಕೊರೆಯುತ್ತಿದ್ದ ಆಶೆಯೇ ಇಲ್ಲಿ ಮೈ ತಾಳಿದಂತೆ. ನಗ್ನ ದೇಹ. ಮುಟ್ಟಿದರೆ ರಕ್ತ ಸಿಡಿಯುವಂಥ ಕೆಂಪು ಎದ್ದು ಕಾಣುವ ಗೌರಾಂಗ. ತೆಳ್ಳನೆಯ ರೇಸಿಮೆಯಂಥ ಚರ್ಮ ಆ ದಟ್ಟಬೆಳಕಿನಲ್ಲಿ ಮಿರಿ ಮಿರಿ ಮಿಂಚುತ್ತದೆ. ಆ ದೇಹದ ಉಬ್ಬು ತಗ್ಗುಗಳಿಂದ ನೂರು ಬಾಣಗಳು ಒಂದೇ ಸಲಕ್ಕೆ ಚಿಮ್ಮುತ್ತವೆ. ಅವಳ ಕಣ್ಣುಗಳಲ್ಲಿ ಮೇನಕೆಯ ಮೋಹಕತೆ ತುಂಟಾಟವಾಡುತ್ತದೆ. ತುಟಿಗಳಲ್ಲಿ ಋಷಿಮುನಿಗಳನ್ನು ನಕ್ಕ ಆ ಲೋಕ-ವಿಜಯಿ ಮಂದಹಾಸ ಹಾಯುತ್ತದೆ. ತೆರೆ ಸರಿಯುತ್ತದೆ, ಮುಚ್ಚುತ್ತದೆ,.... ಸರಿಯುತ್ತದೆ. ಅಯ್ಯೋ, ಇದು ಕೂಡದು -— ಕೂಡದು — ಬೇಡ ಬೇಡ.

ಮಾಧವನ ವಿವೇಕ ಚೀರುತ್ತದೆ. "ಹೆಂಗಸನ್ನು ಕಣ್ಣೆತ್ತಿ ನೋಡಬಾರದು. ಹೆಂಗಸನ್ನು ನೋಡಿದರೆ ಬ್ರಹ್ಮಚಾರಿ ತಲೆತಗ್ಗಿಸಿಕೊಳ್ಳಬೇಕು–"

‘ ಬ್ರಹ್ಮಚರ್ಯವೇ ಜೀವನ ’ ಎಂಬ ಆ ಪುಸ್ತಕದ ಈ ಮಹಾವಾಕ್ಯ ಗುಡುಗಿನಂತೆ ಮೊಳಗುತ್ತದೆ. ತಾನು ಮಾಡಬಾರದುದನ್ನು ಮಾಡುತ್ತಿರುವೆನೆಂದು ಮಾಧವನ ಸುಪ್ತ ಸಮಾಜಪ್ರಜ್ಞೆ ಜಾಗ್ರತವಾಗಿ ಭೀತಿಯ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತದೆ.

ಆದರೂ ಇನ್ನು ಒಂದೇ ಕ್ಷಣ — ಒಂದೇ ಕ್ಷಣ. ಆ ಸೂಜಿಗಲ್ಲು ಈ ಕಬ್ಬಿಣವನ್ನು ಸೆಳೆಯುತ್ತದೆ. ಪ್ರವಾಹದಲ್ಲಿ ಬಿದ್ದ ತಳಿರು ನಾಗಾಲೋಟದಿಂದ ಮುನ್ನುಗ್ಗುತ್ತದೆ.

ಅಬ್ಬಾ ! ಬಾಗಿಲು ದಢಾರನೆ ಮುಚ್ಚಿತು. ಬೆಳಕು ಕುಗ್ಗಿತು. ನಾದ ತಗ್ಗಿತು. ಮಾಧವನ ಮನಸ್ಸು ಕಾವಿಳಿದು, ನೆಲಕ್ಕೆ ಬಿದ್ದ ಗಾಳಿಪಟದಂತೆ ಒರಗಿತು. ಮತ್ತೆ ಜೋಡು ಬೀಗ ಭದ್ರವಾಯಿತು. ಭೀಷ್ಮ ಪ್ರತಿಜ್ಞೆಯ ಮುದ್ರೆ ಬಿತ್ತು. ದಾರುಣದುಃಖದಿಂದ ಮಾಧವನ ಮನಸ್ಸು ಶತಚ್ಛಿದ್ರವಾಯಿತು. “ ಅಯ್ಯೋ ದೇವರೇ ! ದುರ್ಬಲವಾದ ಈ ನನ್ನ ಮನಸ್ಸನ್ನು ಕ್ಷಮಿಸು. ಇದು ಕೂಡದೆಂದು ಬಲ್ಲೆ. ಆದರೆ ಈ ಚಂಡಾಲ ಮನಸ್ಸು ಆ ಕಡೆಯೇ ಓಡುತ್ತದೆ. ಮನ್ನಿಸು ತಂದೆ, ಮನ್ನಿಸು. ”

ಕುಸಿದು ಬಿದ್ದ ಮನಸ್ಸು ಇನ್ನೊಂದು ಬಾಗಿಲಿನ ಕಡೆ ತೆವಳಿಕೊಂಡು ಹೋಗುತ್ತದೆ. ಆ ಬಾಗಿಲಿನಾಚೆ ಒಂದು ಕಿರುಕೋಣೆ. ಅಲ್ಲಿನ ದಟ್ಟ ಕತ್ತಲಿನೊಡನೆ ಒಂದೇ ಒಂದು ಹಣತೆ ಹೋರಾಡುತ್ತದೆ. ಅಲ್ಲಿ ಲೋಭಾನದ ಹೊಗೆ ಗಮಗಮಿಸುತ್ತದೆ. ಗಂಧದ ಕಡ್ಡಿಗಳ ಸುಗಂಧ ಮನಸ್ಸನ್ನು ತಣಿಸುತ್ತದೆ. ಒಂದು ಮೂಲೆಯಲ್ಲಿ ಸಾಲು ಸಾಲಾಗಿ ಋತ್ವಿಜರು ಕುಳಿತಿದ್ದಾರೆ. ಅವರ ಬಾಯಿಯಿಂದ ವೇದಮಂತ್ರ ಮೊಳಗುತ್ತದೆ. ಆ ಮಂತ್ರಗಳ ದೈವಿಕ ನಾದ ವಿನ್ಯಾಸದಲ್ಲಿ ಮಾಧವನ ಮನಸ್ಸು ಬೆರೆದು ಓಂಕಾರದ ಏಣಿಯನ್ನೇರಿ ಆಕಾಶದ ಕಡೆ ಸಾಗುತ್ತದೆ. ಹತ್ತಾರು ಗಂಟೆಗಳು ಬಾರಿಸುತ್ತವೆ. ಶಂಖ ಧ್ವನಿ ಉಚ್ಚೈಶ್ರವಸ್ಸಿನ ಹೇಷಾರವದಂತೆ ಮೊರೆಯುತ್ತದೆ. ದೇಹದ ಮಣ್ಣು ಗುಡಿಸಲಿನಿಂದ ಮಾಧವನ ಮನಸ್ಸು ಹೊರಡುತ್ತದೆ. ಆ ಕಿರುಕೋಣೆಯ ಮಂದಾಸನದ ಮೇಲೆ ಮಂಡಿಸಿದ ದೇವರ ವಿಗ್ರಹದ ಸುತ್ತಲೂ ಹಂಸದಂತೆ ಅದು ಸುತ್ತುತ್ತದೆ. ನಾರದರ ತುಂಬುರರ ತಂಬೂರಿನಾದ ತೆರೆತೆರೆಯಾಗಿ ಬಂದು ಹಾಯುತ್ತದೆ. ಋಷಿಮುನಿಗಳ ತೇಜೋರೂಪಗಳು ಹಿಮಗಿರಿಯ

ಕಂದರದ ಶುದ್ಧ ಶೀತಲ ಹಿಮವರ್ಷವನ್ನು ಕರೆಯುತ್ತವೆ. ದೇಹ ಜಡವಾಗಿ ಕೊರಡಿನಂತೆ ಬಿದ್ದು ಮನಸ್ಸಿನ ಈ ಏರಾಟಕ್ಕೆ ರಂಗಸ್ಥಳವಾಗಿ ಮಾರ್ಪಡುತ್ತದೆ. ಸಂಯಮದ ಯಮನಿಯಮದ ಗೌರೀಶಂಕರವನ್ನು ಏರಲು ಅಂತರಂಗ ಹಾರಯಿಸುತ್ತದೆ. ಧ್ಯಾನ ಧಾರಣೆಗಳ ಧೀರ ಮಾರ್ಗದಲ್ಲಿ ಅಡಿಯಿಡಲು ಚೇತನ ಹಾತೊರೆಯುತ್ತದೆ. ವಿವೇಕಾನಂದರ 'ರಾಜಯೋಗ' ದಲ್ಲಿ ಮಾಧವನು ಓದಿದ್ದ 'ಯೋಗಃ ಚಿತ್ತವೃತ್ತಿ ನಿರೋಧಃ' ಎಂಬ ಮಾತು ನೆನಪಿಗೆ ಬರುತ್ತದೆ. 'ಮನಸ್ಸನ್ನು ಗೆದ್ದವನು ಯಾರೋ ಅವನೇ ಲೋಕವನ್ನು, ಗೆದ್ದವನು' ಎಂಬ ಶಂಕರಾಚಾರ್ಯರ ಮಾತು ನಿಜ ನಿಜ ನಿಜ ಎಂದು ತನಗೆ ತಾನೇ ಹೇಳಿಕೊಳ್ಳುತ್ತಾನೆ. ................

ಅದೆಷ್ಟೋ ದಿನಗಳಿಂದ ಮರೆತು ಬಿಟ್ಟ ನಿಯತ ಜೀವನ ಮತ್ತೆ ಆರಂಭ ವಾಗುತ್ತದೆ. ಬೆಳಗ್ಗೆ ಐದು ಗಂಟೆಗೇ ಎದ್ದು ತಣ್ಣೀರಿನಲ್ಲಿ ಸ್ನಾನಮಾಡಿ ಸೂರ್ಯ ನಮಸ್ಕಾರ ಹಾಕುತ್ತಾನೆ. ಪದ್ಮಾಸನದಲ್ಲಿ ಕುಳಿತು ನಾಸಿಕಾಗ್ರದೃಷ್ಟಿಯಿಂದ ಮನಸ್ಸನ್ನು ಏಕಾಗ್ರಗೊಳಿಸಲು ಯತ್ನಿಸುತ್ತಾನೆ. ಬೀದಿಯಲ್ಲಿ ನಡೆಯುವಾಗ ತಲೆ ತಗ್ಗಿಸಿಯೇ ನಡೆಯುತ್ತಾನೆ. ಆಗೀಗ ಕಣ್ಣೆತ್ತಿ ನೋಡಿದಾಗ 'ಕೂಡದು, ಸಲ್ಲದು' ಎಂದು ಉಸಿರು ಬಿಗಿಹಿಡಿದು ಮುಂದುವರಿಯುತ್ತಾನೆ. ಪರಮಹಂಸರ ಉಪದೇಶ, ವಿವೇಕಾನಂದರ 'ರಾಜಯೋಗ' 'ರಾಮತೀರ್ಥರ ಉಪನ್ಯಾಸ ಗಳು' ಮುಂತಾದ ಧರ್ಮಗ್ರಂಥಗಳನ್ನು ಓದ ತೊಡಗುತ್ತಾನೆ.

ಮನಸ್ಸು ತನ್ನ ಹತೋಟಿಗೆ ಬರುತ್ತಿರುವ ಹಾಗೆ ತೋರುತ್ತದೆ. ಮುಚ್ಚಿದ ಆ ಕೆಟ್ಟ ಬಾಗಿಲು ತೆರೆಯುವುದಿಲ್ಲ. ಅದರ ಬಳಿಯೇನೋ ಮನಸ್ಸು ಸುಳಿ ದಾಡುತ್ತದೆ. ಆದರೆ ಅದನ್ನು ಬಲಾತ್ಕಾರದಿಂದ ಹಿಡಿದೆಳೆದು ದೃಢನಿಶ್ಚಯದ ಕಂಭಕ್ಕೆ ಮತ್ತೆ ಮತ್ತೆ ಕಟ್ಟಿ ಹಾಕುತ್ತಾನೆ.

ನಾಲ್ಕೈದು ದಿನ —

ಆ ಮೇಲೆ ಮನಸ್ಸು ಮದ್ದಾನೆಯಂತೆ ತನ್ನ ಕಟ್ಟುಗಳನ್ನೆಲ್ಲ ಒಂದೊಂದಾಗಿ ಹರಿದುಕೊಳ್ಳತೊಡಗುತ್ತದೆ. ಬೆಳಗ್ಗೆ ಐದು ಗಂಟೆಗೆ ಏಳಲು ಆಗುವುದಿಲ್ಲ. ಸೂರ್ಯನಮಸ್ಕಾರ ಮಾಡಲು ಏನೋ ಬೇಸರ. ಪದ್ಮಾಸನದಲ್ಲಿ ಕುಳಿತರೆ ಕಣ್ಣು ಮೂಗಿನ ತುದಿಯಲ್ಲಿ ನಿಲ್ಲುತ್ತದೆ; ಮನಸ್ಸು ಮಾತ್ರ ನಾಗಾಲೋಟದಿಂದ ಸಪ್ತಲೋಕಗಳನ್ನು ಸುತ್ತಿ ಬರುತ್ತದೆ.

ಕೊನೆಗೆ ಮದಗಜ ತನ್ನ ಎಲ್ಲ ಕಟ್ಟುಗಳನ್ನು ಹರಿದುಕೊಂಡು ಮಾವುತನನ್ನು ಕೆಳಗುರುಳಿಸಿ ನಿಟ್ಟೋಟದಿಂದ ಓಡುತ್ತದೆ.

ಜೋಡು ಬೀಗದ ಆ ಬಾಗಿಲನ್ನು ಒದ್ದು ಒಡೆದು ಒಳಕ್ಕೆ ನುಗ್ಗುತ್ತದೆ.

ಮಾಧವಕೃಷ್ಣರು ಕುಂದಾಪುರಕ್ಕೆ ಮರಳಿ ಬಂದು ರಾಜಕೀಯದ ಸಾರ್ವಜನಿಕ ಜೀವನದಿಂದ ಮತ್ತೆ ಪಾಠಪ್ರವಚನಗಳ, ಗಣಿತಸಾಹಿತ್ಯ ಜ್ಞಾನಗಳ ವಿದ್ಯಾರ್ಥಿಜೀವನದಲ್ಲಿ ಮುಳುಗಿದರು. ದಿನದಿನಕ್ಕೆ ಪರೀಕ್ಷೆಯ ಕಾವು ಏರುತ್ತಿತ್ತು. ದೂರದ ಆ ಮಾರಿಯ ಹೆಜ್ಜೆ ಸಪ್ಪುಳ ಆಗಲೇ ಎಲ್ಲ ಹುಡುಗರ ಕಿವಿಯಲ್ಲೂ ಮೊರೆಯ ತೊಡಗಿತು. ಕ್ಲಾಸಿನಲ್ಲಿ ಬುದ್ಧಿವಂತ ರೆನ್ನಿಸಿಕೊಂಡಿದ್ದ ಹುಡುಗರಲ್ಲಂತೂ ಮೊದಲಿಂದ ಇದ್ದ ಸ್ಪರ್ಧೆ ಈಗ ಇಮ್ಮಡಿ ಮುಮ್ಮಡಿಯಾಯಿತು. ಮಾಧವನಲ್ಲಿ ಎಲ್ಲರನ್ನೂ ಮೀರಿಸುವ ಆಶೆ, ಚೆನ್ನಾಗಿ ಓದಿದರೆ ಎಲ್ಲರನ್ನೂ ಮೀರಿಸಬಲ್ಲೆನೆಂಬ ಆತ್ಮವಿಶ್ವಾಸ - ಎರಡೂ ಇತ್ತು. ಚೆನ್ನಾಗಿ ಓದಲು ಪ್ರತಿದಿನವೂ ಪ್ರಯತ್ನಿಸುತ್ತಿದ್ದ. ಎರಡು ದಿನ ಪಟ್ಟಾಗಿ ಕೂತು ಓದಿದರೆ ನಾಲ್ಕು ದಿನ ಓದಲು ಆಗುತ್ತಿರಲಿಲ್ಲ. ಮನಸ್ಸಿನ ಗೊಂದಲ ಕೊಂಚವೂ ಕಡಿಮೆಯಾಗುವ ಲಕ್ಷಣವಿಲ್ಲ. ಅದರಿಂದ ಹುಟ್ಟುವ ನಿರಾಶೆ ಯಿಂದ ಅವನ ಮನಸ್ಸು ಬಾಡುತ್ತದೆ. ಕೃಷ್ಣನಲ್ಲಿ ಅಂಥ ಯಾವ ದೊಡ್ಡ ಆಶೆಯೂ ಇರಲಿಲ್ಲ. ಪರೀಕ್ಷೆಯಲ್ಲಿ ಪಾಸಾದರೆ ಅವನು ಕೃತಾರ್ಥ. ಮನೆಯಲ್ಲಿ ಕೊಂಚ ಉತ್ಪನ್ನವಿದೆ. ಅವನ ತಂದೆಯ ಶ್ಯಾನುಭೋಗವೃತ್ತಿ ಅವನಿಗೇ ಬರುತ್ತದೆ. ಆದರೂ ಓದಬೇಕು. ಪಾಸಾಗದೆ ಹೋದರೆ ಅವಮಾನ. ಊರಲ್ಲಿ ಆ ಮೇಲೆ ಮುಖವೆತ್ತಿಕೊಂಡು ತಿರುಗುವುದು ಹೇಗೆ? ಆಗಾಗ ಕ್ಲಾಸಿನ ಇತರ ಬುದ್ಧಿವಂತ ಹುಡುಗರು ಮಾಧವನನ್ನು ನೋಡಲು ಬರುತ್ತಾರೆ. ಅವರೆಲ್ಲರೂ ಚೆನ್ನಾಗಿ ಓದುವವರೇ. ಆದರೆ ಯಾರಿಗೂ ತಾನು ಚೆನ್ನಾಗಿ ಓದುತ್ತೇನೆಂದು ಹೇಳಲು ಇಷ್ಟವಿಲ್ಲ. ಆ ನಾಗೇಶ ಇಲ್ಲವೆ— ಅವನು ರಾತ್ರಿ ನಿದ್ದೆಮಾಡುವುದೇ ಇಲ್ಲ ಎಂದು ಹುಡುಗರಲ್ಲೆಲ್ಲ ಪ್ರಸಿದ್ಧಿ. ಅವನನ್ನೇ ಕೇಳಿದರೆ " ಅಯ್ಯೋ, ಓದುವುದಕ್ಕೇ ಆಗುತ್ತಿಲ್ಲ; ಪುಸ್ತಕ ಕೈಲಿ ಹಿಡಿದರೇ ನಿದ್ದೆ, ಮತ್ತೆ ಎದ್ದಾಗ ಏಳುಗಂಟೆ " ಎನ್ನುತ್ತಾನೆ. ಆ ವಿಷ್ಣು ಕಾಮತ್, ಪದ್ಮನಾಭ ಭಂಡಾರಿ, ವಾಸುದೇವರಾವ್, ನಾರಾಯಣ ನಾಯಕ- ಎಲ್ಲರೂ ಖದೀಮರೇ. ಓದುವುದಕ್ಕೆ ದಿನದ ಇಪ್ಪತ್ತನಾಲ್ಕು ಗಂಟೆಯೂ

ಸಾಲದು ಅವರಿಗೆ. ಒಂದು ದಿನ ರಾತ್ರಿ ಒಂಭತ್ತು ಗಂಟೆ ಹೊತ್ತಿಗೆ ಊಟ ಮುಗಿಸಿ ಮಾಧವ ಕೃಷ್ಣ ಇಬ್ಬರೂ ಪುಸ್ತಕವನ್ನು ಓದಲೆಂದು ತೆರೆದಿದ್ದರಷ್ಟೆ. ಆಗ ನಾಗೇಶ ವಿಷ್ಣು ಇಬ್ಬರೂ ಬಂದರು. ಅವರಿಬ್ಬರೂ ಆಪ್ತ ಸ್ನೇಹಿತರು.

"ಏನು, ದಿನವೆಲ್ಲ ಓದುವುದೇ ಆಂತ ಕಾಣುತ್ತದೆ" ಎಂದ ನಾಗೇಶ.

"ಇಲ್ಲ ಮಹಾರಾಯ, ಈಗ ತಾನೇ ಪುಸ್ತಕ ತೆರೆದೆವು" ಎಂದ ಮಾಧವ.

"ನರಿಬೇಣದ ಆಟದ ಬಯಲಲ್ಲೂ ಕಾಣಿಸಲಿಲ್ಲ ನೀವು; ಹೊಳೆಯ ದಂಡೆಯ ಮೇಲೂ ಇರಲಿಲ್ಲ" ಎಂದ ವಿಷ್ಣು. ತಾವು ಓದುವುದನ್ನು ಬದಿಗಿಟ್ಟು ಆಟದಲ್ಲೂ ಓಡಾಟದಲ್ಲೂ ಸಮಯ ಕಳೆಯುತ್ತೇವೆಂಬುದನ್ನು ಅವನು ಸಿದ್ಧಪಡಿಸಬೇಕಾಗಿತ್ತು.

"ಅಲ್ಲವೇ ಇನ್ನೇನಯ್ಯಾ, ಪರೀಕ್ಷೆಯೊಂದು ಉಂಟಲ್ಲ" ಎಂದ ಕೃಷ್ಣ. ಕೃಷ್ಣನ ಈ ಬಗೆಯ ಮಾತೇ ಸರಿ ಎನ್ನಿಸಿತು ಮಾಧವನಿಗೆ.

"ಹಾಗೆ ಪರೀಕ್ಷೆ ಅಂತ ದಿನವೆಲ್ಲ ಓದಿದರೆ ಆರೋಗ್ಯದ ಗತಿ ಏನಯ್ಯಾ?" ಎಂದ ನಾಗೇಶ

"ಕಣ್ಣಿಗೆ ಕನ್ನಡಕ ಬರುತ್ತದೆ; ಡಾಕ್ಟರಿಗೆ ದುಡ್ಡು ಹೋಗುತ್ತದೆ" ಎಂದ ಕೃಷ್ಣ, ನಾಗೇಶನ ಕನ್ನಡಕವನ್ನೇ ನೋಡುತ್ತ.

ಈ ಮಾತಿನಿಂದ ನಾಗೇಶ ಕೊಂಚ ತಬ್ಬಿಬ್ಬಾಗಿ

"ಈ ಕೃಷ್ಣನ ಬಾಯಿಯ ಮುಂದೆ ಯಾರ ಆಟವೂ ನಾಗುವ ಹಾಗಿಲ್ಲ" ಎಂದ.

"ಅವನ ಬಾಯಿಗೆ ಬೀಳಬಾರದು — ಅಷ್ಟೆ" ಎಂದ ಮಾಧವ.

"ನಾವೇ ಹೋಗಿ ಬೀಳುತ್ತೇವೋ? ನೋಡು ಅವನ ಬಾಯನ್ನ; ಅದು ನಮ್ಮನ್ನೇ ಹುಡುಕಿಕೊಂಡು ಬರುತ್ತದೆ." ವಿಷ್ಣು ನಕ್ಕ.

"ಹೋಗಲಿ ಬಿಡು; ಮಾಧವ, ಪಾಠವೆಲ್ಲ ಒಂದು ಸಲ ಪುನರಾವೃತ್ತಿ ಆಯಿತೋ?" ಎಂದು ನಾಗೇಶ ಕೇಳಿದ.

"ಗಣಿತವೊಂದು ಬಿಟ್ಟು ಬಾಕಿಯೆಲ್ಲ ಒಂದು ಸಲ ಓದಿ ಮುಗಿಸಿದ್ದೇನೆ" ಎಂದ ಮಾಧವ, "ಆದರೆ ತಲೆಯಲ್ಲಿ ಮಾತ್ರ ಒಂದು ಚೂರೂ ನಿಂತಿಲ್ಲ" ಎಂದು ಮಾತು ಸೇರಿಸಿದ. ನಾಗೇಶನಿಗೆ ಬೇಕಾಗಿದ್ದದ್ದೂ ಅದೇ.

"ನಾನು ನೋಡಪ್ಪಾ, ಈ ವರೆಗೆ ಮುಗಿಸಿದ್ದು ಅಂದರೆ ಇಂಗ್ಲಿಷ್

ಒಂದನ್ನೇ. ಬಹಳ ಹೆದರಿಕೆಯಾಗುತ್ತಯ್ಯ " ಎಂದ ನಾಗೇಶ.

" ಅಯ್ಯೋ ಪಾಪ; ನಿನಗೆ ಈ ಗತಿ ಬರುತ್ತದೆ ಅಂತ ನನಗೂ ಅನ್ನಿಸಿರಲಿಲ್ಲ. ಇನ್ನೂ ಇಂಗ್ಲಿಷ್ ಒಂದೇ ಓದಿರುವುದು. ಅದೂ ತಲೆಯಲ್ಲಿ ಏನೂ ನಿಂತಿಲ್ಲ ಅಂತ ಕಾಣುತ್ತೆ " ಎಂದ ಕೃಷ್ಣ ಬಹು ಗಂಭೀರವಾಗಿ.

" ಇಲ್ಲ ಮಾರಾಯ; ಈಗ ಕೇಳಿದರೆ ಒಂದಕ್ಕೂ ಉತ್ತರ ಹೇಳಲಾರೆ. "

" ಇನ್ನು ಇರುವುದು ಮೂರೇ ತಿಂಗಳು. ಅಷ್ಟರಲ್ಲಿ ಹೆಚ್ಚೆಂದರೆ ಗಣಿತವೊಂದನ್ನು ಮುಗಿಸಬಹುದು. ಪಾಪ, ಎಂಥ ಗತಿ ಬಂತಯ್ಯ ನಿನಗೆ ! ಹೋಗಲಿ ಬಿಡು, ಈ ವರ್ಷ ನೀನು ಪರೀಕ್ಷೆಗೆ ಹೋಗುವುದೇ ಬೇಡ. ಹೋಗಿ ಫೇಲಾಗುವುದಕ್ಕಿಂತ ಹೋಗದಿರುವುದೇ ಮೇಲು. ಮುಂದಿನ ವರ್ಷ ಫಸ್ಟ್ ಕ್ಲಾಸಿನಲ್ಲೇ ಪಾಸ್ ಆಗಬಹುದಲ್ಲ. "

ಮತ್ತೆ ನಾಗೇಶ ತಬ್ಬಿಬ್ಬಾದ, ಪೆಚ್ಚಾದ.

" ನಮ್ಮ ಮಾಧವ ಓದಿದ ಹಾಗೆ ಓದಿದರೆ ನೋಡಿ, ಯಾರೇ ಆಗಲಿ ಫಸ್ಟ್ ಕ್ಲಾಸಿನ ಅಪ್ಪನ ಹಾಗೆ ಪಾಸಾಗಬಹುದು " ಎಂದು ಕೃಷ್ಣನೇ ಮತ್ತೆ ಮಾತಾಡಿದ್ದ.

" ಯಾಕೋ, ನನಗೇ ಬಂತಲ್ಲಪ್ಪಾ " ಎಂದ ಮಾಧವ.

" ಮಾಧವ ಹ್ಯಾಗೆ ಓದುತ್ತಾನೆ ನಿನಗೆ ಗೊತ್ತೇನೋ ನಾಗೇಶ ? " ಎಂದು ಕೃಷ್ಣ ಕೇಳಿದ.

" ನನಗೆ ಹೇಗೆ ಗೊತ್ತಾಗಬೇಕಯ್ಯ. ನೀನೋ ಅವನ ಪ್ರಾಣಸ್ನೇಹಿತ. "

" ಅವನು ಓದುವುದೇ ಒಂದು ರೀತಿ. ಪುಸ್ತಕವೂ ತೆರೆದಿರುತ್ತೆ, ಕಣ್ಣೂ ತೆರೆದಿರುತ್ತೆ. ಆದರೆ ಕಣ್ಣು ಪುಸ್ತಕದ ಮೇಲೆ ಇರುವುದಿಲ್ಲ. ಪಾಪ, ಆ ಪುಸ್ತಕದ ಪಾಡು ನೋಡಿ ಎಷ್ಟೋ ಸಲ ನನಗೆ ಅಳು ಬರುವ ಹಾಗಾಗಿದೆ. ಒಂದು ಸಲ ಬಹುಶಃ ಅತ್ತೂ ಬಿಟ್ಟೆನೆಂದು ಜ್ಞಾಪಕ. "

" ಇದರಿಂದ ನೀನೂ ಬಹಳ ಚೆನ್ನಾಗಿ ಓದುತ್ತೀಯ ಎಂಬುದಂತೂ ಖಚಿತವಾಯಿತು. ನಿನ್ನ ಕಣ್ಣು ನಿನ್ನ ಪುಸ್ತಕದ ಮೇಲಿರಬೇಕೋ ನನ್ನ ಮೇಲೋ ? " ಎಂದು ಮಾಧವ ನಸುನಕ್ಕ.

" ಅಲ್ಲೋ, ನಾನು ಚೆನ್ನಾಗಿ ಓದುತ್ತೇನೆಂದು ಯಾರು ಹೇಳುತ್ತಾರೆ ?

ನೀನೇ ಹೇಳುವುದಿಲ್ಲ. ಆದರೆ ನೀನು ಮಾತ್ರ ಜೀವಬಿಟ್ಟು ಓದುತ್ತೀಯ ಎಂದು ಈ ನಿನ್ನ ಸ್ನೇಹಿತರಿಗೆಲ್ಲ ಗೊತ್ತು '' ಎಂದು ಕೃಷ್ಣ ನಾಗೇಶನ ಕಡೆಗೂ ವಿಷ್ಣು ವಿನ ಕಡೆಗೂ ಕಣ್ಣು ಹೊರಳಿಸಿದ.

" ಮಾಧವನಿಗೇನು ಬಿಡು. ಒಂದು ಸಲ ಓದಿದರೇ ಸಾಕು '' ಎಂದ ವಿಷ್ಣು.

" ಹೌದು ಸಾಕು, ನಪಾಸಾಗುವುದಕ್ಕೆ '' ಎಂದ ಕೃಷ್ಣ.

ಕೃಷ್ಣನ ಮಾತಿನ ಸರಣಿಯನ್ನು ಕೇಳಿ ಮಾಧವನಿಗೆ ತುಂಬ ಸಂತೋಷ ವಾಯಿತು. ಕೃತಜ್ಞತೆಯಿಂದ ಕೃಷ್ಣನ ಕಡೆ ನೋಡಿದ. ಆಗ, ಬೇಕೆಂತಲೋ ಏನೋ ಕೃಷ್ಣ ಬೇರೆ ಕಡೆ ನೋಡುತ್ತಿದ್ದ. ಕೃಷ್ಣನ ಸ್ವಭಾವವೇ ಹಾಗೆ. ತಾನು ಮಾಡುವ ಕೆಲಸ — ಅದು ಏನೇ ಆಗಿರಲಿ, ಬರಿಯ ಮಾತೇ ಆಗಲಿ - ಅದನ್ನು ಸೊಗಸಾಗಿ ಆದರೆ ಅಷ್ಟೇ ಸಹಜವಾಗಿ ಮಾಡಬಲ್ಲ. ಬಂದ ಗೆಳೆಯರು ಹೊರಟು ಹೋದ ವೇಲೆ

" ಏಕೋ ಕೃಷ್ಣ, ಅವರನ್ನು ಹಾಗೆ ಗೋಳಾಡಿಸಿದೆ ? '' ಎಂದು ಮಾಧವ ಕೇಳಿದ.

" ಇನ್ನೇನು ಮಾಡಬೇಕು, ಹೇಳು. ಅವರ ಆ ಸುಳ್ಳು, ವೋಸ, ನಟನೆ ಕಂಡರೆ ನನಗೆ ಮೈ ಉರಿಯುತ್ತೆ. ''

" ಅದೂ ಹೌದೆನ್ನು; ನಾವು ಎಷ್ಟು ಓದಿದರೆ ಅವರಿಗೇನಯ್ಯ. ಅವರು ಓದದಿದ್ದರೆ ನಮಗೇನು ಲಾಭ ? ಓದಿದರೆ ನಷ್ಟವೂ ಇಲ್ಲ. ಇಷ್ಟು ಸಣ್ಣ ವಿಷಯ ದಲ್ಲೂ ಸುಳ್ಳು ಯಾಕೆ ಹೇಳುತ್ತಾರೋ ? ''

" ಯಾಕೆ - ಎಂದರೆ - ಚೆನ್ನಾಗಿ ಓದಿ ಚೆನ್ನಾಗಿ ಪಾಸು ಮಾಡುತ್ತಾರೆ ಅವರು - ಸರಿ; ಆದರೆ ಓದದೆ ಚೆನ್ನಾಗಿ ಪಾಸುಮಾಡಿದ ಅನ್ನಿಸಿಕೊಳ್ಳುವ ಆಶೆ ''

" ಆದರೆ ನಾನು ಚೆನ್ನಾಗಿ ಓದುತ್ತಿಲ್ಲ ಎಂದು ನಿನಗೆ ಹೇಗೆ ತಿಳಿಯಿತು ? "

" ಅದು ತಿಳಿಯುವುದು ಬಹಳ ಕಷ್ಟವೇ ? ನೀನಗೇನೊ ಆಗಿದೆ, ಮಾಧವಾ. "

" ಏನೂ ಇಲ್ಲ, ಕೃಷ್ಣ. ಮನಸ್ಸು ಗೊಂದಲದಲ್ಲಿ ಬಿದ್ದಿದೆ; ಒಂದು ಕಡೆ ನಿಲ್ಲುವುದಿಲ್ಲ. ಕಾಡುಕೋತಿಯಂತೆ ಒಂದು ಯೋಚನೆಯಿಂದ

ಇನ್ನೊಂದಕ್ಕೆ ನೆಗೆಯುತ್ತದೆ "

" ಏನು ಅಂಥ ಯೋಚನೆಯಯ್ಯ ನಿನಗೆ ಈ ವಯಸ್ಸಿನಲ್ಲಿ? "

" ಅದೇ ಕಷ್ಟ. ಅದು ಏನು ಯೋಚನೆ ಅಂತ ಸರಿಯಾಗಿ ನನಗೆ ಗೊತ್ತಾಗುವುದಿಲ್ಲ. ಅದು ಏಕೆ ಹಾಗಾಗುತ್ತದೋ ದೇವರೇ ಬಲ್ಲ. "

" ನೀನು ಬಹಳ ದೊಡ್ಡ ಕವಿಯಾಗುವ ಹಾಗೆ ಕಾಣುತ್ತದೆ. ಮೊನ್ನೆ ಕನ್ನಡ ಪಂಡಿತರು ನೀನು ಬಹು ಸೊಗಸಾಗಿ ಪದ್ಯ ಬರೆಯಬಲ್ಲೆ ಎಂದು ಹೇಳುತ್ತಿದ್ದರು. "

" ನಿಜವಾಗಿಯೂ ಹಾಗೆ ಹೇಳಿದರೆ ಕೃಷ್ಣ? "

' ನಿನ್ನ ಹತ್ತಿರ ನಾನು ಸುಳ್ಳು ಹೇಳಬೇಕೇ, ಮಾಧವ? ಕರ್ನಾಟಕ ಸಂಘದವರು ಏರ್ಪಡಿಸಿರುವ ಆ ಕಾವ್ಯ ಸ್ಪರ್ಧೆಗೆಂತ ಬರೆದೆಯಲ್ಲ ಆ ಪದ್ಯ ಕಳಿಸಿಕೊಟ್ಟೆಯಾ? "

" ಇಲ್ಲ ಮಾರಾಯ, ಇನ್ನೂ ಕಳಿಸಲೇ ಇಲ್ಲ. "

' ಅಲ್ಲಾ ಮಾಧವ, ಏಕೋ ಇಷ್ಟು ಸೋಮಾರಿಯಾಗಿ ಬಿಟ್ಟೆ? ಎಲ್ಲಿ ಆ ಪದ್ಯ ಇಲ್ಲಿ ಕೊಡು ನಾನೇ ಕೊಟ್ಟು ಬಿಡುತ್ತೇನೆ,' ಎಂದು ಕೃಷ್ಣ ಕೈ ಚಾಚಿದ.

ಕೃಷ್ಣ ಪದ್ಯವನ್ನು ಮಾಧವನ ಕೈಯಿಂದ ತಿಗೆದು ಕೊಳ್ಳುತ್ತಿರುವಾಗಲೇ ಕೆಳಗೆ ಬಾಗಿಲ ಮುಂದೆ ಯಾರೋ ಗಟ್ಟಿಯಾಗಿ " ಕೃಷ್ಣಾ, ಮಾಧವಾ " ಎಂದು ಕೂಗುತ್ತಿದ್ದುದು ಕೇಳಿಸಿತು. ಧ್ವನಿಯ ಗುರುತು ತತ್‌ಕ್ಷಣ ಹತ್ತಲಿಲ್ಲ. ಮಾಧವ ಎದ್ದು ನಿಂತು ಮಹಡಿಮೆಟ್ಟಿಲು ಇಳಿಯಬೇಕೆನ್ನುವಷ್ಟರಲ್ಲಿ ಯಾರೋ ಮೆಟ್ಟಿಲುಗಳನ್ನೇರಿ ಬರುತ್ತಿದ್ದರು. ಒಂದು ನಿಮಿಷದಲ್ಲೇ ಕಿವಿಯಿಂದ ಕಿವಿಯವರೆಗೂ ಹಲ್ಲುಸಾಲನ್ನು ಹೊಳೆಸುತ್ತಾ ಅಂಬಾಗಿಲ ಅನಂತಯ್ಯ ಅವರ ಮುಂದೆ ಪ್ರತ್ಯಕ್ಷನಾದ. ಅನಂತಯ್ಯನಿಗೆ ಆಗಲೇ ಹತ್ತೊಂಬತ್ತು ವರ್ಷವಾಗಿತ್ತು. ತಲೆತುಂಬ ಕೂದಲು; ಅದನ್ನು ಹಿಂದೆ ಸೇರಿಸಿ ಗಂಟು ಹಾಕಿಕೊಂಡಿದ್ದ. ಕೂದಲು ಸಿಕ್ಕುಸಿಕ್ಕಾಗಿ ಅದರ ಮೇಲೆ ಒಂದು ಅಂಗುಲ ಕೆಂಪುಧೂಳು ಕೂತಿತ್ತು. ಮುಖದ ಮೇಲೂ ಕೂಡ ಅಷ್ಟೇ ದಪ್ಪಕ್ಕೆ ರಸ್ತೆಯ ಕೆಂಪುಧೂಳು ಮೆತ್ತಿತ್ತು, ಬೆವರಿನಿಂದ ಒದ್ದೆಯಾಗಿ ಅನಂತಯ್ಯನ ಮುಖಕ್ಕೆ ಓಕುಳಿ ಎರಚಿದಂತೆ ಕಾಣುತ್ತಿತ್ತು. ಉಟ್ಟ

ಪಂಚೆಯನ್ನು ಮಡಿಸಿ ಸೊಂಟಕ್ಕೆ ಬಲವಾಗಿ ಕಟ್ಟಿಕೊಂಡಿದ್ದ. ಮೊಣಕಾಲಿನ ವರೆಗೂ ಧೂಳು. ಊರು ಬಿಟ್ಟು ಹತ್ತು ಮೈಲಿಗಿಂತ ಹೆಚ್ಚಿಗೆ ದೂರ ಹೋಗುವಾಗ ಮಾತ್ರ ಅವನು ಉಪಯೋಗಿಸುತ್ತಿದ್ದ ಆ ಕರಿಕೋಟು — ಅವರ ತಂದೆಯ ಕೋಟನ್ನು ಇವನ ಉದ್ದಳತೆಗೆ ಸರಿಯಾಗಿ ಚಿಕ್ಕದು ಮಾಡಿಸಿದ್ದು ಎನ್ನುವುದು ಎಲ್ಲರಿಗೂ ಗೊತ್ತು — ಧೂಳಿನಲ್ಲಿ ನೆನೆದಿತ್ತು. ಆದರೂ ಅನಂತಯ್ಯನ ಮುಖದಲ್ಲಿ ಯಾವಾಗಲೂ ಕಾಣಿಸುತ್ತಿದ್ದ ಆ ಅದಮ್ಯ ಉಲ್ಲಾಸ ಈ ದಿನ ಕಾಣದಿದ್ದು ನೋಡಿ ಗೆಳೆಯರಿಬ್ಬರಿಗೂ ಆಶ್ಚರ್ಯವಾಯಿತು.

"ಬಾರೋ, ಕುಳಿತುಕೋ" ಎಂದು ಮಾಧವ ಚಾಪೆಯನ್ನು ತೋರಿಸಿದ.

ಅನಂತಯ್ಯ ಕುಳಿತು ಕೊಂಡ ಮೇಲೆ ಕೃಷ್ಣ "ಏನು ಮಾಸ್ತರು, ಅಲ್ಲ, ಪೋಸ್ಟ್ ಮಾಸ್ತರು — ಅದೂ ಅಲ್ಲ — ಶ್ಯಾನುಭೋಗರು ಹೀಗೆ ಅಪರೂಪವಾಗಿ ಪ್ರತ್ಯಕ್ಷರಾದಿರಲ್ಲ" ಎಂದ.

"ನಾನು ಈಗ ಎಂಥವೂ ಅಲ್ಲ, ಬರೀ ಅನಂತಯ್ಯ, ಕೃಷ್ಣ. ಬೇಕಾದರೆ ಉಂಡಾಡಿ ಅನಂತಯ್ಯ ಅಂತ ಕರೆ" ಎಂದು ಅನಂತಯ್ಯ ನಕ್ಕ. ಆದರೆ ಆ ನಗೆಯಲ್ಲಿ ಯಾವಾಗಲೂ ಕಾಣುತ್ತಿದ್ದ ದಬದಭೆಯ ರಭಸ ಕಾಣಲಿಲ್ಲ. ಅನಂತಯ್ಯ ಅಷ್ಟು ಗಂಭೀರವಾಗಿರುವುದು ವಿಚಿತ್ರವೇ ಸರಿ. ಏನೋ ವಿಶೇಷ ನಡೆದಿರಬೇಕೆಂದು ಮಾಧವನಿಗೆ ತೋರಿತು.

"ಏನು, ನಡೆದುಕೊಂಡೇ ಬಂದೆಯೇನೋ ಅನಂತ" ಎಂದು ಮಾಧವ ಕೇಳಿದ.

"ಕೇಳುವುದೇನು ? ಅವನ ವೇಷ ನೋಡಿದರೇ ಗೊತ್ತಾಗುವುದಿಲ್ಲವೇ ?" ಎಂದು ಆ ಪ್ರಶ್ನೆಗೆ ಕೃಷ್ಣನೇ ಉತ್ತರ ಹೇಳಿದ.

"ಹೌದು ಕಣೋ; ಬೆವರಿನಿಂದ ಮೈ ಅಂಟಂಟಾಗಿದೆ; ಸ್ವಲ್ಪ ಮೈ ತೊಳೆದುಕೊಳ್ಳದೆ ಸಾಧ್ಯವೇ ಇಲ್ಲ" ಎಂದ ಅನಂತಯ್ಯ.

"ಆದರೆ ಬಿಸಿನೀರು ಇಲ್ಲವಲ್ಲೋ ?" ಎಂದ ಕೃಷ್ಣ.

"ಈ ಶಖೆಯಲ್ಲಿ ಬಿಸಿನೀರೇ ? ಪುಣ್ಯಾತ್ಮ, ಸ್ವಲ್ಪ ಭಾವಿ ತೋರಿಸು, ಉರುಳು ಕೊಡು" ಎಂದು ಅನಂತಯ್ಯ ಮಾಧವನ ಕಡೆಗೆ ನೋಡಿದ.

"ಉರುಳು ಕೇಳುತ್ತೀ. ಬಾವಿ ತೋರಿಸು ಎನ್ನುತ್ತೀ. ಇವತ್ತಿನ ನಿನ್ನ

ಈ ಮುಖ ಎರಡಕ್ಕೂ ಲಾಯಖ್ಖಾಗಿದೆ. ಆದರೆ ಇಷ್ಟು ಸಣ್ಣ ವಯಸ್ಸಿನಲ್ಲೇ ಜೀವನದ ಬಗ್ಗೆ ಅಷ್ಟು ನಿರಾಶೆ ಬರಬಾರದಯ್ಯ '' ಎಂದ ಕೃಷ್ಣ.

'' ಹೌದು ಅನಂತಯ್ಯ; ನಿನಗೇನೋ ಆಗಿದೆ. ಅಥವಾ ಊರಿನಲ್ಲಿ ಏನೋ ವಿಶೇಷ ನಡೆದಿರಬೇಕು. ಇಲ್ಲವಾದರೆ ನಿನ್ನ ಮುಖ ಇಷ್ಟು ಬಾಡಿರುವುದು ನಂಬಲಿಕ್ಕೇ ಆಗದಂಥ ಸಂಗತಿ '' ಎಂದ ಮಾಧವ.

'' ಏನಾದರೂ ಇದ್ದರೆ ಹೇಳಿಬಿಡೋ ಮಾರಾಯ. ಸತಾಯಿಸಬೇಡ. ನನಗೂ ಕುತೂಹಲ ತಡೆಯಲಿಕ್ಕೆ ಆಗುವುದಿಲ್ಲ '' ಎಂದ ಕೃಷ್ಣ.

'' ಸ್ವಲ್ಪ ತಡೀರಿ, ಎಲ್ಲ ಹೇಳುತ್ತೇನೆ. ಸ್ನಾನ ಮಾಡದೆ ನನಗೆ ಕುಳಿತುಕೊಳ್ಳಲೂ ಆಗದು. ಸ್ವಲ್ಪ ತಾಳಿಕೊಳ್ಳಿ '' ಎಂದು ಕೃಷ್ಣನನ್ನು ಕರೆದುಕೊಂಡು ಅನಂತಯ್ಯ ಕೆಳಗಿಳಿದ.

ಅನಂತಯ್ಯ ಅದೇನು ಹೇಳುತ್ತಾನೋ ತಿಳಿದುಕೊಳ್ಳುವ ಆಶೆಯಿಂದ ಮಾಧವ ಕಾತರನಾಗಿ ಕುಳಿತ. ಕೆಳಗೆ ಬಾವಿಕಟ್ಟೆಯಲ್ಲಿ ರಾಟೆ ಕಿರಗುಟ್ಟುವ ಸದ್ದೂ, ನೀರು ಸೇದಿ ತಲೆಯ ಮೇಲೆ ಸುರಿದುಕೊಳ್ಳುವ ಸದ್ದೂ ಕೇಳಿ ಬರುತ್ತಿತ್ತು. ಆಗಲೇ ಹತ್ತುಗಂಟೆ ರಾತ್ರಿಯಾಗಿದ್ದಿರಬೇಕು. ಹೋಟಲಿನ ಸದ್ದು ಅಡಗಿ ಅದೆಷ್ಟೋ ಯುಗಗಳೇ ಸಂದ ಹಾಗೆ ತೋರಿತು. ಅಷ್ಟು ನಿಶ್ಶಬ್ದವಾಗಿತ್ತು. ಕೆಳಗಿನಿಂದ ಹೋಟಲು ಯಜಮಾನ ಗೊರಕೆ ಹೊಡೆಯುವ ಸದ್ದು ಮಾತ್ರ ತಾಳಲಯಬದ್ಧವಾಗಿ ಮೊಳಗುತ್ತಿತ್ತು. '' ಅನಂತಯ್ಯ ಊಟ ಮಾಡಿಲ್ಲ, ಏನಪ್ಪಾ ಮಾಡುವುದು '' ಎಂದು ಮಾಧವ ಯೋಚಿಸತೊಡಗಿದ. ಹೋಟಲಿನಲ್ಲಿ ಎಲ್ಲರ ಊಟವಾದ ಮೇಲೆ ಒಂದು ಅಗುಳು ಅನ್ನ ಕೂಡ ಸಿಕ್ಕದು. ಕೆಲವು ಸಲ ಊಟಕ್ಕೆ ಕೂತವರಿಗೇ ಹೊಟ್ಟೆ ತುಂಬುತ್ತಿರಲಿಲ್ಲ. ಏನಾದರೇನು, ಅಡಿಗೆ ಮಾಡಿದ್ದು ಕೊಂಚ ಕಡಿಮೆಯೇ ಆದರೂ ಪರವಾಯಿಲ್ಲ, ಆದರೆ ಹೆಚ್ಚಾಗಬಾರದು ಎಂಬುದು ಹೋಟಲಿನವನ ನಿಶ್ಚಲ ಧ್ಯೇಯವಾಗಿತ್ತು. ಅಂಗಡಿಗಳೂ ಬಾಗಿಲು ಹಾಕುವ ಸಮಯ. ಒಂದಷ್ಟು ಬಾಳೆ ಹಣ್ಣು, ಮಂಡಕ್ಕಿಯನ್ನಾದರೂ ತರಬಹುದಾಗಿತ್ತು. '' ನೋಡೋಣ ಯಾವುದಕ್ಕೂ ಮಹಾರಾಯ ಸ್ನಾನ ಮುಗಿಸಿ ಬರಲಿ. '' ಎಂದುಕೊಂಡು ಮಾಧವ ಮತ್ತೆ ಊಹಾರಾಜ್ಯಕ್ಕೆ ಕಾಲಿಟ್ಟ. ತಮ್ಮ ಮನೆಯಲ್ಲಿ ಯಾರಿಗಾದರೂ ಕಾಹಿಲೆಯೋ ? ಕೃಷ್ಣನ ಮನೆಯಲ್ಲಿ ಏನಾದರೂ ಆಗಿದೆಯೋ ? ಈ

ಅನಂತಯ್ಯ ಏಕಾಏಕಿ ಹೀಗೇಕೆ ಬಂದ? ಎಷ್ಟು ಊಹಿಸಿದರೂ ಮನಸ್ಸು ತೃಪ್ತವಾಗಲಿಲ್ಲ. ಅಷ್ಟರಲ್ಲಿ ಒದ್ದೆ ಕೂದಲನ್ನು ಝಾಡಿಸಿಕೊಳ್ಳುತ್ತ ಅನಂತಯ್ಯ ಮಹಡಿಯೇರಿ ಬಂದ. ಕೃಷ್ಣನೂ ಅವನ ಹಿಂದೆಯೇ ಬಂದ.

" ಸ್ನಾನ ಏನೋ ಮುಗಿಸಿದೆ, ಮಾರಾಯ. ಇನ್ನು ಊಟಕ್ಕೇನು, ಹೇಳು " ಎಂದ ಮಾಧವ.

" ಈ ಹೋಟಲಲ್ಲಂತೂ ಏನೂ ಸಿಕ್ಕುವ ಹಾಗೇ ಇಲ್ಲ " ಎಂದ ಕೃಷ್ಣ.

" ಕೃಷ್ಣಾ, ಸ್ವಲ್ಪ ಹೊರಗೆ ಹೋಗಿ ಬರೋಣ, ಬಾ. ಎಲ್ಲಾದರೂ ಬಾಳೆ ಹಣ್ಣೋ, ಮಂಡಕ್ಕಿಯೋ, ಅವಲಕ್ಕಿಯೋ ಸಿಗುತ್ತದೋ ನೋಡೋಣ " ಎಂದ ಮಾಧವ.

" ಎಲಾ, ನನಗೂ ಸ್ವಲ್ಪ ಮಾತಾಡಲಿಕ್ಕೆ ಬಿಡಿಯಪ್ಪಾ. ನನ್ನ ಊಟದ ಯೋಚನೆ ನೀವು ಮಾಡಬೇಡಿ. "

" ನೀನಾದರೂ ಆ ಯೋಚನೆ ಮಾಡಬೇಕಲ್ಲ " ಎಂದ ಕೃಷ್ಣ.

" ಅಲ್ಲಿ ನೋಡಿ: ಅದು ಏನು? " ಎಂದು ಅನಂತಯ್ಯ ಪ್ರಶ್ನೆ ಹಾಕಿದ.

ಇಬ್ಬರೂ ಆ ಕಡೆ ನೋಡಿದರು. ಮೂಲೆಯಲ್ಲಿ ಒಂದು ಚೀಲ ಮಂಡಿಸಿತ್ತು. ಕೈಚೀಲ, ಅದರ ತುಂಬಾ ಏನೋ ತುಂಬಿರುವ ಹಾಗೆ ಇತ್ತು.

" ನೋಡಿದಿರಾ? ಅದೇ ಈಗ ನನ್ನ ಅಕ್ಷಯಪಾತ್ರ. ಅಲ್ಲಿ ಬೇಕಾದದ್ದು ಇದೆ. ನಾನು ಕೇಳುವುದೇ ತಡ— ಏನು ಬೇಕಾದರೂ ಸಿಗುತ್ತದೆ ' ಎಂದ ಅನಂತಯ್ಯ.

" ಬಹುಶಃ ಅನ್ನ ಸಾರು ಬಿಟ್ಟು " ಎಂದು ಕೃಷ್ಣ ಹೇಳಿದ.

" ಅದು ನನಗೆ ಬೇಡವೇ ಬೇಡವಲ್ಲ. "

" ಹಾಗಾದರೆ ಅದರಲ್ಲಿ ಏನಿದೆ ನೋಡೋಣ " ಎಂದು ಕೃಷ್ಣ ಆ ಚೀಲವನ್ನು ತಂದು ಪರೀಕ್ಷೆ ಮಾಡಿದ. ಅದರಲ್ಲಿ ಒಂದು ಸೇರಾಗುವಷ್ಟು ಅವಲಕ್ಕಿ ಇತ್ತು. ಜೊತೆಗೆ ಒಂದು ಕೊಬ್ಬರಿ, ಒಂದಷ್ಟು ಬಿಳಿಬೆಲ್ಲ. ಅದೂ ಅಲ್ಲದೆ ಅದರೊಳಗೆ ಪಂಚೆಯಲ್ಲಿ ಕಟ್ಟಿದ್ದ ಒಂದು ಗಂಟೂ ಇತ್ತು.

" ಆಹಾ, ಅದರಲ್ಲಿರಬೇಕು ಸ್ವಾರಸ್ಯ " ಎಂದ ಮಾಧವ.

" ಇದರಲ್ಲಿ ಏನಿದೆ ಹೇಳಿ ನೋಡೋಣ " ಎಂದು ಅನಂತಯ್ಯ ಸವಾಲು ಹಾಕಿದ.

“ ಅದರಲ್ಲಿ ಏನು ಬೇಕಾದರೂ ಇರಬಹುದು : ಇಲಿ, ಹಾವು, ಹೆಗ್ಗಣ, ಜಿರಲೆ ” ಎಂದ ಕೃಷ್ಣ. ಅನಂತಯ್ಯ ನಿಧಾನವಾಗಿ ಗಂಟುಬಿಚ್ಚಿದ. ಅದರೊಳಗೆ ಇನ್ನೆರಡು ಪೊಟ್ಟಣಗಳಿದ್ದುವು : ಒಂದು ಕಾಗದದ್ದು; ಇನ್ನೊಂದು ಬಾಳೆಎಲೆಯದು. ಬಾಳೆಎಲೆಯ ಪೊಟ್ಟಣದಲ್ಲಿ ಹತ್ತೋ ಹನ್ನೆರಡೊ ಅತಿರಸಗಳಿದ್ದವು; ಕಾಗದದ ಪೊಟ್ಟಣದಲ್ಲಿ ಬೂಂದಿಕಾಳು ತುಂಬಿತ್ತು.

“ ಇದೆಲ್ಲಾ ಎಲ್ಲಿಂದ ತಂದೆಯೋ ಅನಂತ ?” ಮಾಧವ ಕೇಳಿದ.

“ ಎಲ್ಲಿಂದ ಏಕೆ ತರಬೇಕಯ್ಯ ? ನಮ್ಮ ಮನೆಯಿಂದಲೇ ತಂದೆ. ”

“ ಅದೇನು ನಿಮ್ಮ ಮನೆಯಲ್ಲಿ ಹೆಚ್ಚುಗಟ್ಟಲೆ ? ”

“ ನಿನಗೆ ಜ್ಞಾಪಕವಿಲ್ಲವೇನೋ, ನನ್ನ ತಮ್ಮನ ಮುಂಜಿ ಆಗಲಿಲ್ಲವೇ-ಇಪ್ಪತ್ತು ದಿನಗಳ ಕೆಳಗೆ. ಅದರ ಶೇಷ ಇದು. ”

“ ನಿನ್ನ ಊಟಕ್ಕೆ ಇಲ್ಲಿರುವುದೆಲ್ಲ ಬೇಕಾಗಲಾರದಷ್ಟೆ ? ” ಎಂದ ಕೃಷ್ಣ

“ ಯಾರಿಗೆ ಗೊತ್ತು ? ಬ್ರಾಹ್ಮಣನ ಹಸಿವು ” ಎಂದು ಅನಂತಯ್ಯ ನಕ್ಕ.

“ ಅಲ್ಲಾ, ಅನಂತ, ಇದೆಲ್ಲ ಏಕೆ ಹೊತ್ತುಕೊಂಡು ಬಂದೆಯೋ ? ” ಮಾಧವ ಕೇಳಿದ.

“ ಏಕೆ ಎಂದರೆ ? ನೀವು ಇಲ್ಲಿ ಹೋಟಲು ಅನ್ನ ತಿಂದು ತಿಂದು ನಿಮಗೆ ಬೇಸರವಾಗಿರುವಾಗ ಹುಡುಗರು ಕೊಂಚ ತಿಂಡಿ ತಿನ್ನಲಿ ಅಂತ ತಂದೆ. ನಿಮಗೆ ಬೇಡವಾದರೆ ಬಿಡಿ. ನಾನೇ ಕೈಲಾದಷ್ಟು ಪ್ರಯತ್ನಪಡುತ್ತೇನೆ. ”

“ ಛೇ, ಛೇ, ಎಲ್ಲಾದರೂ ಉಂಟೆ ? ನೀನು ನಮಗಾಗಿ ಅಷ್ಟು ಕಷ್ಟಪಟ್ಟು ತಂದಿರುವಾಗ ನಾವು ತಿನ್ನದೇ ಹೋದರೆ ನಿನಗೆ ಎಷ್ಟು ನಿರಾಶೆ ! ಕೊಡು ಪರವಾಯಿಲ್ಲ. ಸ್ನೇಹಿತನ ಮನಸ್ಸು ನೋಯಿಸಬಾರದು ”ಎಂದು ನಕ್ಕ ಕೃಷ್ಣ ಎಲ್ಲರೂ ನಕ್ಕರು. ಮೂವರೂ ಸೇರಿ ಆದಷ್ಟು ತಿಂಡಿಯನ್ನು ಮುಗಿಸಿದರು.

ತಿಂಡಿ ಮುಗಿದರೂ ಅನಂತ ತಾನು ಬಂದ ಕಾರಣವನ್ನು ಹೇಳುವಂತೆಯೇ ತೋರಲಿಲ್ಲ. ‘ ಹನ್ನೆರಡು ಮೈಲಿ ನಡೆದು ಬಂದು ಮೈ ಕೈ ಎಲ್ಲ ನೋವು. ಮಲಗಿದರೇ ಸಾಕೆನ್ನಿಸಿ ಬಿಟ್ಟಿದೆ ನೋಡಿ ” ಎಂದು ರಾಗವೆಳೆದ.

“ ಮಲಗುವ ಮೊದಲು ಏನು ವಿಷಯ ಅಂತ ಅಷ್ಟು ಹೇಳಿಬಿಡು ಮಾರಾಯ. ಇಲ್ಲವಾದರೆ ನನಗೆ ನಿದ್ದೆಯೇ ಬಾರದು ಎಂದ ಮಾಧವ.

" ಆಗಲಿ ಹೇಳುತ್ತೇನೆ. ಬಹಳ ಬಾಯಾರಿಕೆ. ಒಂದಷ್ಟು ನೀರು ಕೊಟ್ಟಿದ್ದರೆ ಪುಣ್ಯ ಬರುತ್ತಿತ್ತು " ಎಂದು ಉಸ್ಸೆಂದ ಅನಂತಯ್ಯ.

ಮಾಧವ ಸರಸರನೆ ಕೆಳಗಿಳಿದು ಹೋಗಿ ಒಂದು ಚೆಂಬು ನೀರು, ಲೋಟ ತೆಗೆದುಕೊಂಡು ಬಂದ. ಅನಂತಯ್ಯ ನಿಧಾನವಾಗಿ ನೀರು ಕುಡಿದು ಮುಗಿಸಿ, ಗಂಟಲು ಸರಿಪಡಿಸಿಕೊಂಡ.

" ಯಾವುದಾದರೂ ಕಥೆ ಪುಸ್ತಕ ಉಂಟೇನಯ್ಯ ? ಕೊಡು " ಅಂದ.

" ಸಾಕೋ; ನಿನ್ನ ಕಥೆ ಮೊದಲು ಹೇಳು. ಕಥೆ ಪುಸ್ತಕ ಎಲ್ಲ ನಾಳೆ ಬೆಳಿಗ್ಗೆ ನೋಡೋಣ " ಎಂದ ಮಾಧವ ಕೊಂಚ ಖಾರವಾಗಿ.

" ಸರಿ ಬಿಡು. ಅವನ ಕಥೆ ಏನು ನನಗೆ ಗೊತ್ತಿಲ್ಲವೇ ? ಕುಂದಾಪುರಕ್ಕೆ ಬಂದು ಮರ್ಝಾ ಮಾಡಿಕೊಂಡು ಹೋಗೋಣ ಅಂತ ಬಂದಿದ್ದಾನೆ. ಅವ ನನ್ನೇನು ಕೇಳುತ್ತೀ " ಎಂದ ಕೃಷ್ಣ.

" ಕಂಭದಕೋಣೆಯಲ್ಲಿ ಒಂದು ದೊಡ್ಡ ಮರ್ಝವೇ ಆಯ್ತು " ಎಂದು ನಿಟ್ಟುಸಿರು ಬಿಟ್ಟ ಅನಂತಯ್ಯ.

" ಕಂಭದಕೋಣೆಯಲ್ಲಿ ಎಲ್ಲಿ? ಏನಾಯಿತು ? " ಮಾಧವ ಕೃಷ್ಣ ಇಬ್ಬರೂ ಒಂದೇ ಸಲಕ್ಕೆ ಕೇಳಿದರು. ಅನಂತಯ್ಯನ ಮುಖ ಕೊಂಚ ಪ್ರಸನ್ನ ವಾಯಿತು. ತಾನು ಶೇಷಾಚಲ ಗ್ರಂಥಮಾಲೆಯ ಪತ್ತೇದಾರಿ ಕಥೆಗಳನ್ನೆಲ್ಲ ಓದಿ ಮುಗಿಸಿದ್ದು ಅವನಿಗೆ ಸಾರ್ಥಕವಾಯಿತು ಎನ್ನಿಸಿರಬೇಕು.

" ಇನ್ನೆಲ್ಲಿ ? ಹೆಂಡದಂಗಡಿ ಹತ್ತಿರ, " ಎಂದು ಅನಂತಯ್ಯ ಇಬ್ಬರ ಮುಖವನ್ನೂ ದಿಟ್ಟಿಸಿ ನೋಡಿದ. ಅವರೂ ಅವನ ಮುಖವನ್ನು ಹಾಗೆಯೇ ನೋಡಿದರು.

" ಹೇಳುವುದೇನಿದೆಯೋ ಹೇಳಿಬಿಡು, ಮಹಾರಾಯ. ಸುಮ್ಮನೆ ನಮ್ಮನ್ನು ಗೋಳಾಡಿಸಬೇಡ. ನನ್ನ ಹತ್ತಿರ ' ಹರಿದ ಬಾಯಿ ' ಎಂಬ ಹೊಸ ಪತ್ತೇದಾರಿ ಕಥೆ ಇದೆ. ಅದು ಬೇಕಾಗಿದ್ದರೆ — "

" ಎಲ್ಲಿ ಎಲ್ಲಿ ನೋಡೋಣ " ಎಂದು ಆತುರದಿಂದ ಕೇಳಿದ ಅನಂತಯ್ಯ.

" ನಿನ್ನ ಕಥೆ ನೀನು ಹೇಳು. ಅಲ್ಲಿಯ ತನಕ ಆ ಪುಸ್ತಕ ಖಂಡಿತ ನಿನ್ನ ಕಣ್ಣಿಗೆ ಬೀಳುವುದಿಲ್ಲ. "

ಮಾಧವನ ಈ ಮಾತು ಕೇಳಿ ಅನಂತಯ್ಯ ಕೊಂಚ ನಿರಾಶೆಯಿಂದ ತನ್ನ

ಕಥೆಯನ್ನು ಶುರುಮಾಡಿದ.

" ನಾವೆಲ್ಲ ಆ ದಿನ ಪಿಕೆಟಿಂಗ್ ನಡಸಿ ಬಂದೆವಲ್ಲ, ಅದು ನಿಮಗೆ ಗೊತ್ತೇ ಇದೆ. ಆ ದಿವಸ ಎಲ್ಲ ಸುಗಮವಾಗಿ ನಡೆಯಿತು. ಯಾವ ಗಲಾಟೆಯೂ ಆಗಲಿಲ್ಲ. ಆದರೆ ಮೂರನೆಯ ದಿನ ಮಾತ್ರ ಬಹಳ ವಿಪರೀತವಾಯಿತು. "

" ಮತ್ತೆ ಮರುದಿನವೇ ನೀವು ಪಿಕೆಟಿಂಗಿಗೆ ಹೋದಿರಾ ? " ಮಾಧವ ಕೇಳಿದ.

" ಒಂದು ದಿನ ಮಾಡಿ ಬಿಟ್ಟರೆ ಏನು ಉಪಯೋಗ ಅಂತ ಸೂರಪ್ಪಯ್ಯ ಹೇಳಿದರು. "

" ಅದೂ ನಿಜವೇ. "

" ಹಾಗೇ ನಾನು, ಶೇಷ, ಗಣಪತಿ, ನಿನ್ನ ತಮ್ಮ ಶಿವ, ಕೃಷ್ಣನ ತಮ್ಮ ನಾರಾಯಣ, ಪುಂಡಲೀಕ ಪ್ರಭು, ದೇವಪ್ಪ ಶೆಟ್ಟಿ — ಎಲ್ಲ ಸೇರಿ ಹೆಂಡದಂಗಡಿ ಹತ್ತಿರ ಹೋದೆವು. "

" ಓಹೋ, ಹಾಗಾದರೆ ಎರಡನೇ ದಿನ ದೊಡ್ಡ ಪಟಾಲಮ್ಮೇ ಸೇರಿತ್ತು ಅನ್ನು " ಎಂದ ಕೃಷ್ಣ.

" ಸೂರಪ್ಪಯ್ಯ ಬಂದಿರಲಿಲ್ಲವೇ ? " ಎಂದು ಮಾಧವ ಪ್ರಶ್ನಿಸಿದ.

" ಇಲ್ಲ, ಸೂರಪ್ಪಯ್ಯ ಆ ದಿನ ಬರಲಿಲ್ಲ. "

" ಏತಕ್ಕಂತೆ ? "

" 'ಯಾವಾಗಲೂ ನಿಮ್ಮ ಸಂಗಡ ನನಗೆ ಇರಲು ಸಾಧ್ಯವಾಗುತ್ತದೆಯೇ? ಈ ದಿನ ನೀವೇ ಆ ಕೆಲಸ ಮಾಡಿ; ನೋಡೋಣ' ಎಂದರು ಸೂರಪ್ಪಯ್ಯ. ಆಗಲಿ ಅಂತ ನಾವೂ ನಡೆದೇ ಬಿಟ್ಟೆವು. "

" ಆ ದಿನ ಜನ ಅಸಾಧ್ಯವಾಗಿ ನೆರೆದಿತ್ತು. ರಸ್ತೆಯ ಮೇಲೆ ಕಾಲಿಡುವುದಕ್ಕೆ ಜಾಗವಿರಲಿಲ್ಲ. ಸುತ್ತಮುತ್ತಲ ಹಳ್ಳಿಗಳಿಂದೆಲ್ಲ ಜನರು ಬಂದು ನೆರೆದಿದ್ದರು. ನೋಡಿ ನನಗೆ ಒಂದು ದೊಡ್ಡ ಜಾತ್ರೆಗೆ ಹೋದ ಹಾಗೇ ಆಯಿತು. ಅತಿರಥ ಮಹಾರಥರಂತೆ ನಾವೂ ಹಿಂದಿನ ದಿನದಂತೆಯೇ ಹೆಂಡದಂಗಡಿಯ ಮುಂದೆ ನಿಂತು ' ಮಹಾತ್ಮಾ ಗಾಂಧೀಕೀ ಜೈ ' ಎಂದೆವು. ನಾನು ಮೊದಲು ಕೊಂಚ ಗಾಬರಿಯಾದೆ ಅನ್ನಿ. ಆದರೆ ಶೇಷ ಯಾವಾಗ ' ಗಾಂಧೀಕೀ ಜೈ ' ಎಂದನೋ ಆಗ ನಾನೂ ಕೂಡಾ ' ವಂದೇ ಮಾತರಂ ' ಎಂದು ಗಂಟಲು

ಹರಿಯುವಂತೆ ಕೂಗಿದೆ " ಎಂದು ಅನಂತಯ್ಯ ಕೊಂಚ ಜೋರಾಗಿಯೇ ಕಿರಿಚಿದ. ಆ ದಿನದ ಅನುಭವ ಮತ್ತೆ ಅವನ ಮನಸ್ಸಿನಲ್ಲಿ ಮರುಕೊಳಿಸುತ್ತಿದ್ದಂತೆ ಕಂಡಿತು. ಅವನ ಮುಖಕ್ಕೆ ರಕ್ತ ನುಗ್ಗಿ ಬಂದಿತ್ತು; ಕಣ್ಣು ಹೊಳೆಯಿತು; ಮುಖದ ಮೇಲಿನ ನರಗಳೆಲ್ಲ ಉಬ್ಬಿ ನಿಂತವು. ಅದನ್ನು ಕಂಡ ಕೃಷ್ಣ,

" ಮಹಾರಾಯ ಅಷ್ಟು ಜೋರಾಗಿ ಕಿರುಚಬೇಡ, ಪೋಲೀಸರು ಇಲ್ಲಿಗೇ ನುಗ್ಗಿ ಬಂದಾರು " ಎಂದ. ಅನಂತಯ್ಯ ತನ್ನ ಕಥೆ ಮುಂದುವರಿಸಿದ.

" ಆ ದಿನ ನಮಗೆಲ್ಲ ಶೇಷನೇ ನಾಯಕ. ಸೂರಪ್ಪಯ್ಯ ಬಂದಿದ್ದರೆ ಚೆನ್ನಾಗಿತ್ತು ಅಂತ ನಮಗೆಲ್ಲ ಅನ್ನಿಸುತ್ತಿತ್ತು ಹೋಗುವ ತನಕ. ಅಲ್ಲಿಗೆ ಹೋದ ಮೇಲೆ ಮಾತ್ರ ಏನೋ ಹೊಸ ಆವೇಶ ಬಂದ ಹಾಗೇ ಆಯಿತು, ನೋಡಿ. ನನಗಂತೂ ಈ ಕಡೆಯ ಪ್ರಜ್ಞೆಯೇ ಇರಲಿಲ್ಲ. ಕುಡಿಯಲು ಬಂದವರ ಕಾಲು ಹಿಡಿದು ಬೇಡಿಕೊಂಡೆವು. ಮೃದುವಾದ ಮಾತಿನಲ್ಲಿ ಕುಡಿತದ ಕೆಟ್ಟ ಫಲಗಳನ್ನು ವರ್ಣಿಸಿದೆವು. ಶೇಷ ಅಷ್ಟು ಚೆನ್ನಾಗಿ ಮಾತಾಡಬಲ್ಲ ಅಂತ ನನಗೆ ತಿಳಿದಿರಲಿಲ್ಲ. ಅವನ ಮಾತು ಕೇಳಿದರೆ ಎಂಥ ಕುಡುಕನ ಹೃದಯವಾದರೂ ಕರಗಬೇಕು. ನಾವು ಜಯಕಾರ ಮಾಡುತ್ತ ಹೋದಂತೆಲ್ಲ ನೋಡಲು ಬಂದ ಅನೇಕರೂ ನಮ್ಮ ಜೊತೆಗೆ ದನಿಗೂಡಿಸತೊಡಗಿದರು. ಅದರಿಂದ ನಮ್ಮ ಹುರುಪು ಕ್ಷಣಕ್ಷಣಕ್ಕೂ ಏರುತ್ತಿತ್ತು.

" ಸುಮಾರು ಏಳುಗಂಟೆ ಹೊತ್ತಿಗೆ ಒಬ್ಬ ಪೋಲೀಸ್ ಕಾನ್‌ಸ್ಟೇಬಲ್ ಬಂದು ದೂರದಿಂದ ತಮಾಷೆ ನೋಡುತ್ತ ನಿಂತ. ಇದೆಲ್ಲ ಹೆಂಡದಂಗಡಿ ಮಂಜಾಸನ ಕಾರ್ಯಭಾರವೆಂದು ನಮಗೆ ತೋರಿತು. ಆದರೆ ಪೋಲೀಸನು ಏನೂ ಮಾಡದೆ ನಿಂತಿದ್ದ. ನಾವೂ ಅವನನ್ನು ಲಕ್ಷಕ್ಕೆ ತರದೆ ನಮ್ಮ ಕೆಲಸ ಮುಂದು ವರಿಸಿದೆವು. ಆ ದಿನ ಹೆಂಡದಂಗಡಿ ಮಾಲೀಕ ಅಂಗಡಿಯಿಂದ ಹೊರಕ್ಕೆ ಬರಲೇ ಇಲ್ಲ.

" ಇಷ್ಟು ಹೊತ್ತಿಗೆ ಎಂಟು ಗಂಟೆಯಾಯಿತು. ನಮ್ಮೂರಿನ ದೇವಸ್ಥಾನ ದಲ್ಲಿ ಸತ್ಯನಾರಾಯಣ ಕಥೆ ನಡಸುವುದಿತ್ತು. ನಾನೇ ಪುರೋಹಿತ. ಆದ್ದರಿಂದ ನಾನು ಶೇಷನಿಗೆ ಹೇಳಿ ಅಲ್ಲಿಂದ ಹೊರಟೆ. ನನ್ನ ಸಂಗಡವೇ ಶಿವ ನಾರಾಯಣ ಇಬ್ಬರೂ ಅಲ್ಲಿಂದ ಹೊರಟರು. ನಾವು ಮನೆಗೆ ಬಂದೆವು. "

" ಇಷ್ಟೇನೋ ನಿನ್ನ ಕಥೆ. ಇಷ್ಟಕ್ಕೆ ಅಷ್ಟೆಲ್ಲಾ ಪೀಠಿಕೆ ಹಾಕಿದೆಯಾ ? "

ಎಂದು ಕೃಷ್ಣ ಕೇಳಿದ.

"ಇಲ್ಲವಯ್ಯಾ, ಇನ್ನೂ ಕಥೆ ಮುಗಿದಿಲ್ಲ. ಕೇಳು" ಎಂದು ಅನಂತಯ್ಯ ಕಥೆ ಮುಂದುವರಿಸಿದ.

"ನಾವೇನೋ ನಮ್ಮ ಮನೆಗೆ ಸೇರಿದೆವು ಸರಿ. ಅಲ್ಲಿಗೇ ಕಥೆ ಮುಗಿಯಿತೆ? ಅಲ್ಲಿ ಇನ್ನೂ ಇದ್ದರಲ್ಲ ಶೇಷ, ಗಣಪತಿ ಮುಂತಾದವರು. ಆ ದಿವಸ ಒಂಭತ್ತು ಗಂಟೆಯ ತನಕ ಪಿಕೆಟಿಂಗ್ ನಡಸಬೇಕೆಂದು ತೀರ್ಮಾನವಾಗಿತ್ತು. ನಾನು ಉಪಾಯವಿಲ್ಲದೆ ಮನಸ್ಸಿಲ್ಲದ ಮನಸ್ಸಿನಿಂದ ಮನೆಯ ಕಡೆಗೆ ಹೊರಟೆ. ನಿಮ್ಮ ತಮ್ಮಂದಿರು ನೋಡುವುದಕ್ಕೆ ಬಂದವರಲ್ಲದೆ ಪಿಕೆಟಿಂಗ್ ನಡಸಲು ಬಂದವರಲ್ಲ. ಅವರೂ ನನ್ನ ಜೊತೆಗೇ ಬಂದರು. ನಾನು ಹೆಂಡದಂಗಡಿ ಬಿಟ್ಟು ಎರಡು ಫರ್ಲಾಂಗ್ ದೂರ ಹೋಗಿರಬಹುದು. ಅಷ್ಟರಲ್ಲಿ ನನ್ನ ಮುಂದುಗಡೆ ಯಿಂದ ಒಂದು ಬಸ್ಸು ಜೋರಾಗಿ ಬರುತ್ತಿತ್ತು. ಅದರಲ್ಲಿ ನನ್ನ ಕಣ್ಣಿಗೆ ಕೆಲವು ಕೆಂಪು ಟೋಪಿಗಳು ಕಾಣಿಸಿದುವು. ಇವರು ಕಂಭದಕೋಣೆಗೆ ಹೋಗುವವರೋ ಅಂತ ಒಂದು ಕ್ಷಣ ನನಗೆ ಅನಿಸಿತು. ಇಲ್ಲ, ಬೈಂದೂರಿಂದ ಗಂಗೊಳ್ಳಿ ಕಡೆಗೆ ಹೋಗುವವರಿರಬೇಕು ಎಂದು ಕೊಂಡೆ; ಮನೆಗೆ ಹೋದೆ. ಆ ಮೇಲೆ ಕಂಭದಕೋಣೆಯಲ್ಲಿ ನಡೆದ ಸಂಗತಿ ನನಗೆ ಮಾರನೆಯ ದಿನ ಬೆಳಿಗ್ಗೆ ತಿಳಿದದ್ದು."

"ಏನು ಸಂಗತಿ ಅದು?" ಮಾಧವ ಕುತೂಹಲದಿಂದ ಕೇಳಿದ.

"ಅದನ್ನೇ ಹೇಳುತ್ತೇನೆ, ಕೇಳಿ. ನಾನು ಹೇಳಿದೆನಲ್ಲ ಆ ಬಸ್ಸು ಕಂಭದ ಕೋಣೆಯಲ್ಲಿ ನಿಂತಿತು. ಅದರಿಂದ ಐದು ಜನ ಪೋಲಿಸಿನವರು ಕೆಳಕ್ಕಿಳಿದರು ಬೈಂದೂರಿನಿಂದ ಪೋಲಿಸ್ ಸಬ್‌ಇನ್ಸ್‌ಪೆಕ್ಟರೂ ಬಂದಿದ್ದರಂತೆ. ಬಸ್ಸಿನಿಂದ ಇಳಿದವರೇ ಅವರು ಹೆಂಡದಂಗಡಿಯ ಕಡೆ ಬಂದರು. ಆ ಕೆಂಪು ಟೋಪಿ ಗಳನ್ನು ಕಂಡೇ ಎಷ್ಟೋ ಜನ ಕಾಲಿಗೆ ಬುದ್ಧಿ ಹೇಳಿದರು. ಆದರೆ ಇನ್ನೂ ನೂರಾರು ಜನ ಅಲ್ಲಿಯೇ ನಿಂತಿದ್ದರು. ಎಲ್ಲ ಕಡೆಯೂ ಕತ್ತಲೆ ಹರಡಿತ್ತು. ಬೀದಿಲಾಂದ್ರು ಮುಸುಕು ಮುಸುಕಾಗಿ ಮಂದವಾದ ಬೆಳಕನ್ನು ಚೆಲ್ಲುತ್ತಿತ್ತು. ಆ ಬೆಳಕಿನಲ್ಲಿ ಕೆಂಪುಟೋಪಿ ತೊಟ್ಟು ಕೈಲಿ ಲಾಠಿ ಹಿಡಿದು ಬಗಲಲ್ಲಿ ಬಂದೂಕು ತೂಗು ಹಾಕಿಕೊಂಡು ಹುರಿಮೀಸೆ ತೀಡಿಕೊಳ್ಳುತ್ತ ಕೆಂಗಣ್ಣು ಬಿಡುತ್ತ ಬಂದ ಆ ಪೋಲೀಸರು ಯಮದೂತರಂತೆಯೇ ಕಂಡರೆಂದು ದೇವಪ್ಪಶೆಟ್ಟಿ

ನನಗೆ ಹೇಳಿದ. ಪೋಲೀಸರು ಬಂದವರೇ ಜನರೆಲ್ಲರಿಗೂ ಚೆದರುವಂತೆ ಅಪ್ಪಣೆ ಕೊಟ್ಟರು. ರಸ್ತೆಯ ಮೇಲೆ ನಿಂತವರೆಲ್ಲ ಕೊಂಚ ದೂರ ಸರಿದು ನಿಂತರು. ಆಗ ಪೋಲೀಸ್ ಇನ್ಸ್‌ಪೆಕ್ಟರು ಸ್ವಯಂಸೇವಕರನ್ನು ಕುರಿತು

"ಗಾಂಧಿ ಮೊಮ್ಮಕ್ಕಳೇ, ನಡೀರಿ ಇಲ್ಲಿಂದ" ಎಂದ.

"ನಾವು ಇಲ್ಲಿ ಶಾಂತವಾಗಿ ಪಿಕೆಟಿಂಗ್ ನಡಸುತ್ತಾ ಇದ್ದೇವೆ. ಯಾವ ಗಲಾಟೆಯನ್ನೂ ಮಾಡುತ್ತಿಲ್ಲ. ನಾವು ಏಕೆ ಹೋಗಬೇಕು?" ಎಂದು ಶೇಷ ಕೇಳಿದ.

"ಹೋಗಿ ಅಂದರೆ ಹೊರಟು ಬಿಡಬೇಕು, ಇಲ್ಲವಾದರೆ ತಲೆ ಒಡೆದು ಬಿಡುತ್ತೇವೆ" ಎಂದು ಪೋಲೀಸ್ ಅಧಿಕಾರಿ ಬೆದರಿಕೆ ಹಾಕಿದ.

"ನೀವು ಹೋಗಿ ಅಂದರೆ ನಾವು ಹೋಗುವುದಿಲ್ಲ. ನಿಮ್ಮ ಸರಕಾರದ ಅನ್ಯಾಯದ ಆಜ್ಞೆಗಳನ್ನು ನಾವು ಪಾಲಿಸುವವರಲ್ಲ" ಎಂದು ಖಂಡಿತವಾಗಿ ಪುಂಡಲೀಕ ಹೇಳಿಬಿಟ್ಟ.

"ಹೋಗುವುದಿಲ್ಲವೋ ಸರಿ; ಅನುಭವಿಸಿ" ಎಂದು ಪೋಲೀಸ್ ಇನ್ಸ್‌ಪೆಕ್ಟರ್ ಅಂಗಡಿಯ ಹತ್ತಿರ ಹೋಗಿ ಮಂಜಾಸನ ಸಂಗಡ ಕೊಂಚ ಮಾತಾಡುತ್ತ ನಿಂತ.

"ಹುರುಪಿನಲ್ಲಿ ಮೈಮರೆತಿದ್ದ ನಮ್ಮ ಸ್ವಯಂಸೇವಕರು ತಮ್ಮ ಜಯಕಾರಗಳನ್ನು ಶುರುಮಾಡಿದರು. ಪೋಲೀಸರು ಬಂದ ಬಳಿಕ ಸಂಪೂರ್ಣ ಮೌನ ಕವಿದಿದ್ದ ವಾತಾವರಣದಲ್ಲಿ 'ಗಾಂಧೀಕಿ ಜೈ' 'ಭಾರತ ಮಾತಾಕೀ ಜೈ' 'ವಂದೇ ಮಾತರಂ' ಎಂಬ ಕೂಗುಗಳು ಗುಡುಗಿನಂತೆ ಮೊಳಗಿದುವು. ಹೀಗೆ ಐದು ನಿಮಿಷ ಕಳೆದ ಮೇಲೆ ಪೋಲೀಸರು ಬಂದು ಕೆಟ್ಟಕೆಟ್ಟ ಮಾತು ಆಡುತ್ತಾ "ಹೋಗುತ್ತೀರೋ ಇಲ್ಲವೋ" ಎಂದು ಗರ್ಜಿಸಿದರಂತೆ.

"'ಇಲ್ಲ' ಎಂದು ಸ್ವಯಂಸೇವಕರೆಲ್ಲರೂ ಏಕಕಂಠದಲ್ಲಿ ಕೂಗಿದರು. ಕೂಡಲೇ ಇನ್ಸ್‌ಪೆಕ್ಟರು ಲಾಠಿಚಾರ್ಜಿಗೆ ಅಪ್ಪಣೆ ಕೊಟ್ಟ. ಮೊದಲ ಲಾಠಿಗೆ ಶೇಷ ಆಹುತಿ ಆದ. 'ಗಾಂಧೀ ಮಹಾರಾಜಕೀ ಜೈ' ಎನ್ನುತ್ತ ಅವನು ನೆಲಕ್ಕೆ ಬಿದ್ದನಂತೆ. ಆ ಮೇಲೆ ಒಬ್ಬರಾದ ಮೇಲೆ ಒಬ್ಬರಂತೆ ಎಲ್ಲ ಸ್ವಯಂಸೇವಕರನ್ನೂ ದನ ಬಡಿವಂತೆ ಬಡಿದರು. ಗಣಪತಿಯ ತಲೆ ಒಡೆದು ಮೂರ್ಛೆ ಹೋದ; ಪುಂಡಲೀಕ ಕಾಲು ಮುರಿದು ಬಿದ್ದ. ದೇವಪ್ಪ ಶೆಟ್ಟಿ ಮಾತ್ರ ಒಂದು ಹುಸಿ

ಪೆಟ್ಟಿನಿಂದ ಪಾರಾದ — ಅದು ಹೇಗೆ ಅಂತ ಅವನಿಗೇ ತಿಳಿಯದು. ಅಂತೂ ಒಂದೇ ಏಟಿನಿಂದ ಪಾರಾದವನು ಅವನೊಬ್ಬನೇ. ಪೋಲೀಸರು ನೆಲಕ್ಕೆ ಬಿದ್ದವರನ್ನೂ ಬಿಡದೆ ಬಡಿದರು. ರಕ್ತ ಹೊಳೆಯಾಗಿ ಹರಿಯಿತು.

“ ಈ ಅನ್ಯಾಯವನ್ನು ಕಂಡ ನಮ್ಮ ಜನರೂ ಕೂಡ ಸಿಟ್ಟಿನಿಂದ ಕುದಿದರು. ಈ ಸಣ್ಣ ಹುಡುಗರನ್ನು ಆ ಧಾಂಡಿಗರು ಹೊಡೆಯುತ್ತಿರುವುದನ್ನು ಕಂಡು ಅಲ್ಲಿ ನಿಂತ ಎಷ್ಟೋ ಜನದ ರಕ್ತ ಕುದಿಯಿತು. ‘ ಹೇಳಿ ನಿಮ್ಮಪ್ಪ ಆ ಗಾಂಧಿಗೆ, ನಿಮ್ಮನ್ನು ಬದುಕಿಸಿಕೊಳ್ಳಲಿ ’ ಎನ್ನುತ್ತಾ ಪೋಲೀಸರು ಒಂದೇ ಸಮನೆ ಹೊಡೆಯುತ್ತಿದ್ದರು. ಸ್ವಲ್ಪ ಹೊತ್ತು ಜನ ಸ್ತಬ್ಧವಾಗಿ ನಿಂತಿದ್ದರು. ಆದರೆ ಪೋಲೀಸರ ಅತ್ಯಾಚಾರ ಕಂಡು — ನಿಮಗೆ ಗೊತ್ತಿದೆಯಲ್ಲ ಆ ಕಂಭದ ಕೋಣೆಯ ಈಸರ - ಅವನಿಗೆ ಸಹಿಸಲಿಕ್ಕೆ ಆಗಲಿಲ್ಲ. ‘ ಏನು ನೋಡ್ತೀರಿ ? ಆ ಕಳ್ಳಬೋಳಿಮಕ್ಕಳನ್ನು ಸಿಗೀರಿ ’ ಅನ್ನುತ್ತ ಅವನು ಮುನ್ನುಗ್ಗಿದ. ಅವನ ಹಿಂದೆಯೇ ಸಾಲುಸಾಲಾಗಿ ನೂರು ಜನ ಮುನ್ನುಗ್ಗಿದರು.

“ ಆ ಮೇಲೆ ಏನಾಯಿತು ಎಂದು ಅಲ್ಲಿದ್ದ ಯಾರಿಗೂ ತಿಳಿಯದು. ಮೈಯೆಲ್ಲ ಏಟಾಗಿ ಏಳಲಾರದೆ ಬಿದ್ದಿದ್ದ ಶೇಷ ಮಾತ್ರ ‘ ಬೇಡ, ಬೇಡ, ಹಿಂಸೆ ಮಾಡಬೇಡಿ; ಶಾಂತವಾಗಿರಿ ’ ಎಂದು ಕೂಗುತ್ತಿದ್ದನಂತೆ. ಆದರೆ ಆ ಮಾತನ್ನು ಯಾರೂ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಪೋಲೀಸರ ಟೋಪಿಗಳು ಹಾರಿದುವು. ಕೈಗೆ ಸಿಕ್ಕಿದ ಕೋಲಿನಿಂದ, ದೊಣ್ಣೆಯಿಂದ ರೊಚ್ಚಿಗೆದ್ದ ಜನ ಪೋಲೀಸರನ್ನು ಜಜ್ಜಿದರು. ಇನ್ಸ್‌ಪೆಕ್ಟರನ್ನು ತೆಂಗಿನ ಮರಕ್ಕೆ ಬಿಗಿದು ಹಾಕಿದರು. ಪ್ರತಿಯೊಬ್ಬ ಪೋಲೀಸನ ಬಾಯಿಯಿಂದಲೂ ‘ ದಮ್ಮಯ್ಯ ’ ಅನ್ನಿಸಿದರು; ‘ ತಪ್ಪಾಯಿತು ’ ಅನ್ನಿಸಿದರು. ಜನದ ಕೋಪ ಶಾಂತವಾಗುವಷ್ಟರಲ್ಲಿ ಹೆಂಡದಂಗಡಿ ಭಸ್ಮವಾಗಿತ್ತು; ಪೋಲೀಸರು ನಿರ್ಜೀವವಾಗಿದ್ದರು. ಈ ಗಲಾಟೆಯಲ್ಲಿ ಒಬ್ಬನೇ ಒಬ್ಬ ಪೋಲೀಸ ಹೇಗೋ ತಪ್ಪಿಸಿಕೊಂಡು ಟೋಪಿಯಿಲ್ಲದೆ, ನಂಬರಿಲ್ಲದೆ ಎದ್ದೆನೋ ಬಿದ್ದೆನೋ ಅನ್ನುತ್ತ ಬೈಂದೂರಿಗೆ ಓಡಿಹೋದ.

“ ಈ ಎಲ್ಲ ಕೆಲಸಗಳನ್ನು ಮಾಡಿದ ಮೇಲೆಯೇ ಜನಕ್ಕೆ ಎಚ್ಚರವಾದದ್ದು ತಾವು ಮಾಡಿದ ಕೆಲಸದ ಪರಿಣಾಮವನ್ನು ಯೋಚಿಸಿ ಅವರು ದಿಕ್ಕುಗೆಟ್ಟು ಸದ್ದಿಲ್ಲದೆ ತಮ್ಮ ತಮ್ಮ ಮನೆಗೆ ನಡೆದರು; ಗಾಯಗೊಂಡ ಸ್ವಯಂ ಸೇವಕರನ್ನು ಅವರವರ ಮನೆಗಳಿಗೆ ತಲುಪಿಸಿದರು. ಪೋಲೀಸರ ಗತಿ

ಏನಾಯಿತೆಂದು ಯಾರೂ ನೋಡಲಿಲ್ಲ.

" ಮೂರನೆಯ ದಿನ ಬೆಳಗಾಗುತ್ತಲೇ ಕಂಭದಕೋಣೆಗೆ ರಿಸರ್ವ್ ಪೋಲೀಸ್ ದಳ ಬಂತು. ಶೇಷನನ್ನು ಸೆರೆ ಹಿಡಿದರು. ಕಂಭದಕೋಣೆಯ ಮುಖ್ಯಸ್ಥರಾದ ಏಳೆಂಟು ಜನರನ್ನು ಕೈದು ಮಾಡಿದರು. ಗಾಯಗೊಂಡು ಅರೆ ಜೀವವಾಗಿ ಬಿದ್ದಿದ್ದ ಪೋಲೀಸರನ್ನೆಲ್ಲ ಕರೆದುಕೊಂಡು ಹೋದರು. ಆ ಪೋಲೀಸರಲ್ಲಿ ಒಬ್ಬ ಆಸ್ಪತ್ರೆಯಲ್ಲಿ ಸತ್ತನಂತೆ " ಎಂದು ಅನಂತಯ್ಯ ಕ್ಷಣ ಕಾಲ ಸುಮ್ಮನಾದ.

" ನಮ್ಮ ಸ್ವಯಂಸೇವಕರ ಗತಿ ? " ಎಂದು ಮಾಧವ ಕಾತರನಾಗಿ ಕೇಳಿದ.

" ಎಲ್ಲರೂ ಆಗಲೇ ಹುಶಾರಾಗಿದ್ದಾರೆ. ಆದರೆ ಗಣಪತಿಯ ಸ್ಥಿತಿ ಏನಾಗುತ್ತದೆಯೋ ದೇವರೇ ಬಲ್ಲ. ಈಗ ಅವನು ಬೈಂದೂರು ಆಸ್ಪತ್ರೆ ಯಲ್ಲಿದ್ದಾನೆ. ಪಾಪ, ನನಗೆ ಅವನದೇ ಚಿಂತೆ " ಎಂದ ಅನಂತಯ್ಯ.

" ಅವನೋ ತಂದೆಗೆ ಒಬ್ಬನೇ ಮಗ " ಎಂದ ಕೃಷ್ಣ.

ಆ ಮೇಲೆ ಕೊಂಚ ಹೊತ್ತು ಯಾರೂ ಮಾತಾಡಲಿಲ್ಲ. ಅನಂತಯ್ಯ ಆಗ ತಾನೇ ಹೇಳಿದ್ದ ಆ ಘಟನೆಗಳನ್ನು ಮನಸ್ಸಿನಲ್ಲೇ ಕಾಣುತ್ತಿದ್ದರು ಮಾಧವ ಕೃಷ್ಣರಿಬ್ಬರೂ. ಗಣಪತಿಯ ಪರಿಸ್ಥಿತಿಯನ್ನು ಕೇಳಿ ಇಬ್ಬರೂ ದುಃಖಪಟ್ಟರು. ಗಾಣಿಗರ ಗಣಪತಿಗೆ ಇನ್ನೂ ಹದಿನೇಳು ವರ್ಷ. ಹೆಚ್ಚು ಓದಿದವನೇನೂ ಅಲ್ಲ. ಮಿಡ್ಲ್ ಸ್ಕೂಲಿನಲ್ಲಿ ಅವನು ಓದಿದ್ದು ಎರಡೇ ಎರಡು ವರ್ಷ. ಬಹಳ ಉತ್ಸಾಹಿ ಹುಡುಗ. ಊರಲ್ಲಿ ಯಾವ ಕೆಲಸವಾಗಬೇಕಾದರೂ ಅವನೆ ಮುಂದಾಳು. ಮಾಧವನಲ್ಲಿ ಅವನಿಗೆ ಭಕ್ತಿ ಎನ್ನಬಹುದಾದಷ್ಟು ಪ್ರೀತಿ. ಮಾಧವಯ್ಯ ಹೇಳಿದ ಮಾತು ಅಂದರೆ ಅವನಿಗೆ ವೇದವಾಕ್ಯ. ಅವನ ಆ ಹುರುಪುತುಂಬಿದ, ವಿಶ್ವಾಸ ಉಕ್ಕುವ ಮುಖವನ್ನು ನೆನಸಿಕೊಂಡಾಗ ಮಾಧವ ನಿಗೆ ಅಳು ಬರುವಂತಾಯಿತು.

" ಆದರೆ ಸೂರಪ್ಪಯ್ಯ ? " ಎಂದು ಥಟ್ಟನೆ ಕೃಷ್ಣ ಪ್ರಶ್ನೆ ಹಾಕಿದ.

" ಮೂರನೆಯ ದಿನ ಅವರಿಗಾಗಿ ಪೋಲೀಸರು ಊರೆಲ್ಲ ಹುಡುಕಿದರು. ಅವರು ಎಲ್ಲೂ ಸಿಕ್ಕಲಿಲ್ಲ. "

" ಊರು ಬಿಟ್ಟು ಹೋದರೇ ? "

" ಇಲ್ಲ. ಮಹಾಲಿಂಗ ಭಟ್ಟರ ಮನೆಯ ಅಟ್ಟದಲ್ಲೇ ಇದ್ದರು. ಹೇಗೋ ಪೋಲೀಸರ ಕೈಗೆ ಸಿಕ್ಕಲಿಲ್ಲ. "

" ಪೋಲೀಸರ ಕೈಯಿಂದ ತಪ್ಪಿಸಿಕೊಂಡು ಆ ಮಹಾರಾಯ ಕಡಿಯುವುದೇನಂತೆ? " ಎಂದು ಕೃಷ್ಣ ಕೇಳಿದ. ಅವನ ಮಾತಿನಲ್ಲಿ ಉರಿ ಇತ್ತು.

" ಊರಲ್ಲೆಲ್ಲ ಹಾಗೇ ಹೇಳುತ್ತಾರೆ : ಕಂಡವರ ಮಕ್ಕಳನ್ನು ಬಾವಿಗೆ ತಳ್ಳಿ ಆಳ ನೋಡುವ ಮನುಷ್ಯ - ಅಂತ. "

" ಹಾಗೆ ಹೇಳದೇ ವಿಧಿಯಿಲ್ಲ " ಎಂದ ಮಾಧವ; " ಆ ಮನುಷ್ಯನ ರೀತಿಯೇ ಅರ್ಥವಾಗುವುದಿಲ್ಲ. ಕಳೆದ ವರ್ಷ ಕುಂದಾಪುರದಲ್ಲೂ ಹಾಗೆಯೇ ಆಯಿತು. ಒಂದು ವರ್ಷ ಆತನ ಪತ್ತೆಯಿಲ್ಲ. ಮತ್ತೆ ಈಗ ಪ್ರಕಟವಾದ. ಇನ್ನು ಪುನಃ ಕಾಣಿಸಿಕೊಳ್ಳುವುದು ಯಾವಾಗಲೋ? "

" ಇದೆಂಥ ದೇಶ ಸೇವೆಯೋ ನನಗಂತೂ ಅರ್ಥವಾಗುವುದಿಲ್ಲ. ಗಾಂಧಿ ನೆಹರೂ ಎಲ್ಲರೂ ಆಗಲೇ ಜೈಲಿಗೆ ಹೋಗಿದ್ದಾರೆ. ಇವನೊಬ್ಬ ಹೊರಗೆ ನಿಂತು ಮಾಡುತ್ತಿರುವ ಕೆಲಸವೇನೋ ಯಾರಿಗೂ ತಿಳಿಯದು " ಎಂದ ಕೃಷ್ಣ.

ಮಾಧವನಿಗೆ ಹಠಾತ್ತಾಗಿ ರಾಮಕೃಷ್ಣರಾಯನ ಮಾತು ನೆನಪಿಗೆ ಬಂತು. ಆ ಹುಚ್ಚು ಮನುಷ್ಯನ ಮಾತೇ ನಿಜವಿರಬಹುದೇ ಎನ್ನಿಸಿತು.

" ಅಂತೂ ನೀನು ಒಬ್ಬನಾದರೂ ಆ ದಿವಸ ಬಚಾವಾದೆಯಲ್ಲ! " ಎಂದ ಕೃಷ್ಣ.

" ಇಲ್ಲ ಕಣೋ. ಏಟು ತಪ್ಪಿತು ಅಂತ ನನಗೇನೂ ಸಂತೋಷವಾಗಲಿಲ್ಲ. ದೇಶಕ್ಕಾಗಿ ಏಟು ತಿನ್ನುವ ಒಂದು ಯೋಗ ತಪ್ಪಿಹೋಯಿತಲ್ಲ ಅಂತ ತುಂಬ ನಿರಾಶೆಯಾಯಿತಯ್ಯ. "

" ಸರಿಯಾಗಿ ಹೇಳಿದೆ, ಅನಂತಾ " ಎಂದ ಮಾಧವ.

" ಇನ್ನು ಅಂಥ ಯೋಗ ದೊರೆಯುವುದು ಯಾವಾಗಲೋ! " ಎಂದು ನಿಟ್ಟುಸಿರುಬಿಟ್ಟ ಅನಂತಯ್ಯ.

" ಏಕೆ ಹಾಗಂತೀಯೋ " ಎಂದು ಕೇಳಿದ ಕೃಷ್ಣ.

" ಇನ್ನು ನಮ್ಮ ಕಡೆ ಸತ್ಯಾಗ್ರಹ ಮತ್ತೆ ತಲೆಯೆತ್ತಲಾರದು. ಮೊದಲೇ ಪುಕ್ಕಲು ಜನ. ಆವೇಶದಲ್ಲಿ ಏನೋ ಮಾಡಿಬಿಟ್ಟರು. ಪೋಲೀಸರು ಈಗ ಎಷ್ಟರ ಮಟ್ಟಿಗೆ ಭೀತಿ ಹುಟ್ಟಿಸಿ ಬಿಟ್ಟಿದ್ದಾರೆ ಅಂದರೆ ಗಾಂಧಿ ಅನ್ನುವ ಹೆಸರು

ಅಲ್ಲಿ ಕೇಳಬೇಕಾದರೆ ಇನ್ನು ಎಷ್ಟೋ ವರ್ಷಗಳೇ ಹೋಗಬೇಕೆಂತ ಕಾಣುತ್ತೆ'' ಎಂದ ಅನಂತಯ್ಯ.

'' ಸೂರಪ್ಪಯ್ಯ ಏನು ಹೇಳುತ್ತಾರೆ ? '' ಎಂದ ಮಾಧವ.

'' ಅವರನ್ನು ನಾವು ಯಾರೂ ಆ ಮೇಲೆ ನೋಡಲಿಲ್ಲ. ಒಂದೆರಡು ಸಲ ನಾವು ಹೋದಾಗ ಅವರು ಮನೆಯಲ್ಲಿ ಇಲ್ಲ ಎಂದರು. ನಮಗೂ ಅವರನ್ನು ನೋಡುವ ಆಶೆ ಹೆಚ್ಚು ಉಳಿಯಲಿಲ್ಲ. ಮುಂದೆ ಚಳುವಳಿ ನಡೆಯುವ ಹಾಗೆ ಒಂದು ವ್ಯವಸ್ಥೆ ಮಾಡುವುದಿರಲಿ, ಪೆಟ್ಟು ತಿಂದವರ ಗತಿ ಏನಾಯಿತೆಂದು ವಿಚಾರಿಸಲೂ ಇಲ್ಲ. ಮನುಷ್ಯ ನಾವು ಯೋಚಿಸಿದಷ್ಟು ದೊಡ್ಡವನಲ್ಲ, ಮಾಧವ '' ಎಂದು ಅನಂತಯ್ಯ ತನ್ನ ಮಾತು ಮುಗಿಸಿದ.

ಆಗಲೇ ತಾಲೂಕು ಕಛೇರಿಯ ಗಡಿಯಾರದಲ್ಲಿ ಹನ್ನೆರಡುಗಂಟೆ ಬಾರಿಸಿತು. ಈ ಎಲ್ಲ ಘಟನೆಗಳನ್ನೂ ಕೇಳಿದ ಮೇಲೆ ಮಾಧವನಿಗಾಗಲೀ, ಕೃಷ್ಣನಿಗಾಗಲೀ ಮಾತಾಡುವ ಹುಮ್ಮಸ್ಸು ಉಳಿದಿರಲಿಲ್ಲ. ಅವರ ಮನಸ್ಸಿನಲ್ಲಿ ನಾನಾಯೋಚನೆಗಳು ತಾಂಡವವಾಡತೊಡಗಿದುವು. ಶೇಷ ಗಣಪತಿ ಮುಂತಾದವರು ದೇಶಕ್ಕಾಗಿ ಪಟ್ಟ ಕಷ್ಟ ತನಗೆ ದೊರೆಯಲಿಲ್ಲವಲ್ಲ ಎಂದು ಮಾಧವ ಯೋಚಿಸುತ್ತಿದ್ದ. ಸೂರಪ್ಪಯ್ಯ ಏನು ಆಷಾಢಭೂತಿಯೇ ಎಂದು ಕೃಷ್ಣ ಚಿಂತಿಸುತ್ತಿದ್ದ. ಸದ್ದಿಲ್ಲದೆ ಮೂವರು ಸ್ನೇಹಿತರೂ ಚಾಪೆಯ ಮೇಲೆ ಉರುಳಿದರು. ಅನಂತಯ್ಯನಿಗೆ ಬೇಗ ನಿದ್ದೆ ಹತ್ತಿದ್ದನ್ನು ಅವನ ಗೊರಕೆಯೇ ಅವನ ಗೆಳೆಯರಿಗೆ ಸೂಚಿಸಿತು. ಮಾಧವ ಮತ್ತು ಕೃಷ್ಣರಿಗೆ ಮಾತ್ರ ಆ ರಾತ್ರಿ ಬೇಗ ನಿದ್ದೆ ಹತ್ತಲಿಲ್ಲ. ಮಾಧವ ಗಡಿಯಾರದಲ್ಲಿ ಎರಡು ಗಂಟೆ ಹೊಡೆದದ್ದನ್ನೂ ಕೇಳಿದ್ದ.

೬

ಕೃಷ್ಣನದು ಹೊರಮುಖದ ಜೀವನ. ಯಾರೊಡನೆ ಬೇಕಾದರೂ ಬೆರೆಯಬಲ್ಲ, ನಕ್ಕು ನಲಿದು ವಿನೋದವಾಗಿ ಕಾಲ ಕಳೆಯಬಲ್ಲ. ನಾಲಗೆಯನ್ನು ಹೇಗೆ ಬೇಕೋ ಹಾಗೆ ಉಪಯೋಗಿಸಿ ಎಲ್ಲ ಸಂದರ್ಭಗಳಲ್ಲೂ ತನ್ನ ವಿಜಯಪತಾಕೆಯನ್ನು ಎತ್ತಬಲ್ಲ. ಅವನದು ಸರಳವಾದ ಸಿಕ್ಕುಗಳಿಲ್ಲದ ಮನಸ್ಸು. ಅವನ ಅಂತರಂಗ ಜೀವನ ಒಂದು ರಾಜಮಾರ್ಗ. ಅಲ್ಲಿ ಹಳ್ಳಕೊಳ್ಳಗಳಿಲ್ಲ, ತಿರುವುಮುರುವುಗಳು ಕಡಿಮೆ, ಏರಿಳಿತಗಳು ಎಲ್ಲೋ ಕೆಲವು ಕಡೆ ಮಾತ್ರವೇ. ಆದ ಕಾರಣ ಅವನು ತನ್ನ ಕಾಲವನ್ನು ಹೆಚ್ಚಾಗಿ ಗೆಳೆಯರೊಡನೆ ಆಟದ ಬಯಲಿನಲ್ಲಿ ಕಳೆಯ ತೊಡಗಿದ. ಅವನು ಹೋದಲ್ಲಿ ನಗುವಿನ ಬುಗ್ಗೆ ಚಿಮ್ಮುವುದು. ಅವನ ಜೊತೆಯಲ್ಲಿಯೇ ಸಂತೋಷದ ನದಿಯೊಂದು ಹರಿದು ಹತ್ತಿರ ಬಂದವರೆಲ್ಲರ ಮನಸ್ಸನ್ನು ತಣಿಸುವುದು. ಮಾಧವನಲ್ಲಿ ಅವನಿಗೆ ಅಪಾರವಾದ ಸಹಾನುಭೂತಿ, ಪ್ರೀತಿ. ಕೃಷ್ಣನಿದಿರು ಮಾಧವನ ಬಗ್ಗೆ ಕೆಟ್ಟದ್ದು ಆಡಿ ಬಚಾವಾಗುವುದು ಕಷ್ಟ. ಆದರೆ ಇಬ್ಬರ ದಾರಿಯೂ ಕವಲೊಡೆದು ಅದು ಎಷ್ಟೋ ಕಾಲವಾಗಿತ್ತು. ಅದನ್ನು ಇಬ್ಬರೂ ಬಲ್ಲರು. ಆದರೆ ಅದರಿಂದ ಒಬ್ಬರ ವಿಷಯದಲ್ಲಿ ಇನ್ನೊಬ್ಬರಿಗೆ ಅತೃಪ್ತಿ ಹುಟ್ಟಲಿಲ್ಲ. ಸ್ವಭಾವ ಹೀಗೆ ವಿರುದ್ಧವಾಗಿ ನೆಲೆ ನಿಲ್ಲತೊಡಗಿದ್ದರಿಂದಲೇ ಏನೋ ದಿನ ದಿನಕ್ಕೂ ಒಬ್ಬರಲ್ಲಿ ಇನ್ನೊಬ್ಬರಿಗೆ ಗೌರವ, ಆದರ ವೃದ್ಧಿಯಾಗುತ್ತಿತ್ತು. ಅವರು ಈ ವಿಚಾರವಾಗಿ ಪರಸ್ಪರ ಆತ್ಮನಿವೇದನ ಮಾಡಿಕೊಳ್ಳದೆ ಹೋದರೂ ಇಬ್ಬರಿಗೂ ಈ ವಿಷಯ ತಿಳಿದಿದೆ. " ಮಾಧವಾ, ಆಟಕ್ಕೆ ಬರುತ್ತೀಯೇನೋ ? " ಎಂದು ಕೃಷ್ಣ ಕೇಳಿದರೆ ಮಾಧವ " ಇಲ್ಲಪ್ಪಾ, ಹೊಳೆಯ ದಂಡೆಯಲ್ಲಿ ಹೋಗಿ ಕೂತುಕೊಳ್ಳುತ್ತೇನೆ ಸ್ವಲ್ಪ ಹೊತ್ತು " ಎಂದರೆ ಕೃಷ್ಣ " ಹೊಳೆಯಲ್ಲಿ ಎಷ್ಟು ಅಲೆ ಎದ್ದಿತು ಅಂತ ನೀನು ಬಂದ ಮೇಲೆ ಹೇಳಬೇಕು, ಜೋಕೆ " ಎಂದು ನಗುತ್ತ ಹೊರಟು ಹೋಗುತ್ತಾನೆ. ಬಾ ಎಂದು ಬಲವಂತ ಮಾಡುವುದಿಲ್ಲ. ಹೊಳೆಯ ದಂಡೆಯಮೇಲೆ ಏಕಾಂಗಿಯಾಗಿ ಕುಳಿತರೇ ಮಾಧವನಿಗೆ ಹೆಚ್ಚು ಸುಖ ಎಂದು ಅವನು ಬಲ್ಲ.

ಅವರಿಬ್ಬರೂ ಚಿಕ್ಕವರಾಗಿದ್ದಾಗ ಹೀಗೆ ಇರಲಿಲ್ಲ. ಇಬ್ಬರ ಇಷ್ಟಗಳೂ ಹೆಚ್ಚು ಕಡಿಮೆ ಒಂದೇ ಆಗಿದ್ದವು. ಆ ಕಾಲದಲ್ಲಿ ಇವರಿಬ್ಬರೂ ಒಟ್ಟಿಗೆ ಸುತ್ತದೆ ಇದ್ದ ಹಾಡಿ ಹಕ್ಕಲುಗಳಿರಲಿಲ್ಲ; ಹೊಲಗದ್ದೆಗಳಿರಲಿಲ್ಲ; ಏರಿ ಇಳಿಯದ ಮಾವಿನಮರ, ಗೋವೆಮರ, ನೇರಳೆಮರ ಇರಲಿಲ್ಲ. ಆಗ ಇಬ್ಬರ ಮನಸ್ಸು ಕೂಡಾ ಹಗಲುಗನಸಿನ ಲೋಕದಲ್ಲಿ ಕಲ್ಪನೆಯ ಬೆನ್ನುಹತ್ತಿ ಹೊರಟಿದ್ದವು. ಆ ಲೋಕದಲ್ಲಿ ಇಬ್ಬರೂ ಸಹಸಂಚಾರಿಗಳಾಗಿದ್ದರು. ಇಬ್ಬರಿಗೂ ಒಂದೇ ಬಗೆಯ ಅನುಭವ. ಆದರೆ ಕೃಷ್ಣ ಬಹುಬೇಗ ಆ ಲೋಕದಿಂದ ಹೊರಬಿದ್ದು ನಿಜಲೋಕದ ಬೆಳ್ಳಂಬೆಳಕುದಾರಿಯನ್ನು ಹಿಡಿದ. ಮಾಧವ ಮಾತ್ರ ಆ ಲೋಕದಿಂದ ಈಚೆಗೆ ಬರಲೇ ಇಲ್ಲ. ಆ ಕನಸುನಾಡಿನ ಮಬ್ಬು ಬೆಳಕಿನಲ್ಲಿ ತಡವರಿಸುತ್ತಾ ಎಡವುತ್ತ ನಡೆಯುವುದೇ ಅವನಿಗೆ ಹೆಚ್ಚು ಸುಖ.

ಪ್ರತಿ ಸಂಜೆಯೂ ಮಾಧವ ಹಾಗೆ ಏಕಾಂಗಿಯಾಗಿ ಹೊರಡುತ್ತಾನೆ. ಕುಂದಾಪುರದ ಸುತ್ತಲ ಪ್ರಕೃತಿ ವೈಭವದಲ್ಲಿ ನಿಶ್ಚಿಂತನಾಗಿ ಸುತ್ತುತ್ತಾನೆ. ಅವನ ಮನಸ್ಸು ಆಗ ಸ್ವತಂತ್ರವಾಗಿ ನೀರಿನಲ್ಲಿನ ಮೀನಿನಂತೆ ಆಡುತ್ತದೆ. ಅಲ್ಲಿ ನೂರಾರು ಭಾವಗಳು ಬಂದು ಕಣ್ಣಮುಚ್ಚಾಲೆಯಾಡುತ್ತವೆ. ಹತ್ತು ಯೋಚನೆಗಳು ಬಂದು ಒಂದು ಕ್ಷಣ ಮಿಂಚಿ ಮರೆಯಾಗುತ್ತವೆ. ಆಗ ಅವನು ತನಗೆ ತಿಳಿಯದಂತೆಯೇ ಸುತ್ತಮುತ್ತಣ ವಿದ್ಯಮಾನಗಳಲ್ಲಿ ಕರಗಿ ತನ್ನತನವನ್ನು ಮರೆಯುತ್ತಾನೆ. ಸತ್ತ ಎಮ್ಮೆಯ ಹೆಣವನ್ನು ಕುಕ್ಕುವ ಹದ್ದು, ಮಾವಿನ ಹಣ್ಣನ್ನು ಕುಟುಕುತ್ತಿರುವ ಗಿಳಿ, ಬಲೆಗೆ ಸಿಕ್ಕಿ ದಡದ ಮೇಲೆ ಬಂದು ಬಿದ್ದು ಮಿಡುಕುವ, ಚಡಪಡಿಸುವ, ತಳಮಳಿಸುವ ಬಾಳೆಮೀನು, ಹಸುವನ್ನು ಹಿಂಬಾಲಿಸಿ ಅಂಬಾ ಎಂದು ಓಡುವ ಕರು, ಪಶ್ಚಿಮ ದಿಗಂತದ ರಕ್ತದೋಕುಳಿಯಲ್ಲಿ ಮುಳುಗಿಹೋಗುತ್ತ ಕೆಂಪು ಚೆಂಡಿನಂತೆ ಮಿರುಗುತ್ತಿರುವ ಸೂರ್ಯ-- ಈ ಎಲ್ಲ ದೃಶ್ಯಗಳಲ್ಲೂ ಅವನ ಮನಸ್ಸು ನೆಟ್ಟು ಮೂಕವಾಗುತ್ತದೆ.

ಕುಂದಾಪುರ ಪಟ್ಟಣದ ಉತ್ತರದ ಮೇರೆಯಾಗಿ ಗಂಗೊಳ್ಳಿ ಹೊಳೆ ಇದೆ. ಹೊಳೆ ಸುಮಾರು ಒಂದು ಮೈಲಿಯಷ್ಟು ಅಗಲ. ಅಲ್ಲಿ ಐದು ಹೊಳೆಗಳು ಬಂದು ಸಮುದ್ರವನ್ನು ಸೇರುತ್ತವೆ. ಹೊಳೆಯ ದಡದ ಮೇಲೆ ನಿಂತು ನೋಡಿದರೆ ಅಗೋ ಅಲ್ಲೇ ಅಳಿವೆ ಕಾಣಿಸುತ್ತದೆ. ಸಮುದ್ರದ ನೀಳ್ದೆರೆಗಳು ಬಂದು ಮರಳಮೇಲೆ ಹೊಯ್ಯುವ ಶಬ್ದ ಕಿವಿ ಗಡಚಿಕ್ಕುವಂತೆ ಕೇಳಿಸುತ್ತದೆ

ಸಮುದ್ರದ ತೆರೆಗಳು ನದಿಯೊಳಕ್ಕೆ ನುಗ್ಗಿಬಂದು ಆಳುದ್ದ ಅಲೆಗಳನ್ನು ಎಬ್ಬಿಸುತ್ತವೆ. ಸಮುದ್ರದ ಸಾಮೀಪ್ಯದಿಂದ ಈ ಹೊಳೆ, ಸಮುದ್ರದ ಕೆಲವು ಚಾಳಿಗಳನ್ನು ಕಲಿತಿದೆ. ಗಾಳಿ ಸುಯ್ಯೆಂದು ಬೀಸಿದಾಗ ಆಳುದ್ದ ತೆರೆಗಳು ಇಲ್ಲೂ ಎದ್ದು ಹೂಂಕರಿಸುತ್ತವೆ. ದೋಣಿಯಲ್ಲಿ ಕೂತು ಹೋಗುತ್ತಿದ್ದರೆ ಎಷ್ಟೋ ಸಲ ದೋಣಿ ತೊಟ್ಟಿಲಂತೆ ತೂಗುತ್ತದೆ. ಇದೇನು ದೋಣಿ ತಲೆಕೆಳಗಾಯಿತು ಎನ್ನಬೇಕು—ಹಾಗೆ ತೆರೆಗಳು ಬಂದು ಬಾರಿಸುತ್ತವೆ. ಹೊಳೆಯ ಉಪ್ಪು ನೀರು ದೋಣಿಯೊಳಕ್ಕೆ ನುಗ್ಗಿ ಕುಳಿತವರ ಪ್ರಾಣ ಬಾಯಿಗೆ ಬರುತ್ತದೆ. ಆದರೆ ದೋಣಿ ಮಗುಚುವುದು ಬಹಳ ಅಪರೂಪ. ಮಳೆಗಾಲದಲ್ಲಿ ಬಿರುಗಾಳಿ ಬೀಸುವಾಗಲಂತೂ ಈ ಹೊಳೆ ಕಡಲಿನಂತೆಯೇ ಕೈ ಕಾಲುಗಳನ್ನು ಒದೆಯುತ್ತ ಹುಬ್ಬುಗಂಟಿಕ್ಕಿ ನಿಲ್ಲುತ್ತದೆ. ಆದರೆ ಆಗಲೂ ದೋಣಿಯಲ್ಲಿ ಕುಳಿತು ಹೊಳೆ ದಾಟದೆ ವಿಧಿಯಿಲ್ಲ. ಆಗ ಪ್ರತಿಯೊಂದು ಸಲ ಆಚೆ ದಡದಿಂದ ಈಚೆಗೆ, ಈಚೆ ದಡದಿಂದ ಆಚೆಗೆ ಹೋಗುವುದೂ ಒಂದೊಂದು ಹೊಸ ಹುಟ್ಟು.

ನದಿಯ ಎರಡೂ ದಡದ ಮೇಲೂ, ಹತ್ತಿರದಲ್ಲೇ ಕಾಣುವ ಸಮುದ್ರ ತೀರದಲ್ಲೂ ತೆಂಗಿನ ತೋಪುಗಳು ಹಸುರು ಪತಾಕೆಯನ್ನೆತ್ತಿ ಆಡಿಸುತ್ತಾ ನಿಲ್ಲುತ್ತವೆ. ಹೊಳೆಯ ದಡದಲ್ಲಿ ಸಂಜೆ ಹೊತ್ತು ಬಲು ತಂಪಾಗಿ ಗಾಳಿ ಬೀಸುತ್ತದೆ. ಸಮುದ್ರದ ಮೇಲಿಂದ ತಂಪುಗಾಳಿ ಅಲೆಅಲೆಯಾಗಿ ಬಂದು ಮೈದಡಹುತ್ತದೆ. ಬೇಸಗೆಯ ಬೆವರಿಳಿಸುವ ಶಖೆಗೆ ಅದಕ್ಕಿಂತ ಮೇಲಾದ ಮದ್ದು ಯಾವುದೂ ಇಲ್ಲ. ಶಿವರಾತ್ರಿ ಕಳೆದರೇ ಸಾಕು, ಶಖೆ ಇದ್ದಕ್ಕಿದ್ದಂತೆ ಅಸಹನೀಯವಾಗಿ ಬಿಡುತ್ತದೆ. ಆಕಾಶದಲ್ಲಿ ಸೂರ್ಯ ಬೆಂಕಿಯ ಮಳೆಯನ್ನೇ ಕರೆಯುತ್ತಾನೆ. ನೆಲವೆಲ್ಲ ಕಾದು ಹಂಚಾಗುತ್ತದೆ. ಇಳಿವ ಬೆವರಿಗೆ ತೊಟ್ಟ ಪಂಚೆ ಒದ್ದೆಯಾಗಿ ಮೈಗೆ ಅಂಟಿಕೊಳ್ಳುತ್ತದೆ. ಇಂಥ ಕಾಲದಲ್ಲಿ ಸಂಜೆಯ ಹೊತ್ತಿನಲ್ಲಿ ಹೊಳೆಯ ದಡ ಸ್ವರ್ಗವಾಗುತ್ತದೆ. ಆ ಸ್ವರ್ಗಕ್ಕೆ ಈಗ ಪ್ರತಿದಿನವೂ ಮಾಧವ ಹೋಗಿ ಒಂದೆರಡು ಗಳಿಗೆ ಕಳೆದು ಬರುತ್ತಾನೆ. ಹೊಳೆಯ ಕಡುವಿನಿಂದ ದಂಡೆಯನ್ನೇ ಅನುಸರಿಸಿ ಪಶ್ಚಿಮಕ್ಕೆ ನಡೆದರೆ ಮರಳ ರಾಶಿಯ ಮೇಲೆ ಕಾಲು ಧಾರಿ ಹೋಗುತ್ತದೆ. ಪಕ್ಕದಲ್ಲೇ ಹೆಂಚಿನ ಕಾರ್ಖಾನೆಯೊಂದು ಆಕಾಶಕ್ಕೆ ಹೊಗೆಯನ್ನುಗುಳುತ್ತಾ ನಿಂತಿದೆ. ಅದನ್ನೂ ದಾಟ ಮುಂದೆ ಹೋದರೆ ಮರಳ

ದಿಬ್ಬದ ಮೇಲೆ ಹಾಯಾಗಿ ಕುಳಿತುಕೊಳ್ಳಬಹುದು. ಬೇಕಾದರೆ ಮಲಗಲೂ ಬಹುದು. ಕುಳಿತು ಹೊಳೆಯ ನೂರು ಆಟಗಳನ್ನು ನೋಡುತ್ತ ಮೈ ಮರೆಯ ಬಹುದು. ಮೇಲೆ ತಲೆಯೆತ್ತಿದರೆ ಇನ್ನೊಂದು ಲೋಕ, ಇನ್ನೊಂದು ಹಬ್ಬ. ಬೆಳ್ಳಿ ಮುಗಿಲು ತೂಗಿ ಸಾಗುತ್ತಿರುವ ನೀಲ ಆಕಾಶದ ದ್ವಾರ ತೆರೆಯುತ್ತದೆ. ಅಲ್ಲಿ ಹೊಕ್ಕರೆ ಹೊರಡುವ ಮನಸ್ಸೇ ಬರುವುದಿಲ್ಲ. ಆ ಆಕಾಶ, ಈ ನದಿ ಎರಡರ ತೋಳತೆಕ್ಕೆಯಲ್ಲಿ ಸಿಕ್ಕಿ ಮಾಧವ ನಿಶ್ಚಿಂತನಾಗಿ ಕುಳಿತು ಕೊಳ್ಳುತ್ತಾನೆ.

ಅದೋ ಹೊಳೆ. ಕೈಯ ಗಳುವಿನಿಂದ ನೀರನ್ನು ಚಿಮ್ಮುತ್ತ ಲಂಗೋಟಿ ತೊಟ್ಟ ಬೆಸ್ತರು ಕುಳಿತ ಸಣ್ಣ ಸಣ್ಣ ಪಾತಿಗಳು ನೀರಿನ ಮೇಲೆ ಬಾಣದಂತೆ ಚಿಮ್ಮಿ ಹೋಗುತ್ತವೆ. ಅವು ನೀರನ್ನು ಬಗೆದು ನೊರೆಯೆಬ್ಬಿಸಿ ಹೊಳೆಯುದ್ದಕ್ಕೂ ನೀರಿನಲ್ಲಿ ಬೆಳ್ಳಿಗೆರೆ ಕೊರೆಯುತ್ತ ಮುಂದಮುಂದಕ್ಕೆ ನೆಗೆದು ದೂರದಲ್ಲಿ ಅದೃಶ್ಯವಾಗಿ ಬಿಡುತ್ತವೆ. ಅದೋ ಅಲ್ಲಿ ಪೂರ್ವದಿಕ್ಕಿನಲ್ಲಿ ಹೊಳೆಯ ಮಧ್ಯ ದಲ್ಲೇ ಎದ್ದು ಬಂದ ಆ ಸಣ್ಣ ಸಣ್ಣ ದ್ವೀಪಗಳು, ಕುದುರುಗಳು ತೆಂಗಿನಮರಗಳ ತೋಪಿನಂತೆ ಕಾಣಿಸುತ್ತವೆ. ಅದೊ ಅದೇ ಉಪ್ಪಿನ ಕುದುರು, ಆಚೆ ಹಟ್ಟಿ ಕುದುರು. ಇಲ್ಲೇ ಹತ್ತಿರದಲ್ಲಿ ಕಾಣಿಸುತ್ತದಲ್ಲ ಅದು ನಿರ್ಜನವಾದ, ಕೇವಲ ಮರಳು ತುಂಬಿದ ಬಬ್ಬೂ ಕುದುರು. ಸಂಜೆಯ ಮಬ್ಬು ಬೆಳಕಿನಲ್ಲಿ ಅವು ಹಸುರಿನ ಒಂದು ಮುದ್ದೆಯಂತೆ ಕಾಣಿಸುತ್ತವೆ. ಅದೋ ಆಚೆ ದಡದಲ್ಲಿ ಸಾಲು ಸಾಲು ಮನೆಗಳು ಒತ್ತೊತ್ತಾಗಿ ಕಾಣುತ್ತವಲ್ಲ, ಅದೇ ಗಂಗೊಳ್ಳಿ. ಗಂಗೊಳ್ಳಿಗೆ ಹತ್ತಿರದಲ್ಲೇ ಸ್ವಲ್ಪ ದೂರದಲ್ಲಿ ಸಮುದ್ರದಲ್ಲಿ ಬೊಂಬಾಯಿಯಿಂದ ಮಂಗಳೂರ ಕಡೆಗೆ ಹೋಗುವ ಹಡಗು ನಿಲ್ಲುತ್ತದೆ. ಆದಕಾರಣವೇ ಗಂಗೊಳ್ಳಿ ವ್ಯಾಪಾರದ ಸ್ಥಳ. ಅನೇಕ ಸಾಹುಕಾರರ ಮಳಿಗೆಗಳು ಎತ್ತರವಾಗಿ ತಲೆಯೆತ್ತಿ ನಿಂತಿವೆ. ಆಚೆ ದಡದ ಹತ್ತಿರ ಸಾಲು ಸಾಲು ದೋಣಿಗಳು ಅತ್ತಿಂದಿತ್ತ ಓಡಾಡುತ್ತವೆ. ಅಲ್ಲೇ ಅನೇಕ ಹಾಯಿದೋಣಿಗಳೂ, ಬೊಂಬಾಯಿಯ ತನಕ ಪ್ರಯಾಣಮಾಡಬಲ್ಲ ಮಚ್ಚೆಗಳೂ, ಲಗಗಳೂ ನದಿಯ ಭರತವನ್ನು ಕಾಯು ತ್ತಲೋ, ದುರಸ್ತಿಗಾಗಿಯೋ, ಸಾಮಾನು ತುಂಬಿಕೊಳ್ಳುವುದಕ್ಕಾಗಿಯೋ ನಿಂತಿವೆ. ಡಾಮರು ಹಚ್ಚಿದ ಅವುಗಳ ಬದಿಗಳು ನೀರಿನಿಂದ ಆಳುದ್ದ ಎರಡಾಳುದ್ದ ಎತ್ತರಾಗಿ ನಿಂತಿವೆ. ಕೂವೆಮರಕ್ಕೆ ಮಡಿಚಿದ ಹಾಯಿ ಜೋತು ಬಿದ್ದಿದೆ.

ಈಗ ಕೊರೆ ಇಳಿತ. ನದಿಯ ಮಧ್ಯದವರೆಗೂ ಈಗ ನಡೆದುಕೊಂಡೇ ಹೋಗಬಹುದು. ಕುಂದಾಪುರದ ದಡದಿಂದ ಒಂದು ಫರ್ಲಾಂಗು ದೂರದ ತನಕ ಬರಿ ಮರಳೇ. ದೋಣಿ ಹತ್ತಬೇಕಾದರೆ ಅಷ್ಟು ದೂರ ನಡೆದೇ ಹೋಗ ಬೇಕು. ದಡದಿಂದ ಒಂದು ಫರ್ಲಾಂಗ್ ದೂರದಲ್ಲೇ ತಮ್ಮ ದೋಣಿಗಳನ್ನು ನಿಲ್ಲಿಸಿಕೊಂಡು ಅಂಬಿಗರು ಪ್ರಯಾಣಿಕರಿಗಾಗಿ ಕಾಯುತ್ತಿದ್ದಾರೆ. ಏಳೆಂಟು ಜನ ಕೂರದೆ ಅಂಬಿಗ ದೋಣಿ ಬಿಡುವುದಿಲ್ಲ. ತಲಾ ಒಂದು ಪಾವಾಣೆ ಮಾತ್ರ ಅವನಿಗೆ. ಕಡುವಿನ ಕಂಟ್ರಾಕ್ಟುದಾರ ಸಾಬಿಗೆ ಅರ್ಧಾಣೆ ಮೊದಲೇ ಸಲ್ಲಿಸಬೇಕು. ದೋಣಿ ತುಂಬಿದ ಮೇಲೆ ಅವನು ಗಳವನ್ನೆತ್ತಿ ಹೊಳೆಯ ತಳಕ್ಕೆ ಹಾಕಿ ಅದುಮುತ್ತಾನೆ; ದೋಣಿ ಸುಯ್ಯೆಂದು ಮುಂದೆ ಸಾಗುತ್ತದೆ. ಆದರೆ ಅಲ್ಲಿಯ ತನಕ ಅವನು ಒಬ್ಬೊಬ್ಬರು ಪ್ರಯಾಣಿಕರು ಬಂದು ಕೂತಾ ಗಲೂ ಜಲ್ಲು ಹಿಡಿದು, ಹೊರಟೇ ಬಿಡುತ್ತಾನೋ ಎಂಬ ಹಾಗೆ ನಟಿಸುತ್ತಾನೆ. ಹೊರಟ ಮೇಲೂ ಕೂಡಾ ನೇರವಾಗಿ ಆಚೆ ದಡಕ್ಕೆ ಮುಟ್ಟುವ ಹಾಗಿಲ್ಲ. ಮಧ್ಯೆ ತೀರ ಆಳ ಕಮ್ಮಿಯಾದ ಸ್ಥಳ ಸಿಕ್ಕುತ್ತದೆ, ಅಲ್ಲಿ ದೋಣಿ ಹೋಗ ಲಾರದು. ಆದ ಕಾರಣ ಬಳಸಿಕೊಂಡು, ಸುತ್ತಿಕೊಂಡು ಆಳವಾದ ಸ್ಥಳವನ್ನೇ ಹುಡುಕಿಕೊಂಡು ದೋಣಿ ಸಾಗುತ್ತದೆ. ಆದರೆ ಹೊಳೆಯ ಆಚೆ ದಡದ ಸಮೀಪ ಮಾತ್ರ ಯಾವಾಗಲೂ ಬಹಳ ಆಳ — ಭರತವಿರಲಿ, ಇಳಿತವಿರಲಿ, ಮಳೆಗಾಲವಿರಲಿ, ಕಡುಬೇಸಗೆಯಿರಲಿ — ಅಲ್ಲಿ ಬೆಸ್ತ ಗಳುವನ್ನು ತೆಗೆದಿಟ್ಟು ಹುಟ್ಟನ್ನು ಕೈಗೆ ತೆಗೆದುಕೊಳ್ಳುತ್ತಾನೆ. ದೋಣಿಯ ಬದಿಗೆ ಕಟ್ಟಿದ ಹಗ್ಗಕ್ಕೆ ಅದನ್ನು ಸಿಕ್ಕಿಸಿಕೊಂಡು ಅವನು ಹಿಂದಕ್ಕೂ ಮುಂದಕ್ಕೂ ಜೋಲುತ್ತಾ ಮೀಟುತ್ತಿರುವುದು ಈಚೆಗೂ ಕಾಣಿಸುತ್ತದೆ. ಬಿಸಿಲು ಮಳೆಯೆನ್ನದೆ, ಬೆಳಗು ರಾತ್ರಿಯೆನ್ನದೆ ಅವನ ಕೆಲಸ ಹಾಗೆ ನಡೆಯುತ್ತದೆ. ಹೊಳೆಯ ಮೇಲೇ ಬೆವರಿಳಿಸುವ ಆ ಜೀವಿ ಈ ಹೊಳೆಯ ಸೊಬಗನ್ನಾಗಲೀ, ಅದರ ತರಂಗ ಮಾಲೆಯ ನರ್ತನವನ್ನಾಗಲೀ, ಅಲ್ಲಿ ಬೀಸುವ ಗಾಳಿಯ ಮಂದ್ರಮಧ್ಯಮತಾರ ಸ್ವರಗಳನ್ನಾಗಲೀ ಅನುಭವಿಸಲಾರ. ಅವನು ಅನುಭವಿಸುವುದು, ಆಯಾಸ ವೊಂದನ್ನು ಮಾತ್ರ; ಆ ಆಯಾಸದ ಫಲವಾಗಿ ದೊರೆಯುವ ಅರೆ ಹೊಟ್ಟೆಯ ಸುಖವನ್ನು ಮಾತ್ರ.

ಮೊಳಕಾಲುದ್ದ ನೀರಿನಲ್ಲಿ ನಿಂತು ಅಷ್ಟು ಹೊತ್ತಿನಿಂದ ಹೊಳೆಯ ತಳ

ವನ್ನು ಸೋಸುತ್ತಿರುವ ಆ ಬಡ ಹೆಂಗಸರನ್ನು ನೋಡು: ಒಂದು ಚಿಪ್ಪಿನ ಹುಳುವೋ, ಏಡಿಯೋ, ಚಟ್ಲಿಯೋ, ಮಳಿಯೋ ಸಿಕ್ಕಬಹುದೆಂದು ಬಿಸಿಲಲ್ಲಿ ಬೇಯುತ್ತಾ ದುಡಿಯುತ್ತಿದ್ದಾರೆ. ಆ ಚಿಕ್ಕಮಕ್ಕಳು! ಅವೂ ಕೂಡಾ ನದಿಯ ಹೊಟ್ಟೆಯನ್ನು ಬಗೆದು ಏನಾದರೂ ಸಿಕ್ಕೀತೋ ಎಂದು ಹುಡುಕುತ್ತಿವೆ. ಶಾಲೆ, ಕಾಲೇಜು, ಆಟದ ಬಯಲು, ಪುಸ್ತಕ, ಚರ್ಚಾಕೂಟ, ಸಭೆ ಭಾಷಣ— ಇವೆಲ್ಲ ಯಾರಿಗಾಗಿ?

ಮರಳ ದಿಬ್ಬದ ಮೇಲೆ ಕುಳಿತರೆ ಪಡುವಲಲ್ಲಿ ಸೂರ್ಯ ಮುಳುಗುವ ದೃಶ್ಯ ಚೆನ್ನಾಗಿ ಕಾಣುತ್ತದೆ. ಸಮುದ್ರದ ದೂರನೀಲದ ಉಯ್ಯಾಲೆಯ ಮೇಲೆ ಸೂರ್ಯ ಕೊಂಚ ಕಾಲ ತಟಸ್ಥನಾಗಿ ಕುಳಿತು ವಿಶ್ರಮಿಸಿಕೊಳ್ಳು ತ್ತಿರುವಂತೆ ತೋರುತ್ತದೆ. ಒಂದು ಕ್ಷಣ ಅಷ್ಟೆ. ಆ ಮೇಲೆ ಸೂರ್ಯ ಸಮುದ್ರದಲ್ಲಿ ದಿಗಂತದ ಹತ್ತಿರ ಮುಳುಗಿ ಹೋಗುತ್ತಾನೆ. ತತ್‌ಕ್ಷಣ ನದಿಯ ಮೇಲೆ, ದಡದ ಮೇಲೆ, ಸುತ್ತಮುತ್ತಲೂ ಎಲ್ಲೆಲ್ಲೂ ಅಪೂರ್ವ ಶಾಂತಿ ಹೆಜ್ಜೆಯಿಡುತ್ತದೆ; ಆಶೆಯಳಿದ ಮಬ್ಬಿನಂತೆ ಜಗತ್ತೆಲ್ಲ ಮಸುಕುಮಸಕಾಗು ತ್ತದೆ. ಆಚೆ ಗಂಗೊಳ್ಳಿಯ ದಡದಲ್ಲಿ ಮನೆಮನೆಯಲ್ಲೂ ಮಿಣುಕು ದೀಪಗಳು ಅರಳುತ್ತವೆ. ಕತ್ತಲೆಯ ಸಮುದ್ರದ ದ್ವೀಪಗಳಂತೆ ಅಲ್ಲೊಂದು, ಇಲ್ಲೊಂದು ಬೀದಿ ದೀಪ ಬೆಳಗತೊಡಗುತ್ತದೆ. ಬೆಟ್ಟ ಹೊಳೆಯನ್ನು ದಾಟುತ್ತಿರುವ ಪಥಿಕನಂತೆ ಅಲ್ಲೊಂದು ಇಲ್ಲೊಂದು ಲಾಂದ್ರುವೋ ಲಾಟೀನೋ ಅಲ್ಲಲ್ಲಿ ಹಾದಿ ಬೀದಿಗಳಲ್ಲಿ ಸರಿದಾಡುತ್ತವೆ. ವಿಚಿತ್ರವಾದ ಮೌನ. ಜಗತ್ತೇ ಉಸಿರು ಬಿಗಿಹಿಡಿದು ನಿಂತಿರುವ ಹಾಗೆ. ಕ್ಷಣಕ್ಷಣಕ್ಕೆ ಕತ್ತಲಿನ ತೋಳು ಬಿಗಿಯುತ್ತದೆ. ಆಕಾಶದಲ್ಲಿ ಲಕ್ಷ ಲಕ್ಷ ನಕ್ಷತ್ರಗಳು ಕತ್ತಲಿನ ಈ ಮೆರೆದಾಟವನ್ನು ತುಟಿ ಅದುರಿ ನೋಡುತ್ತವೆ. ಕತ್ತಲಿನ ಈ ತರಂಗದಲ್ಲಿ ಮಾಧವ ಮುಳುಗಿ ಹೋಗುತ್ತಾನೆ. ಅವನ ಮನಸ್ಸಿನೊಳಕ್ಕೂ ಈ ಕತ್ತಲಂಥ ಮೌನ ನುಗ್ಗುತ್ತದೆ. ಸುತ್ತ ಮುತ್ತಲಿನ ಸೃಷ್ಟಿಯಿಂದ ತಾನು ಬೇರೆಯೆಂದು ಆಗ ಅವನಿಗೆ ಎನ್ನಿಸುವುದಿಲ್ಲ. ಹತ್ತಿರದಲ್ಲೇ ಹೊಳೆ ಸಳಸಳ ಎಂದು ಹರಿಯುತ್ತದೆ. ಗಾಳಿಯಾಡಿ ಅದರ ಮೈ ಮುಳ್ಳುಮುಳ್ಳಾಗುತ್ತಿರುವುದು ಮಾಧವನಿಗೆ ಕೇಳಿಸುತ್ತದೆ. ಈ ಎಲ್ಲ ಮೌನದ ಮಧ್ಯೆ ಸಮುದ್ರದ ಘೋಷ ಮಾತ್ರ ಎಡೆಬಿಡದೆ ಬೊಬ್ಬಿಡುತ್ತದೆ. ಅದಕ್ಕೆ ಹಗಲು ರಾತ್ರಿಯ ಭೇದವಿಲ್ಲ. ರಾತ್ರಿಯಲ್ಲಿಯೇ ಅದರ ಮೊರೆತ ಹೆಚ್ಚು.

ಸದಾಕಾಲದ ಆ ಮೊರೆತ ಕಿವಿಗೆ ಎಷ್ಟೋಸಲ ಕೇಳಿಯೂ ಕೇಳಿಸುವುದಿಲ್ಲ. ಆಕಾಶದ ನೀಲವಿಸ್ತಾರದಲ್ಲಿ, ಕಣ್ಣಮುಂದಿನ ನದಿಯ ಚಿರಚಂಚಲವಾದ ಚೆಲುವಿನ ಅನಂತರೂಪಗಳಲ್ಲಿ ಮಗ್ನನಾಗಿದ್ದಾಗ ಬಹಳ ಕಾಲ ಕಡಲ ಮೊರೆತ ಮಾಧವನಿಗೆ ಕೇಳಿಸುವುದಿಲ್ಲ. ಅಕಸ್ಮಾತ್ತಾಗಿ ಅದು ಕೇಳಿ ಬಂದಾಗ ಮಾತ್ರ ಮೈ ನಡುಗುತ್ತದೆ. ದಶಾವತಾರದ ಆಟದಲ್ಲಿ ರಾವಣೇಶ್ವರನ ಪಾತ್ರ ಮಾಡಿ, ನೋಡಿದವರು ಭೀತರಾಗುವಂತೆ ಮಾಡುವ, ಅವರ ಎದೆ ಬಾಯಿಗೆ ಬರುವಂತೆ ವಿಕಾರವಾಗಿ ರಾಕ್ಷಸ ಧ್ವನಿಯಲ್ಲಿ ಕಿರಿಚಿ ಕೂಗುವ ಬಣ್ಣದ ವೇಷದ ಹಾಲಾಡಿ ಅಣ್ಣಪ್ಪನ ಜ್ಞಾಪಕ ಬರುತ್ತದೆ ಆಗ ಮಾಧವನಿಗೆ. ಆಗ ಅವನ ಮನಸ್ಸು ಮತ್ತೆ ಚಂಚಲವಾಗುತ್ತದೆ. ಅದುವರೆಗೆ ಅನುಭವಿಸಿದ್ದ ಶಾಂತಿ ಕ್ಷಣಾರ್ಧದಲ್ಲಿ ಮರೆಯಾಗುತ್ತದೆ. ಜಗತ್ತೆಲ್ಲ ಯಾವುದೋ ಭೂತದ ಕರಾಳ ನರ್ತನದ ವೇದಿಕೆಯಾಗಿರುವಂತೆ ತೋರುತ್ತದೆ. ಆಕಾಶದಲ್ಲಿ ಕಾಣುವ ನಕ್ಷತ್ರಗಳೆಲ್ಲ ಕರುಣವಿಲ್ಲದ, ರಕ್ತವಿಲ್ಲದ, ಗಾಜು ಗಣ್ಣುಗಳಂತೆ ಕಾಣುತ್ತದೆ. ಆಕಾಶ ಸತ್ತ ನೆಲಕ್ಕೆ ಹೊದೆಸಿದ ಹೆಣದ ಬಟ್ಟೆಯೋ ಎನ್ನಿಸುತ್ತದೆ. ಆಕ್ಷಣವೇ ಎದ್ದು ಮಾಧವ ಹೋಟಲಿನ ಕಡೆಗೆ ಹೊರಡುತ್ತಾನೆ.

ಕೃಷ್ಣನು ಕಳುಹಿಸಿದ್ದ ಮಾಧವನ ಪದ್ಯಕ್ಕೆ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಬಂತು. ಕರ್ಣಾಟಕ ಸಂಘದ ವಾರ್ಷಿಕೋತ್ಸವದ ಸಂದರ್ಭದಲ್ಲಿ ಆ ಬಹುಮಾನವನ್ನು ಅಂದು ಅಧ್ಯಕ್ಷತೆ ವಹಿಸಿದ್ದ ಊರ ಪ್ರಸಿದ್ಧ ವಕೀಲರಾದ ವೆಂಕಟೇಶ ಕಿಣಿಯವರು ಮಾಧವನಿಗೆ ಕೊಟ್ಟರು. ಸಭೆಗೆ ಹೋಗಿ ಮಾಧವ ಒಂದು ಮೂಲೆಯಲ್ಲಿ ಕುಳಿತಿದ್ದ. ಬಹುಮಾನ ಬಂದಿದ್ದು ಸಂತೋಷವೇ ಆದರೂ ಅಷ್ಟು ಜನದ ಮಧ್ಯೆ ಹೋಗಿ ಅದನ್ನು ತೆಗೆದುಕೊಳ್ಳಲು ಅವನಿಗೆ ಬಹಳ ಸಂಕೋಚವೆನಿಸಿತು. ಈ ಸಭೆಗೆ ಬಾರದೇ ಇದ್ದರೇ ಚೆನ್ನಾಗಿತ್ತು ಎಂದು ಕೂಡಾ ಅವನಿಗೆ ಒಂದು ಕ್ಷಣ ತೋರಿತು. ಅವನು ಕುಳಿತಿದ್ದ ಮೂಲೆಗೆ ವಿರುದ್ಧವಾದ ಇನ್ನೊಂದು ಮೂಲೆಯಲ್ಲಿ ಕುಳಿತಿದ್ದ ಒಬ್ಬ ವ್ಯಕ್ತಿ ಮಾಧವನ ಮನಸ್ಸನ್ನು ಹೆಚ್ಚಾಗಿ ಸೆಳೆಯಿತು. ಮುಖದ ಮೇಲೆ ಐದಾರು ದಿನಗಳ ಬೆಳವಣಿಗೆ ಕಂಡ ಹುಲುಸುಗಡ್ಡ, ಬಾಚದೆ ಕೆದರಿದ, ಕ್ರಾಪ್ ಕತ್ತರಿಸಿಕೊಂಡು ಕೊನೆಯಪಕ್ಷ ಎರಡು ತಿಂಗಳಾದರೂ ಆಗಿರುವ ತಲೆ.

ಖಾದಿಯ ನಾಲ್ಕು ಮೊಳದ ಪಂಚೆ, ಕೊಳೆ ಕೊಳೆಯಾದ ಒಂದು ಜುಬ್ಬಾ. ಬಾಡಿದ ಬತ್ತಿದ ಮುಖ. ದಟ್ಟ ಕತ್ತಲಲ್ಲಿ ಹಚ್ಚಿ ಇಟ್ಟ ಹಣತೆಯಂತೆ ಉಜ್ವಲ ವಾಗಿ ಬೆಳಗುತ್ತಿರುವ ಎರಡು ಕಣ್ಣುಗಳು. ಆ ಕಣ್ಣುಗಳ ದೃಷ್ಟಿ ಸುತ್ತಮುತ್ತಲ ಯಾರ ಕಡೆಗೂ ಬೀರುತ್ತಿರಲಿಲ್ಲ. ಗೋಡೆಯನ್ನೂ ಕೂಡಾ ಭೇದಿಸಿಕೊಂಡು ಎಲ್ಲೋ ದೂರ ದಿಗಂತದಲ್ಲಿ ನೆಟ್ಟಿರುವ ಹಾಗೆ ಅಥವಾ ತನ್ನಲ್ಲಿ ತಾನೇ ಲೀನ ವಾಗಿರುವ ಹಾಗೆ ದೃಷ್ಟಿ. ಆ ಮುಖವನ್ನು ತಾನು ಎಲ್ಲೋ ಕಂಡ ಹಾಗೆ ಮಾಧವನಿಗೆ ಅನಿಸಿತು. ಆದರೆ, ಎಲ್ಲಿ? ಜ್ಞಾಪಕವಿಲ್ಲ. ಸಭೆಯ ಇತರ ಕಾರ್ಯಕ್ರಮಗಳೆಲ್ಲ ನಡೆಯುತ್ತಿದ್ದಾಗ ಮಾಧವ ಆ ಮುಖವನ್ನೇ ನೋಡುತ್ತ ಕುಳಿತ. ನೀಳವಾಗಿ ನಸುಬಾಗಿದ ಮೂಗು; ಬಹು ಸಣ್ಣದಾಗಿ ತೋರುತ್ತಿರುವ ಬಾಯಿ; ಬತ್ತಿ ಹೋದಂಥ ತುಟಿಗಳು; ಮುಖದ ಆಕಾರಕ್ಕೆ ಕೊಂಚ ದೊಡ್ಡ ದಾಗಿ ಕಾಣುತ್ತಿರುವ ಕಿವಿ. ತುಟಿಯನ್ನು ಮೀರಿ ಹೊರಬರಲು ಯತ್ನಿಸುತ್ತಿರುವ ಎರಡು ಹಲ್ಲುಗಳು ........ ನೋಡನೋಡುತ್ತ ಹೋದಂತೆ ಆ ಮುಖದಲ್ಲಿ ಏನೋ ವಿಶೇಷವಿರಬೇಕೆಂದು ಮಾಧವನಿಗೆ ಅನಿಸಿತು. ಅದರ ಒಳಗೆ ಒಂದು ಬಹು ಶುಭ್ರವಾದ, ಬಹಳ ದಯಾಪೂರ್ಣವಾದ ಹೃದಯವಿರಬೇಕು ಎಂದು ತೋರಿತು. ಮರುಕ್ಷಣವೇ, ಹೂವಿನಂಥದಾದರೂ ಆ ಹೃದಯ ವಜ್ರದಂತೆ ಕಠೋರವಾಗಲೂ ಬಲ್ಲುದು ಎಂಬುದೂ ಆ ಮುಖದಿಂದ ವ್ಯಕ್ತವಾಯಿತು. ಆ ಮುಖದಲ್ಲೇ ಮಾಧವ ಮಗ್ನನಾಗಿರಲು ಅಧ್ಯಕ್ಷರು "ಕವಿತಾಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ ಶ್ರೀಮಾನ್ ಮಾಧವ ಉಡುಪರು ತಮ್ಮ ಕವನ ವನ್ನು ಓದುತ್ತಾರೆ" ಎಂದದ್ದು ಕೇಳಿಸಿತು. ಒಂದು ಕ್ಷಣ ಮಾಧವ ದಿಗ್ಭ್ರಾಂತನಾಗಿ ಕುಳಿತ. ತಾನು ಕೇಳಿದ್ದು ನಿಜವೋ ಸುಳ್ಳೋ ಎಂದು ಅವನು ಯೋಚಿಸುತ್ತಿದ್ದಾಗಲೇ ಕಾರ್ಯದರ್ಶಿಗಳು ಅವನ ಹೆಸರನ್ನು ಹಿಡಿದು ಮತ್ತೆ ಕೂಗಿದರು. "ಏಕೋ ಕೂತೇ ಇದ್ದೀಯಲ್ಲ, ಹೋಗೋ" ಎಂದು ಹತ್ತಿರದಲ್ಲೇ ಕುಳಿತಿದ್ದ ಕೃಷ್ಣ ಪಿಸುಗುಟ್ಟಿ ಮಾಧವನನ್ನು ತನ್ನ ಮೊಣಕೈಯಿಂದ ತಿವಿದ. ಕೊನೆಗೂ ಮಾಧವ ಎದ್ದು ನಿಂತ. ಸುತ್ತಲೂ ಕಣ್ಣು ಹೊರಳಿಸಿದ: ಎಲ್ಲ ಕಣ್ಣುಗಳೂ ತನ್ನ ಕಡೆಯೇ ನೆಟ್ಟಿರುವುದನ್ನು ಕಂಡು ನಾಚಿ ತಲೆ ತಗ್ಗಿ ಸಿದ. ವೇದಿಕೆಯ ಮೇಲೆ ಹೋಗಿ ನಿಂತ ಒಂದು ಕ್ಷಣ ಅವನಿಗೆ ಕಣ್ಣು ಕತ್ತಲೆ ಬಂದ ಹಾಗೇ ಆಯಿತು. ಹಿಡಿದ ಕಾಗದದ ಒಂದು ಅಕ್ಷರವೂ ಕಾಣಿಸ

ಬೇಡವೇ ? ಆದರೆ ತಾನು ಎಲ್ಲರ ಕಣ್ಣುಗಳ ಮಧ್ಯೆ ನಿಂತಿರುವುದು ಥಟ್ಟನೆ ಅವನಿಗೆ ಜ್ಞಾಪಕ ಬಂತು. ಇಂಥ ಸ್ಥಳದಲ್ಲಿ ಚೆನ್ನಾಗಿ ಓದದೆ ಅವಮಾನ ಹೊಂದುವುದು ನಾಚಿಕೆಗೇಡು ಎಂದು ಹೇಳುತ್ತ ಅವನ ಅಹಂಕಾರ ಎದ್ದು ನಿಂತಿತು. ಆಗ ಕಣ್ಣ ಮುಂದೆ ಇದ್ದ ತೆರೆ ಸರಿಯಿತು. ಕಾಗದ ನಿಚ್ಚಳವಾಗಿ ಕಾಣಿಸಿತು. ಪದ್ಯ ಓದ ತೊಡಗಿದ. ಎಂಥ ಅಪಸ್ವರ ಹೊರಟು ಏನು ಆಭಾಸವಾಗುತ್ತದೋ ಎಂತ ಹೆದರುತ್ತಲೇ ಓದಿದ. ಆದರೆ ಹಾಗೇನೂ ಆದ ಹಾಗೆ ಕಾಣಲಿಲ್ಲ. ಕುಳಿತಿದ್ದವರು ತಲ್ಲೀನರಾಗಿ ಕೇಳುತ್ತಿದ್ದಂತೆ ತೋರಿತು. ಅಂತೂ ಕೊನೆಗೂ ಪದ್ಯ ಮುಗಿದಾಗ ಸುತ್ತಲೂ ಚಪ್ಪಾಳೆ ಮೊಳಗಿತು. ಅಧ್ಯಕ್ಷರು ಬಹುಮಾನದ ಪುಸ್ತಕವನ್ನು ಕೊಟ್ಟು ಕೈ ಕುಲುಕಿದರು; ಮತ್ತೆ ಚಪ್ಪಾಳೆ; " ಸ್ಪೈಡೀ ಮಾಧವ್ " ಎಂಬ ಕೂಗು ಸಭೆಯ ಮಧ್ಯದಿಂದ. ಮಾಧವ ತನ್ನ ಸ್ಥಳಕ್ಕೆ ಬಂದು ಕುಳಿತಾಗ ಅವನ ಮೈಯೆಲ್ಲ ಬೆವತು ಹೋಗಿತ್ತು. ಸುತ್ತ ಮುತ್ತ ಕುಳಿತಿದ್ದ ಸ್ನೇಹಿತರ ಅಭಿನಂದನೆಯನ್ನು ಹೇಗೆ ಸ್ವೀಕರಿಸುವುದೆಂದು ತಿಳಿಯದೆ, ಅವರ ಮಾತಿಗೆ ಏನು ಉತ್ತರ ಹೇಳಬೇಕೆಂದು ತಿಳಿಯದೆ ಸುಮ್ಮನೆ ಹಲ್ಲು ಕಿರಿದು ಸುಮ್ಮನಾದ.

ವೇದಿಕೆಯಿಳಿದು ಬಂದು ಕುಳಿತ ತತ್‌ಕ್ಷಣ ಅವನಿಗೆ ಜ್ಞಾಪಕ ಬಂತು ಆ ಮುಖವನ್ನು ತಾನು ಕಂಡದ್ದು ಎಲ್ಲಿ ಎಂಬುದು. ಅದು ಒಂದು ವರ್ಷಕ್ಕೂ ಹಿಂದೆ. ಮಾಧವನ ಹೋಟಲಿನಲ್ಲಿ ಸೂರಪ್ಪಯ್ಯನ ಮಾತನ್ನು ವಿರೋಧಿಸಿ ಮಾತಾಡಿದ ಆ ವಿಚಿತ್ರ ವ್ಯಕ್ತಿಗೆ ಸೇರಿದ್ದು ಈ ಮುಖ. ಆ ವ್ಯಕ್ತಿಯ ಹೆಸರೇನು — ಏನು ? ಆಹಾ, ನೆನಪಿಗೆ ಬಂತು — ರಾಮಕೃಷ್ಣರಾವ್. ಏಕೋ ಈಗ ಮಾಧವನಿಗೆ ಆ ವ್ಯಕ್ತಿಯ ವಿಷಯ ಆಸಕ್ತಿ ಹೆಚ್ಚಿತು. ಮತ್ತೆ ಅವನ ಮುಖದ ಕಡೆಯೇ ನೋಡುತ್ತ ಕುಳಿತಿದ್ದಾಗ ಥಟ್ಟನೆ ಆ ಮಹಾರಾಯ ಎದ್ದು ನಿಂತು-

" ಅಧ್ಯಕ್ಷರೆ, ಒಂದು ನಿಮಿಷ ಮಾತಾಡಲು ಅನುಮತಿ ಕೊಡುತ್ತೀರಾ ? " ಎಂದು ಕೇಳಿದ. ಎಲ್ಲರ ಕಣ್ಣೂ ಆತನ ಕಡೆಯೇ ಹೊರಳಿತು. ಆದರೆ ಅವನಿಗೆ ಅದಾವುದರ ಲಕ್ಷವೂ ಇದ್ದಂತೆ ಕಾಣಲಿಲ್ಲ. ಅಧ್ಯಕ್ಷರು " ಆಗಲಿ, ರಾಮಕೃಷ್ಣರಾಯರೇ " ಎಂದು ಸಭಿಕರನ್ನುದ್ದೇಶಿಸಿ " ಈಗ ರಾಮಕೃಷ್ಣರಾಯರು ಮಾತಾಡುತ್ತಾರೆ " ಎಂದರು.

ಕೂಡಲೇ ಸರಸರನೆ ರಾಮಕೃಷ್ಣರಾಯ ವೇದಿಕೆಯನ್ನೇರಿ ನಿಂತು ಬಾಯಿ ತೆರೆದ. ಮಾತು ಅಸ್ಖಲಿತವಾಗಿ, ನಿರರ್ಗಳವಾಗಿ ಹರಿಯಿತು. ತನ್ನ ಕುರಿತೇ ಅವನು ಮಾತಾಡುತ್ತಿದ್ದುದನ್ನು ಕಂಡು ಮಾಧವನಿಗೆ ಮೊದಲು ಆಶ್ಚರ್ಯ, ಆ ಮೇಲೆ ನಾಚಿಕೆ. "ಇಂದು ಇಲ್ಲಿ ತಮ್ಮ ಪದ್ಯವನ್ನೋದಿದ ಮಾಧವರಿಗೆ ಉಜ್ವಲ ಭವಿಷ್ಯವಿದೆ. ಅವರು ಆಗಲೇ ಉತ್ತಮ ಕವಿಯಲ್ಲಿರ ಬೇಕಾದ ಮುಖ್ಯ ಗುಣವನ್ನು ಹೊಂದಿದ್ದಾರೆ. ಅವರಿಗೆ ಆಯುರಾರೋಗ್ಯ ಲಭಿಸಲಿ ಎಂದು ನಿಮ್ಮೆಲ್ಲರ ಪರವಾಗಿ ನನ್ನ ಹಾರಯ್ಕೆ" ಎಂದು ಹೇಳಿ ವೇದಿಕೆಯಿಳಿದ. ಆ ಮೇಲೆ ಅಧ್ಯಕ್ಷರು ಸಂದರ್ಭೋಚಿತವಾಗಿ ನಾಲ್ಕು ಮಾತು ಆಡಿದ ಮೇಲೆ ಸಭೆ ಮುಗಿಯಿತು. ಆಗ ಮಾಧವ ಸುತ್ತಲೂ ನೋಡಿ ದಾಗ ರಾಮಕೃಷ್ಣರಾಯ ಕಾಣಲು ಸಿಕ್ಕಲಿಲ್ಲ. ಅವನು ಆಗಲೇ ಎಲ್ಲೋ ಮಾಯವಾಗಿ ಬಿಟ್ಟಿದ್ದ.

ವಾರ್ಷಿಕೋತ್ಸವ ಮುಗಿದು ಆಗಲೇ ಏಳೆಂಟುದಿನ ಕಳೆದಿತ್ತು. ಪರೀ ಕ್ಷೆಗೆ ಇನ್ನು ಉಳಿದದ್ದು ಒಂದೇ ತಿಂಗಳು. ಅಷ್ಟು ದಿನ ಮಾಧವ ಚೆನ್ನಾಗಿಯೇ ಓದಿದ್ದ. ಸಂಜೆ ಆರು ಗಂಟೆಯ ತನಕ ಕೂತು ಓದಿ ಮನಸ್ಸು ಜಡವಾಗಿತ್ತು. ಹೊರಗಿನ ಗಾಳಿ ಬೇಕೆನಿಸಿತು. ತಲೆ ಚಿಟ್ಟು ಹಿಡಿದು ಹೋಗಿತ್ತು. ಕೃಷ್ಣ ಆಗಲೇ ಆಟದ ಬಯಲಿಗೆ ನಡೆದಿದ್ದ. ಮಾಧವ ಹೊಳೆ ದಂಡೆಗೆ ಹೊರಟ.

ಹೊತ್ತು ಮುಳುಗುವ ಸಮಯ. ಹೊಳೆಗೆ ಉಬ್ಬರ ಬಂದು ನೀರು ತಕ ತಕ, ಪಕ ಪಕ ಕುಣಿಯುತ್ತಿತ್ತು. ಸಂಜೆ ಸೂರ್ಯನ ಕಿರಣ ನೀರಲ್ಲಿ ಕರಗಿ ಅಲೆ ಅಲೆಯೂ ಮಿರುಗುತ್ತಿತ್ತು. ಸುಖವಾಗಿ ಗಾಳಿ ಬೀಸುತ್ತಿತ್ತು. ಗಂಗೊಳ್ಳಿ ಯಿಂದ ಹೊರಟ ದೋಣಿಗಳಿಗೆ ಅನುಕೂಲವಾಗಿ ಗಾಳಿ ಬೀಸುತ್ತಿತ್ತು. ದೋಣಿ ಯವರು ಹಾಯಿ ಬಿಡಿಸಿ ಕೂವೆ ಮರಕ್ಕೆ ಕಟ್ಟಿ ತಮ್ಮ ಸ್ಥಾನದಲ್ಲಿ ಕೈ ಕಟ್ಟಿ ಕುಳಿತಿದ್ದಾರೆ. ಅವರಿಗೆ ಈಗ ಕೆಲಸವಿಲ್ಲ. ದೋಣಿ ಅಡ್ಡ ದಾರಿ ಹಿಡಿಯದೇ ಗುರಿ ಮುಟ್ಟುವಂತೆ ನೋಡಿಕೊಳ್ಳುವಷ್ಟು ಮಾತ್ರ ಅವರ ಕೆಲಸ. ದೋಣಿಯು ಚುಕ್ಕಾಣಿ ನೀರನ್ನು ಬಗೆದು ನೊರೆ ಕಾರುತ್ತಾ ಓಡೋಡಿ ಬರುತ್ತಿತ್ತು. ಎಲ್ಲ ದಕ್ಕೂ ತುಂಬಿದ ಕಳೆ. ಹೊಳೆ ತುಂಬಿತ್ತು; ಆಕಾಶ ತುಂಬಿತ್ತು ಮೋಡಗಳಿಂದ; ದಡದ ತೆಂಗಿನ ಸಾಲುಗಳೂ ತುಂಬಿದಂತಿದ್ದುವು. ಮಾಧವನ ಮನಸ್ಸೂ ತುಂಬಿ ಬಂದಿತು. ಹೊಳೆಯ ನೀರೂ ಈಚೆ ದಡದ ತನಕವೂ ಬಂದಿತ್ತು. ದಡದ

ಬಳಿ ಕಸಕಡ್ಡಿ ತುಂಬಿದ ಕೊಳೆ ನೊರೆ ಬಂದು ಬಂದು ಎರಚುತ್ತಿತ್ತು. ಉಪ್ಪು ನೀರಿನ ಹಿತವಾದ ವಾಸನೆಯ ಜೊತೆಗೆ ಎಲ್ಲೋ ಒಣಗು ಹಾಕಿದ್ದ ಮೀನಿನ ರಾಶಿಯ ದುರ್ಗಂಧ ಬೆರೆದಿತ್ತು. ಸಮುದ್ರದಲ್ಲಿ ಒಂದು ನಿಂತಿದ್ದ ಹಡಗು ಸಿಳ್ಳು ಹಾಕುತ್ತಿತ್ತು. ಕಡಲು ಎಂದಿನಂತೆಯೇ ಕೂಗುತ್ತಿತ್ತು. ಅದರ ಕೂಗಿನಲ್ಲೂ ಈಗ ಒಂದು ಬಗೆಯ ಪರಿಪೂರ್ಣತೆ ಇರುವಂತೆ ಮಾಧವನಿಗೆ ಅನ್ನಿಸಿತು.

ಇನ್ನೂ ಹೊತ್ತು ಮುಳುಗಿತ್ತು ಅಷ್ಟೆ. ಮಬ್ಬು ಬೆಳಕು ಬಲು ತೆಳ್ಳನೆಯ ಪರದೆಯಂತೆ ಕಣ್ಣಮುಂದೆ ಸರಸರ ಎನ್ನುತ್ತಿತ್ತು. ಆ ತೆರೆಯಾಚೆ ಪಶ್ಚಿಮದ ಕಡೆಯಿಂದ ಯಾರೋ ನಡೆದು ಬರುತ್ತಿರುವ ಹಾಗೆ ಮಾಧವನಿಗೆ ಕಾಣಿಸಿತು. ಆತ ಇನ್ನೂ ಬಹಳ ದೂರದಲ್ಲಿದ್ದುದರಿಂದ ಅದು ಯಾರೆಂದು ಕೂಡಲೇ ಗುರುತು ಹತ್ತಲಿಲ್ಲ. ಸ್ವಲ್ಪ ಹೊತ್ತಿನಲ್ಲೇ ಆತ ಇನ್ನೂ ಹತ್ತಿರ ಬಂದ. ಅವನು ಇನ್ನಾರೂ ಅಲ್ಲ, ರಾಮಕೃಷ್ಣರಾಯ: ಅದೇ ವೇಷ, ಅದೇ ಗಡ್ಡ, ಅದೇ ಸಿಕ್ಕು ಸಿಕ್ಕಾದ ತಲೆಗೂದಲು, ಅದೇ ಉರಿಯುವ ಕೆಂಡದಂಥ ಕಣ್ಣು. ಆ ಮಸುಕು ಬೆಳಕಿನಲ್ಲಿ ನೋಡಿದರೆ ಕೊಂಚ ಭಯ ಹುಟ್ಟಿಸುವಂಥ ವ್ಯಕ್ತಿಯೇ ಅದು. ಅವನೂ ಕೂಡಾ ಇಲ್ಲಿ ಇಷ್ಟು ಹೊತ್ತಿನಲ್ಲಿ ಮರಳ ದಿಣ್ಣೆಯ ಮೇಲೆ ಯಾವ ರಾಯ ಕುಳಿತಿರಬಹುದು ಎಂದು ಸೂಕ್ಷ್ಮವಾಗಿ ಗಮನಿಸುತ್ತಿದ್ದಂತೆ ತೋರಿತು. ಅವನು ಹತ್ತಿರ ಬಂದವನು ಒಂದು ಕ್ಷಣಕಾಲ ತಡೆದು ನಿಂತು "ಓಹೋ, ಮಾಧವ" ಎಂದು ಪಕ್ಕಕ್ಕೇ ಬಂದ.

"ಓಹೋ, ರಾಮಕೃಷ್ಣರಾಯರು ಬನ್ನಿ, ಬನ್ನಿ" ಎಂದ ಮಾಧವ. ಈತನ ಕೂಡ ನಿಸ್ಸಂಕೋಚವಾಗಿ ಮಾತಾಡಬಹುದೆಂದು ಅದೇಕೋ ಮಾಧವನಿಗೆ ಅನ್ನಿಸಿತು. ಅವನ ಮಾತಿನಲ್ಲಿ ಅಂಥ ಆತ್ಮೀಯತೆ ಕಂಡಿತು. ಅವನು ಬಂದು ಪಕ್ಕದಲ್ಲೇ ಕುಳಿತ.

"ಆ ದಿನ ಸಭೆ ಮುಗಿದಮೇಲೆ ನಿಮ್ಮನ್ನ ನೋಡೋಣ ಎಂದು ಹುಡುಕಿದೆ. ನೀವು ಸಿಗಲಿಲ್ಲ" ಎಂದ ಮಾಧವ.

"ಹುಡುಕಿದಿರಾ, ಏಕೆ? ನಿಮ್ಮನ್ನ ಹೊಗಳಿದೆ ಅಂತಲೋ" ಎಂದು ಅವನು ಕೇಳಿದ. ಮಾತು ಕೊಂಚ ಒರಟಾಗಿ ಬಂತು.

"ಹೊಗಳಿದಿರಿ ಅಂತಲೂ ಹೌದು; ಆದರೆ ಅಷ್ಟಕ್ಕಾಗಿಯೇ ಅಲ್ಲ!"

“ ಮತ್ತೆ ? ”

“ ಆ ದಿವಸ ನೀವು ಹೋಟಲಿನಲ್ಲಿ ಸೂರಪ್ಪಯ್ಯನನ್ನು ವಿರೋಧಿಸಿ ಮಾತಾಡಿದಿರಲ್ಲ, ಅಂದಿನಿಂದ ಏಕೋ ನನಗೆ ನಿಮ್ಮಲ್ಲಿ ಆಸಕ್ತಿ; ನಿಮ್ಮ ಪರಿಚಯ ಮಾಡಿಕೊಳ್ಳಬೇಕು ಎಂಬ ಆಶೆ. ನಿನ್ನೆ ಸಭೆ ನಡೆಯುತ್ತಿದ್ದಾಗಲೂ ನಿಮ್ಮ ಮುಖವನ್ನೇ ನೋಡುತ್ತ ಕುಳಿತಿದ್ದೆ. ”

“ ಹಾಗೋ, ನನಗೆ ಅದು ತಿಳಿಯಲೇ ಇಲ್ಲ ಆದರೆ ನನ್ನ ಮುಖ ಅಷ್ಟು ಸುಂದರವಲ್ಲ ಅಂತ ತೋರುತ್ತೆ ”

“ ಸುಂದರವಲ್ಲ, ಆದರೆ ವೈಶಿಷ್ಟ್ಯವುಳ್ಳ ಮುಖ; ಅದೂ ಆ ನಿಮ್ಮ ಕಣ್ಣು! ಬಹಳ ಅಪರೂಪದ ವಸ್ತು ಅದು. ”

“ ಬಹುಶಃ ನಿಮ್ಮ ಮುಖದಂತೇ ಇರಬೇಕು, ನನ್ನ ಮುಖ. ” ಮಾಧವನಿಗೆ ತನ್ನ ಮುಖದಲ್ಲಿ ಆತನಕ ಹೆಚ್ಚು ಆಸಕ್ತಿ ಹುಟ್ಟಿರಲಿಲ್ಲ ಕೆಲವು ಸಲ ಕನ್ನಡಿಯ ಮೂಲಕ ಅದನ್ನು ನೋಡಿದ್ದಿರಬಹುದು. ತಲೆಯಲ್ಲಿನ್ನೂ ಹಿಡಿ ಜುಟ್ಟು ಇದ್ದದ್ದರಿಂದ ಕ್ರಾಪು ಬಾಚಿಕೊಳ್ಳುವ ಪ್ರಮೇಯವೂ ಇರಲಿಲ್ಲ. ಇತ್ತೀಚೆಗೇಕೋ ಆ ಜುಟ್ಟು ಕಟಾವು ಮಾಡಿಸಿಕೊಂಡರೇ ಮೇಲು ಎಂದು ಮಾಧವನಿಗೆ ಅನ್ನಿಸುತ್ತಿತ್ತು; ಆದರೆ ತನ್ನ ಮುಖದಲ್ಲೂ ಏನೋ ಒಂದು ವಿಶೇಷವುಂಟೆಂಬ ಮಾತು ಅವನು ಇದೇ ಮೊದಲು ಕೇಳುತ್ತಿದ್ದುದು. ಅದ ರಿಂದ ಅವನ ಮನಸ್ಸಿಗೆ ಕೊಂಚ ತೃಪ್ತಿಯೂ ಆಗದಿರಲಿಲ್ಲ.

ಸ್ವಲ್ಪ ಹೊತ್ತು ಇಬ್ಬರೂ ಮೌನ ಆ ಮೇಲೆ ಮಾಧವನೇ

“ ಇದೇನು ಈ ಕಡೆಯಿಂದ ಬರುತ್ತಿದ್ದೀರಿ ? ” ಎಂದು ಕೇಳಿದ.

“ ಇದೇನು ನೀವು ಇಲ್ಲಿ ಕುಳಿತಿದ್ದೀರಿ ? ಇದೇನು ಪಾರ್ಕೇ ? ಆಟದ ಬಯಲೇ ? ಲೈಬ್ರರಿಯೇ ? ” ಎಂದು ರಾಮಕೃಷ್ಣ ಸವಾಲ್ ಹಾಕಿದ.

“ ಏಕೆ ಅಂದರೆ — ಸಂಜೆ ಹೊತ್ತು ಇಲ್ಲಿ ಬಂದು ಕುಳಿತರೆ ಮನಸ್ಸಿಗೆ ಸಂತೋಷವಾಗುತ್ತದೆ. — ಅದಕ್ಕೆ ”

“ ನನಗೂ ಕೂಡ ಅಂಥ ಸಂತೋಷ ಆಗಬಹುದು ತಾನೆ ? ಅದಕ್ಕೆ ನಿಮ್ಮದೇನಾದರೂ ಅಭ್ಯಂತರವುಂಟೋ ? ” ಮಾತಿನಲ್ಲಿ ಹಾಸ್ಯ ಮಿಂಚಿತು.

“ ಛೇ, ಛೇ; ಅಭ್ಯಂತರವೇನು ? ಅದೂ ನೀವು ಈ ಮರಳ ದಿಬ್ಬದ ಮೇಲೇ ಕುಳಿತಿರಲಿಲ್ಲವಲ್ಲ ” ಎಂದ ಮಾಧವ. ಇಬ್ಬರೂ ನಕ್ಕರು.

" ನಿಮ್ಮ ಆ ಪದ್ಯ ನಿಜವಾಗಿಯೂ ಚೆನ್ನಾಗಿತ್ತು. ಇತ್ತೀಚೆಗೆ ಇನ್ನು ಏನಾದರೂ ಬರೆದಿದ್ದೀರಾ ? "

" ಆ ಪದ್ಯ ಬರೆದ ಮೇಲೆ ನಾನು ಬರೆದದ್ದು ಇನ್ನು ಒಂದೇ ಒಂದು. ಅದು ನನ್ನ ಮನಸ್ಸಿಗೇ ಅಷ್ಟು ಒಪ್ಪಿಲ್ಲ. ಆದರೆ ನೀವು ನನ್ನ ಪದ್ಯವನ್ನು ಅಂದು ಸಭೆಯಲ್ಲಿ ಎದ್ದು ನಿಂತು ಹೊಗಳಿದ್ದು ಏಕೆ ? "

" ಪದ್ಯ ಮನಸ್ಸಿಗೆ ಬಹಳವಾಗಿ ಹಿಡಿಸಿತು. ಎಳಮನಸ್ಸಿನ ಭಾವದ ಅಸ್ಪಷ್ಟವಾದ ಜಟಿಲತೆಯ ಉತ್ತಮ ಚಿತ್ರವನ್ನು ಅಲ್ಲಿ ಕಂಡೆ. ಅಷ್ಟು ಒಳ್ಳೆಯದನ್ನು ಕಂಡಾಗ ಹೊಗಳದೆ ಇರುವುದು ಹೇಗೆ ? "

ಹೊಗಳದೆ ಇರುವುದು ಹೇಗೆ ? ಈ ಮಾತು ಕೊಂಚ ವಿಚಿತ್ರವಾದರೂ ನಿಜವೆನಿಸಿತು ಮಾಧವನಿಗೆ. ಆದರೂ

" ಹೊಗಳದೆ ಇರಲು ನಿಮಗೆ ಸಾಧ್ಯವೇ ಇರಲಿಲ್ಲವೇ ? "

" ಸಾಧ್ಯವಿತ್ತು. ಆದರೆ ನನ್ನ ಕರ್ತವ್ಯ ನಾನು ಮಾಡದೆ ಬಿಟ್ಟಂತೆ ಆಗುತ್ತಿತ್ತು. ಏಕೆಂದರೆ, ನಮ್ಮಲ್ಲಿ ನಿಜವಾದ ಕವಿಗಳ ಸಂಖ್ಯೆ ಎಷ್ಟು ಚಿಕ್ಕದೋ ಅದಕ್ಕಿಂತಲೂ ಚಿಕ್ಕದು ಕಾವ್ಯವನ್ನು ನಿಜವಾಗಿ ಅನುಭವಿಸಬಲ್ಲವರ ಸಂಖ್ಯೆ. ಕವಿ ಸಮಾಜದ ಅತ್ಯಗತ್ಯವಾದ ಅಂಗ ಎನ್ನುವುದನ್ನು ಸಮಾಜ ಮರೆತಿದೆ. ಆ ಮರೆವು ಕಳೆಯಬೇಕು. ಆದಕಾರಣ ಎಲ್ಲಿ ಒಳ್ಳೆಯ ಕವಿ ಕಂಡರೆ ಅಲ್ಲಿ ಅವನನ್ನು ಎತ್ತಿ ಹಿಡಿಯಬೇಕು. ಮನೆಯ ಮಾಡಿನ ಮೇಲೆ ನಿಂತು ಕೂಗಿ ಹೇಳಬೇಕು; ಡೋಲು ಹಿಡಿದುಕೊಂಡು ಬೀದಿಯಲ್ಲೆಲ್ಲ ಡಂಗುರ ಸಾರಿದರೂ ಅಡ್ಡಿಯಿಲ್ಲ ! " ರಾಮಕೃಷ್ಣ ಆವೇಶದಿಂದ ಮಾತಾಡುತ್ತಿದ್ದ. ಮಾಧವ ಸುಮ್ಮನೆ ಕುಳಿತು ಕೇಳುತ್ತಿದ್ದ. ಸ್ವಲ್ಪ ಹೊತ್ತು ಬಿಟ್ಟು ಮಾಧವ

" ಆ ದಿವಸ ನೀವು ಸೂರಪ್ಪಯ್ಯನನ್ನು ವಿರೋಧಿಸಿ ಮಾತಾಡಿದ ದಿನ ನಮ್ಮ ಹೋಟೆಲ್ ಯಜಮಾನರು ನಿಮ್ಮ ವಿಷಯ ಏನು ಹೇಳಿದರು ಬಲ್ಲಿರಾ ? "

" ಅದು ನನಗೆ ಹೇಗೆ ಗೊತ್ತಾಗಬೇಕು—ನಾನು ಹೋದಮೇಲಲ್ಲವೇ ಅವರು ನನ್ನ ವಿಷಯ ಮಾತಾಡಿದ್ದು ? "

" ಹೌದು. ನಿಮಗೆ ಕೊಂಚ ಹುಚ್ಚು ಅಂತಲೂ ಅವರು ಹೇಳಿದರು. " ಈ ಮಾತು ಕೇಳಿ ರಾಮಕೃಷ್ಣನಿಗೆ ಕೊಂಚ ಅತೃಪ್ತಿಯಾದಂತೆ ತೋರಿತು.

ಕೊಂಚಹೊತ್ತು ಸುಮ್ಮನಿದ್ದು-

ಹೌದು ಮಾಧವಾ, ನಾನು ಒಂದು ಜಾತಿ ಹುಚ್ಚನೇಸರಿ, ನಮ್ಮ ತಂದೆಯವರೂ ಹಾಗೇ ಹೇಳುತ್ತಾರೆ. ನನ್ನ ಬಂಧುಬಳಗದವರೆಲ್ಲ ಈ ತೀರ್ಮಾನಕ್ಕೆ ಆಗಲೇ ಬಂದು ಬಿಟ್ಟಿದ್ದಾರೆ." ಮಾತಿನಲ್ಲಿ ಕೊಂಚ ಸಂತಾಪ ವಿತ್ತು, ದುಃಖವಿತ್ತು. ಮಾಧವನಿಗೆ ತಾನು ಆ ಮಾತು ಹೇಳಬಾರದಾಗಿತ್ತೋ ಎನ್ನಿಸಿತು.

"ಕ್ಷಮಿಸಿ, ರಾಮಕೃಷ್ಣರಾವ್; ನಾನು ಆ ಮಾತು ಆಡಬಾರದಾಗಿತ್ತು." ಎಂದ.

"ಇದರಲ್ಲಿ ಕ್ಷಮಿಸುವುದೇನಿದೆ ಮಾಧವ್? ಜನ ಹಾಗೂ ಅನ್ನುತ್ತಾರೆ ಅಂತ ನನಗೆ ತಿಳಿದಿದೆ. ಏನು ಮಾಡಲಿ? ಹುಚ್ಚನಾಗದೆ ವಿಧಿಯಿಲ್ಲ."

"ಇಷ್ಟು ಬುದ್ಧಿವಂತರು ನೀವು, ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣ-ರಾಗಿದ್ದೀರಿ. ನಿಮ್ಮನ್ನು ನಿಮ್ಮವರೇ ಏಕೆ ಹಾಗೆ ಅನ್ನುತ್ತಾರೆ?"

"ನನಗೆ ಕೊಂಚ ಬುದ್ಧಿ ಇರುವುದೂ, ಬಿ. ಎ. ಆಗಿರುವುದೂ, ಅದಕ್ಕೆ ಕಾರಣ ಮಾಧವ. ಬಿ. ಎ. ಆದವನು ಏನು ಮಾಡಬೇಕು? ಯಾವುದಾದರೂ ಕೆಲಸ ಸಂಪಾದಿಸಿಕೊಳ್ಳಬೇಕು. ಆಮೇಲೆ; ಮದುವೆಯಾಗಬೇಕು. ದುಡಿಯ ಬೇಕು. ಹೆಂಡಿರು ಮಕ್ಕಳು ಸಂಸಾರ ಎಂಬ ಈ ಸಣ್ಣ ಉಸಿರುಕಟ್ಟಿಸುವ ಕತ್ತಲಕೋಣೆಯಲ್ಲೇ ಅವನು ಆಯುಷ್ಯ ಸವೆಸಬೇಕು. ಇದು ಲೋಕರೂಢಿ."

"ಎಂದರೆ?"

"ಎಂದರೆ ನಾನು ಆ ಲೋಕರೂಢಿಯನ್ನು ಮೀರುತ್ತಿದ್ದೇನೆ. ಅದಕ್ಕಾಗಿ ನನಗೆ ಈ ಬಿರುದು—ಹುಚ್ಚ!" ಎಂದು ರಾಮಕೃಷ್ಣರಾಯ ನಕ್ಕ. ಸ್ವಲ್ಪ ಹೊತ್ತು ಇಬ್ಬರೂ ಮಾತಾಡದೆ ಕುಳಿತಿದ್ದರು. ಆಮೇಲೆ ರಾಮಕೃಷ್ಣನೇ ಮಾತು ಶುರುಮಾಡಿದ:

"ನಾನು ಕಾಲೇಜಿನಲ್ಲಿ ಇದ್ದಾಗಲೇ ಗಾಂಧಿಜಿಯ ಪ್ರಭಾವಕ್ಕೆ ಬಿದ್ದೆ. ದೇಶಕ್ಕಾಗಿ ಅಷ್ಟು ಕೆಲಸ ಮಾಡಬೇಕು. ಅದಕ್ಕಾಗಿ ಏನು ಮಾಡಲೂ ತಯ್ಯಾರು ಎಂದು ಸಂಕಲ್ಪ ಮಾಡಿದೆ. ಪಾಸಾದ ಮೇಲೆ ಯಾವ ಕೆಲಸಕ್ಕೂ ಸೇರಿಕೊಳ್ಳದೆ ಹೋದೆ. ನಾನು ಬಿ. ಎ. ಆಗಿ ಆಗಲೇ ಎರಡು ವರ್ಷ ಕಳೆಯಿತು. ನಮ್ಮ ತಂದೆ ಬಯ್ದರು, ಆಡಿದರು, ಏನು ಮಾಡಿದರೂ ಸರಕಾರಿ

ಕೆಲಸಕ್ಕೆ ಖಂಡಿತ ಸೇರುವುದಿಲ್ಲ ಎಂದುಬಿಟ್ಟೆ. ಸರಿ, ನಾನು ಯಾರಿಗೂ ಬೇಡದವನಾದೆ. ” ಅವನ ಮಾತಿನಲ್ಲಿ ವ್ಯಸನ ಸೂಚಿಸಿತು.

“ ಆದರೆ ದೇಶಸೇವೆ ಒಳ್ಳೆಯ ಕೆಲಸವಲ್ಲವೆ ? ”

“ ಹೌದು, ದೇಶಸೇವೆ ಒಳ್ಳೇದು, ಸ್ವಾರ್ಥತ್ಯಾಗ ಒಳ್ಳೇದು; ಪರೋಪಕಾರ ಒಳ್ಳೇದು. ಹೌದು, ಆಡುವುದಕ್ಕೆ ಒಳ್ಳೆಯದು, ಮಾಡುವುದಕ್ಕಲ್ಲ. ಆಡುತ್ತ ಇರುವ ತನಕ ಯಾರ ಆಕ್ಷೇಪವೂ ಇಲ್ಲ, ಹೊಗಳಿಕೆಯೇ. ಆದರೆ ಆಡಿದ್ದನ್ನು ಯಾರನು ಮಾಡುವುದಕ್ಕೂ ಶುರು ಮಾಡುತ್ತಾನೋ ಅವನು ಹುಚ್ಚ. ತನ್ನ ಬಿಡ ಯಾರು ಭದ್ರ ಮಾಡಿಕೊಳ್ಳುವುದಿಲ್ಲವೋ ಅವನು ಈ ಲೋಕದ ದೃಷ್ಟಿಯಲ್ಲಿ ಅಯೋಗ್ಯ, ಮೂರ್ಖ, ಮನೆಗೆ ಮಾರಿ ಪರರಿಗೆ ಉಪಕಾರಿ, ಕುಲಕ್ಕೆ ಮೃತ್ಯು ಕೊಡಲಿ ಕಾವು, — ಹುಚ್ಚ —; ಹೇಗಿದೆ ನಮ್ಮ ವೇದಾಂತ ? ” ಎಂದು ಗಹಗಹಿಸಿ ನಕ್ಕ ರಾಮಕೃಷ್ಣ. ಬಹುಶಃ ಅವನಿಗೆ, ಅವನ ತಂದೆ ಉಪಯೋಗಿಸಿದ ಎಲ್ಲ ವಿಶೇಷಣಗಳೂ, ಗಾದೆ ಮಾತುಗಳೂ ಆಗ ಜ್ಞಾಪಕಕ್ಕೆ ಬಂದಿರಬೇಕು. ಸ್ವಲ್ಪ ಹೊತ್ತು ಅವನು ಸುಮ್ಮನಿದ್ದು ಆ ಮೇಲೆ

“ ಆ ದಿವಸ ನಾನು ಸೂರಪ್ಪಯ್ಯನ ವಿಚಾರ ಆಡಿದ ಮಾತು ಕೇಳಿ ನಿಮಗೂ ಕೋಪ ಬಂದಿರಬೇಕು, ಅಲ್ಲವೆ ? ಬಹುಶಃ ನನ್ನ ಮಾತು ನಿಮಗೆ ಹೊಟ್ಟೆಕಿಚ್ಚಿನದು ಎನ್ನಿಸಿರಬೇಕು. ”

“ ಇಲ್ಲ, ಹೊಟ್ಟೆಕಿಚ್ಚಿನ ಮಾತು ಎನ್ನಿಸಲಿಲ್ಲ. ಆದರೆ ಸೂರಪ್ಪಯ್ಯ ನಂಥವರ ವಿಚಾರ ಹಾಗೆ ಮಾತಾಡಬಾರದಾಗಿತ್ತು ಎನ್ನಿಸಿತ್ತು ಆಗ. ”

“ ಈಗ ? ”

“ ಸೂರಪ್ಪಯ್ಯನ ಇತ್ತೀಚಿನ ನಡತೆ ನೋಡಿದ ಮೇಲೆ ಬಹುಶಃ ನೀವು ಆಡಿದ್ದೇ ಸರಿಯೋ ಎನ್ನಿಸುತ್ತಿದೆ. ”

“ ಇತ್ತೀಚೆಗೆ ಅವನು ಏನು ಮಾಡಿದ ? ” ಎಂದು ರಾಮಕೃಷ್ಣ ಕೇಳಲು ಮಾಧವ ಅವನಿಗೆ ಕಂಭದಕೋಣೆಯಲ್ಲಿ ನಡೆದ ವೃತ್ತಾಂತವನ್ನೆಲ್ಲ ಹೇಳಿದ. ಅದನ್ನು ಕೇಳಿ ರಾಮಕೃಷ್ಣ

“ ನನಗೆ ಸೂರಪ್ಪಯ್ಯ ಬಹಳ ದಿನಗಳಿಂದಲೂ ಗೊತ್ತು. ತರುಣರಿಗೆ ಸಹಜವಾದ ಉತ್ಸಾಹದಲ್ಲಿ ಅವನು ಚಳುವಳಿಗೆ ಧುಮುಕಿದ. ಅದು ಸರಿ.

ಆದರೆ ಅವನು ಸಿಪಾಯಿಯಾಗಲು ತಕ್ಕವನಲ್ಲದೆ ಮುಂದಾಳು ಆಗಲು ಯೋಗ್ಯನಲ್ಲ. ಅಂಥ ಗುಣ ಅವನಲ್ಲಿ ಇಲ್ಲ. ಆದರೂ ದೊಡ್ಡ ಮುಖಂಡ ನಾಗುವ ಆಸೆ, ಪಾಪ."

"ಎಂದರೆ ಅವನು ನಿಜವಾದ ದೇಶಭಕ್ತನಲ್ಲ, ಆದರ್ಶಕ್ಕಾಗಿ ಎಲ್ಲ ವನ್ನೂ ತ್ಯಜಿಸಲು ಸಿದ್ಧನಾದವನಲ್ಲ ಅಂತಲೋ?"

"ಹೌದು. ಆದರೆ ಅದು ಬಹಳ ಸಹಜವಾದುದು. ಆದರ್ಶದಂತೆ ನಡೆಯುವವರಾಗಲೀ ಆಡಿದಂತೆ ಮಾಡುವವರಾಗಲೀ ಜಗತ್ತಿನಲ್ಲಿ ಬಹಳ ವಿರಳ. ಆದರೆ ತಾನು ಐದಡಿ ಇದ್ದೂ ಹತ್ತಡಿಯೆತ್ತರದ ಮಾನವೇತರನಂತೆ ವರ್ತಿಸುವುದು ಮಾತ್ರ ತಪ್ಪು."

"ಆದರೆ ಆಡಿದಂತೆ ಮಾಡದವರು, ದೃಢಸಂಕಲ್ಪವಿಲ್ಲದವರು ಏಕೆ ಈ ಜಗತ್ತಿನಲ್ಲಿ ಇರಬೇಕೋ ನನಗೆ ಅರ್ಥವಾಗುವುದಿಲ್ಲ."

"ನೋಡಿ ಮಾಧವ, ನೀವಿನ್ನೂ ಚಿಕ್ಕವರು. ನಿಮಗೆ ಮನುಷ್ಯರು ತೀರ ಒಳ್ಳೆಯವರಾಗಿಯೋ ಅಥವಾ ತೀರ ಕೆಟ್ಟವರಾಗಿಯೋ ಕಾಣುತ್ತಾರೆ. ಆದರೆ ನೀವು ಜೀವನವನ್ನೂ, ಜನರನ್ನು ಹೆಚ್ಚು ಹೆಚ್ಚಾಗಿ ನೋಡುತ್ತ ಹೋದಂತೆ ಪ್ರತಿಯೊಬ್ಬ ಮನುಷ್ಯನಲ್ಲೂ ಒಳಿತು ಕೆಡಕು, ಬೆರೆತಿದೆ, ಅವುಗಳ ಪ್ರಮಾಣ ದಲ್ಲಿ ಮಾತ್ರ ಹೆಚ್ಚು ಕಡಿಮೆ ಇರಬಹುದು ಎಂಬುದನ್ನು ಅರಿಯುತ್ತೀರಿ. ಆದರೆ ಅದಕ್ಕೂ ಮುಖ್ಯವಾದ ಮಾತು ಒಂದಿದೆ. ಅದನ್ನು ನೀವು ಮರೆಯಬಾರದು."

"ಆ ಮುಖ್ಯವಾದ ಮಾತು ಯಾವುದು?"

"ಈ ನಾವೂ ಕೂಡಾ ನಾವು ನಾವು ತಿಳಿದುಕೊಂಡಿರುವಷ್ಟು ಒಳ್ಳೆ ಯವರಲ್ಲ. ಯಾವ ಮನುಷ್ಯನೂ ತನ್ನ ನಿಜ ಸ್ವಭಾವವನ್ನು ಅರಿಯಲು ಯತ್ನಿಸುವುದಿಲ್ಲ. ತಾನು ತನಗಾಗಿ ಕಲ್ಪಿಸಿಕೊಂಡ ಆದರ್ಶವೇ ತನ್ನ ನಿಜ ಸ್ವರೂಪ ಎಂದು ಭ್ರಮಿಸುತ್ತಾನೆ. ಇದೇ ನಮ್ಮ ಎಲ್ಲ ತೊಂದರೆಗಳಿಗೂ ಮೂಲ." ಮಾಧವನಿಗೆ ಈ ಮಾತು ತೀರ ಹೊಸದಾಗಿ ಕಂಡಿತು. ಆದರೂ ಅದು ಎಷ್ಟು ನಿಜ!

"ರಾಮಕೃಷ್ಣರಾಯರೇ, ನೀವು ಹೇಳಿದ ಮಾತು ನಿಜ. ನಾವೆಲ್ಲರೂ ಇನ್ನೊಬ್ಬರ ಟೀಕೆಯಲ್ಲಿ ಹೆಚ್ಚು ಸಮಯ ಕಳೆಯುತ್ತೇವಲ್ಲದೆ ನಮ್ಮ ನಮ್ಮ

ಮನಸ್ಸನ್ನು ಸರಿಪಡಿಸಿಕೊಳ್ಳಲು ಅವರ ಹತ್ತನೆ ಒಂದಂಶ ಕಾಲವನ್ನೂ ವಿನಿಯೋಗಿಸುವುದಿಲ್ಲ. ಇದು ಹೀಗೆ ಏಕಾಗಬೇಕೋ? "

" ಮನುಷ್ಯಕುಲದ ಮುಂದೆ ಇರುವ ದೊಡ್ಡ ಸಮಸ್ಯೆಗಳಲ್ಲಿ ಇದೂ ಒಂದು. ಮಾನವ ಲೋಕದಲ್ಲಿ ಕಾಣುವ ಎಲ್ಲ ಕ್ರೌರ್ಯಕ್ಕೂ, ಅತ್ಯಾಚಾರಕ್ಕೂ, ದಬ್ಬಾಳಿಕೆಗೂ ಇದೇ ಮುಖ್ಯ ಕಾರಣ. ಎಂಥ ಅನ್ಯಾಯ ಮಾಡುವವನಾದರೂ ಅದಕ್ಕೆ ತಕ್ಕ ಕಾರಣವನ್ನು ಹುಡುಕಿಯೇ ಹುಡುಕುತ್ತಾನೆ. ಏನೋ ಒಂದು ರೀತಿ ತನ್ನ ಮನಸ್ಸನ್ನು ಅವನು ಸಮಾಧಾನಪಡಿಸಿಕೊಂಡು ತಾನೂ ಒಬ್ಬ ಮನುಷ್ಯನೇ ಎಂದು ತನಗೆ ತಾನೇ ರುಜುವಾತು ಪಡಿಸಿಕೊಂಡು ಕೃತಾರ್ಥನಾಗುತ್ತಾನೆ. "

" ಆ ಮನಸ್ಸಾದರೂ ಎಷ್ಟು ಸುಲಭವಾಗಿ ತೃಪ್ತವಾಗುತ್ತದೆ! "

" ಅಂತೂ ತೃಪ್ತಿ ಪಡಿಸಬೇಕಾದ ಮನಸ್ಸೊಂದಾದರೂ ಇದೆಯಲ್ಲ! ಅದೇ ಇಲ್ಲದೆ ಹೋಗಿದ್ದರೆ — ಆಗ? ಮಾನವಕುಲದ ಭವಿಷ್ಯದಲ್ಲಿ ನಾವು ಆಶೆಯಿಟ್ಟುಕೊಳ್ಳಲು ಅಂಥ ಆ ಮನಸ್ಸೇ ಕಾರಣ. ಇಲ್ಲವಾದರೆ ಈ ಸತ್ಯಾಗ್ರಹ, ಈ ಸ್ವರಾಜ್ಯ ಸಂಗ್ರಾಮ, ಈ ವಿದ್ಯೆ, ಈ ಸಾಹಿತ್ಯ- ಇವೆಲ್ಲ ವ್ಯರ್ಥವೇ."

ಈ ಮಾತುಗಳು ಮಾಧವನ ಮನಸ್ಸಿನ ಮೇಲೆ ಬಹಳ ಪ್ರಭಾವ ಬೀರಿದುವು. ಇಲ್ಲಿ ತನ್ನ ಮುಂದೆ ಇರುವ ಮನುಷ್ಯ ಜೀವನವನ್ನು ಚೆನ್ನಾಗಿ ನೋಡಿದವ ಎಂದು ಅವನಿಗೆ ತೋರಿತು. ಈತ ತನಗೆ ಬಹಳ ಹತ್ತಿರವಾದವನು, ತನ್ನ ಸುಖದುಃಖಗಳನ್ನು, ವಿಚಿತ್ರ ಅನುಭವಗಳನ್ನು ಅರಿಯಬಲ್ಲವನು, ಸಹಾನುಭೂತಿ ತೋರಬಲ್ಲವನು ಎಂದು ಎನಿಸಿತು. ಆದಕಾರಣ ತನ್ನ ಸುಖದುಃಖಗಳನ್ನು ಯಾರಲ್ಲೂ ಹೇಳಿಕೊಳ್ಳದ ಮಾಧವನ ಮೌನದ ಬಾಗಿಲು ಈಗ ತೆರೆಯಿತು:

" ನೋಡಿ, ರಾಮಕೃಷ್ಣರಾವ್, ನನಗೇಕೋ ಈ ಜಗತ್ತಿನೊಡನೆ ಬೆರೆಯಲೇ ಆಗುವುದಿಲ್ಲ. ನಾಲ್ಕು ಜನ ಇದ್ದರೆ ಸಾಕು, ನನ್ನ ಬಾಯಿ ಕಟ್ಟಿ ಹೋಗುತ್ತದೆ; ಮಾತು ಆಡಿದರೂ ಕೂಡಾ ಆಡುವಾಗ ದಿಗಿಲು, ಸಂಕೋಚ. ಎಷ್ಟು ಕಷ್ಟ ಪಟ್ಟರೂ ಹತ್ತು ಜನದೊಡನೆ ಬೆರೆಯಲು ಆಗುವುದೇ ಇಲ್ಲವಲ್ಲ " ಎಂದ ಮಾಧವ.

" ಆದರೆ ಈ ಹೊಳೆಯ ದಡದಲ್ಲಿ, ಈ ಆಕಾಶದ ಕೆಳಗೆ, ಸಮುದ್ರ

ತೀರವಲ್ಲಿ, ಮರಗಿಡಬಳ್ಳಿಗಳ ನಡುವೆ, ಹೊಲಗದ್ದೆಗಳ ಪೈರುಪಚ್ಚೆಗಳ ನಡುವೆ ನಿಮಗೆ ಅಂಥ ಸಂಕೋಚವಾಗುತ್ತದೆಯೇ ? "

" ಇಲ್ಲ. "

" ಅವುಗಳಲ್ಲಿ ನೀವು ತಲ್ಲೀನರಾಗ ಬಲ್ಲಿರಿ. ಆದ ಕಾರಣ ನಿಮಗೂ ಆ ಸೃಷ್ಟಿವಿದ್ಯಮಾನಗಳಿಗೂ ಬಂಧುತ್ವ ಸಿದ್ಧಿಸುತ್ತದೆ. ಆದರೆ ಜನದ ಮಧ್ಯೆ ನೀವು ತಾವು ಬೇರೆ ಎಂದು ತಿಳಿಯುತ್ತೀರಿ — ನಿಮಗೆ ಅರಿವಿಲ್ಲದಂತೆಯೇ ನಿಮಗೂ ನಿಮ್ಮ ಸುತ್ತಲ ಜನಕ್ಕೂ ನಡುವೆ ಒಂದು ಉತ್ತರಿಸಲಾರದ ಕಂದರ ಏರ್ಪಡುತ್ತದೆ. ಅಲ್ಲವೇ ? "

" ಹೌದು. "

" ಆದ ಕಾರಣ ನೀವು ನಿಮ್ಮ ಅಂತರಂಗದ ಲೋಕಕ್ಕೆ ಇಳಿಯುತ್ತೀರಿ. ಹಗಲುಗನಸಿನ ರಾಜ್ಯದಲ್ಲಿ ಸಂಚರಿಸುತ್ತೀರಿ. ಅಲ್ಲಿಯ ಸುಖದ ಮುಂದೆ ಈ ಹೊರ ಜಗತ್ತಿನ ಸುಖ ಅಲ್ಪವೆನ್ನಿಸುತ್ತದೆ. ಒಂದು ಕ್ಷಣ ಸಿಕ್ಕಿದರೆ ಸಾಕು, ನೀವು ನಿಮ್ಮ ಆ ಒಳ ಗುಹೆಗೆ ಓಡಿಬಿಡುತ್ತೀರಿ - ಅಲ್ಲವೇ ? "

" ಹೌದು. ಆದರೆ ಇದು ನಿಮಗೆ ಹೇಗೆ ತಿಳಿಯಿತು ? "

" ನಾನೂ ಅದೇ ಅಂತರ್ಮುಖಿ ಜಾತಿಗೆ ಸೇರಿದವನು. ನಾನೂ ಒಂದು ಕಾಲದಲ್ಲಿ ಕವಿತೆ ಬರೆಯುತ್ತಿದ್ದೆ - ಚೆನ್ನಾಗಿ ಬರೆಯುತ್ತಿರಲಿಲ್ಲ - ಅಷ್ಟೆ. ಚೆನ್ನಾಗಿ ಬರೆಯಲಾರೆನೆಂಬುದು ತಿಳಿದ ತತ್‌ಕ್ಷಣ ಕವಿತೆ ಬರೆಯುವುದು ಬಿಟ್ಟು ಓದಲು ಶುರುಮಾಡಿದೆ. ಬಹುಶಃ ಕವಿಗಳೆಲ್ಲ ನಿಮ್ಮ ಹಾಗೇ ಇರುತ್ತಾರೆನ್ನಬಹುದು. "

" ಹಾಗಾದರೆ ಜನದೊಡನೆ ಬೆರೆಯುವುದನ್ನು ಕಲಿಯ ಬೇಡವೇ? ಅದು ಅಗತ್ಯವಲ್ಲವೇ ? "

" ಆದರೆ ನೋಡಿ ಮಾಧವ, ಕವಿಯೂ ಕೂಡಾ ಮನುಷ್ಯನೇ ಎಂಬು ದನ್ನು ನಾವು ಮರೆಯ ಬಾರದು. ಅವನು ಹೀಗೆ ಭಾವ ಪ್ರಧಾನ ಮನೋ ಧರ್ಮವುಳ್ಳವನಾಗಿ ಹಗಲುಗನಸು ಕಾಣುವಂಥವನಾದುದರಿಂದ ಅವನು ಕವಿತೆ ಬರೆಯಲು ಸಮರ್ಥನಾಗುತ್ತಾನೆ. ನಿಜ. ಆದರೆ ಈ ಕವಿತೆ ಎಂಬುದು ಆಕಾಶದಿಂದ ಇಳಿಯುವ ಗಂಗೆಯಲ್ಲ, ನೆಲದಿಂದಲೇ ಚಿಮ್ಮಿ ಬರುವ ಕಾರಂಜಿ— ಇದು ಮುಖ್ಯವಾದ ಮಾತು. "

" ಅಂದರೆ — ಸ್ವಲ್ಪ ಬಿಡಿಸಿ ಹೇಳುತ್ತೀರಾ ? "

" ಕಾವ್ಯ ಭಾಷೆಯಲ್ಲಿ ನಡೆಯುವ ಕೆಲಸ; ಭಾಷೆ ಯಾರದ್ದು ಹೇಳಿ? ನನ್ನದೋ — ನಿಮ್ಮದೋ? ನಮ್ಮಪ್ಪಂದೋ? ಅದು ಸಮಾಜದ್ದು. ಈ ಭಾಷೆಯೇ ಮನಸ್ಸಿನ ಭಾವನೆಗಳ ಮತ್ತು ಯೋಚನೆಗಳನ್ನು ಸೂಚಿಸುವ ಶಬ್ದಗಳ ಸಮುದಾಯ — ಅಲ್ಲವೇ? "

" ಹೌದು. "

" ಆದಕಾರಣ ಕವಿ ತನ್ನ ಮನಸ್ಸಿಗೂ, ಸಮಾಜದ ಮನಸ್ಸಿಗೂ ಸೇತುವೆ ಕಟ್ಟದೆ ಅವನು ಉತ್ತಮ ಕವಿ ಆಗಲಾರ. ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ವ್ಯವಹಾರ ನಡೆಯುತ್ತಲೇ ಇರಬೇಕು. ಸಮಾಜ ಬೆಟ್ಟದ ತಲೆಯಲ್ಲಿರುವ ಚಿಲುಮೆಯಂತೆ. ಅದನ್ನು ಬಿಟ್ಟೇ ಹೊಳೆ ಹರಿಯುತ್ತದೆ. ಆದರೆ ಹೊಳೆಯ ಸತ್ವ ಇರುವುದು ಆ ಚಿಲುಮೆಯಲ್ಲಿ. "

" ಎಂದರೆ ಈ ಭಾವಜೀವಿಯಾದ ಕವಿಯೂ ನಾಲ್ಕು ಜನದೊಡನೆ ಬೆರೆಯುವುದನ್ನು ಕಲಿಯಬೇಕು — ಅಲ್ಲವೇ? "

" ಬೆರೆಯುವುದು ಅವನ ಲೌಕಿಕ ಜೀವನದ ದೃಷ್ಟಿಯಿಂದ ಅತ್ಯಗತ್ಯ. ಆದರೆ ತಲ್ಲೀನನಾಗುವುದು ಅವನ ಕಾವ್ಯಜೀವನದ ದೃಷ್ಟಿಯಿಂದ ಅನಿವಾರ್ಯ. "

ಹೀಗೆ ಮಾತು ಒಂದೇ ಸಮನೆ ಸಾಗಿಯೇ ಇತ್ತು. ಮರಳ ದಿಬ್ಬದ ಮೇಲೆ ಕುಳಿತ ಇಬ್ಬರಿಗೂ ಸಮಯದ ಪರಿವೆಯೇ ಇಲ್ಲ. ಆಗಲೇ ಕತ್ತಲು ತೀರ ದಟ್ಟವಾಗಿತ್ತು. ಸುತ್ತಮುತ್ತ ಮನುಷ್ಯರ ಶಬ್ದವೇ ಇಲ್ಲ. ನದಿಯಲ್ಲಿ ದೋಣಿಗಳು ಓಡಾಡುವ ಸದ್ದೂ ಕೇಳಿಸುತ್ತಿರಲಿಲ್ಲ. ಅಷ್ಟರಲ್ಲಿ ತಾಲೂಕು ಕಛೇರಿಯಲ್ಲಿ ಢಣ್ ಢಣ್ ಎಂದು ಒಂಭತ್ತು ಗಂಟೆ ಬಾರಿಸಿತು. ಇಬ್ಬರೂ ಎದ್ದು ನಿಂತರು. ಅಷ್ಟು ದೂರ ಜೊತೆಗೇ ಬಂದು ತಮ್ಮ ತಮ್ಮ ನಿವಾಸಗಳ ಕಡೆ ನಡೆದರು. ಹೋಗುವ ಮೊದಲು ಮಾಧವ

" ಮತ್ತೆ ನೋಡೋಣ " ಎಂದ.

" ಅಗತ್ಯವಾಗಿ "

* * * *

ಮತ್ತೆ ಮತ್ತೆ ಅವರು ಸಂಧಿಸಿದರು. ಸಂಧಿಸಿದಾಗಲೆಲ್ಲ ಹನುಮಂತನ ಬಾಲದಂತೆ ಮಾತು ಬೆಳೆಯುತ್ತಿತ್ತು. ಆದರೆ ಒಂದೊಂದು ಸಲ ಮಾತ್ರ

ರಾಮಕೃಷ್ಣ ಬಹು ವಿಚಿತ್ರವಾಗಿ ವರ್ತಿಸುತ್ತಿದ್ದ. ಮಾತಾಡುತ್ತಿರುವಾಗಲೇ ಇದ್ದಕ್ಕಿದ್ದ ಹಾಗೆ ಸುಮ್ಮನಾಗಿ ಬಿಡುವ. ಮತ್ತೆ ಅಷ್ಟು ಹೊತ್ತು ಮಾತೇ ಇಲ್ಲ. ಮಾಧವ ಮಾತಾಡಿಸಿದರೂ 'ಹಾ, ಹೂ' ಎನ್ನುವನಲ್ಲದೆ ಸರಿಯಾಗಿ ಉತ್ತರ ಕೊಡುವುದಿಲ್ಲ.

ಒಂದು ಸಲ ಮಾತ್ರ ಪ್ರಸಂಗ ಕೊಂಚ ವಿಪರೀತಕ್ಕೇ ಇಟ್ಟು ಕೊಂಡಿತು. ಆಗ ಅವರು ಜೊತೆಯಾಗಿ ಬೀದಿಯಲ್ಲಿ ಹೋಗುತ್ತಿದ್ದರು. ಅಷ್ಟು ದಿನ ಕೂಡಿ ಮಾತಾಡಿದ್ದರೂ ಮಾಧವನಿಗೆ ಈ ಮನುಷ್ಯ ಏನು ಮಾಡು ತ್ತಿದ್ದಾನೆ ಎಂಬುದೇ ಪತ್ತೆ ಹತ್ತಿರಲಿಲ್ಲ. ಅದನ್ನು ತಿಳಿಯ ಬೇಕೆಂದು ಮಾಧವನಿಗೆ ಬಹಳ ಚಪಲ. ಅದಕ್ಕೇ ಅವನು ಕೇಳಿದ:

"ರಾಮಕೃಷ್ಣರಾಯರೇ, ನೀವು ಈಗ ಏನು ಮಾಡುತ್ತಾ ಇದ್ದೀರಿ?" ಎಂದು.

"ಹೆಣ ಹೊರೋದು — ಅಷ್ಟೇ. ಯಾಕೆ ಅಂಥ ಪ್ರಶ್ನೆ ಕೇಳುತ್ತೀರಿ? ಸ್ವಲ್ಪ ಸುಮ್ಮನಿರಿ" ಎಂದು ಬಿಟ್ಟ. ಈ ಮಾತು ಕೇಳಿ ಮಾಧವನಿಗೆ ಬಹಳ ನೋವಾಯಿತು; ಸಿಟ್ಟು ಬಂತು. ಕೂಡಲೇ

"ಹಾಗಾದರೆ ನಾನು ಹೋಗುತ್ತೇನೆ" ಎಂದು ಹೊರಟೇ ಬಿಟ್ಟ. ರಾಮಕೃಷ್ಣನೂ ಮಾಧವನನ್ನು ಮತ್ತೆ ಕರೆಯಲಿಲ್ಲ, ತನ್ನ ದಾರಿ ಹಿಡಿದು ಹೊರಟು ಹೋದ.

ಆ ಮೇಲೆ ನಾಲ್ಕೈದು ದಿನಗಳ ಕಾಲ ಅವರು ಒಬ್ಬರನ್ನೊಬ್ಬರು ಸಂಧಿಸಲಿಲ್ಲ. ಮಾಧವನ ಮನಸ್ಸು ಬಹಳ ನೊಂದಿತ್ತು. ಅಷ್ಟು ಒಳ್ಳೆಯವನಂತೆ ಕಾಣುತ್ತಿದ್ದ ಆತ ಏಕೆ ಹಾಗೆ ಆಡಿದ ಎಂಬುದೇ ಅರ್ಥವಾಗಲಿಲ್ಲ. ಅವನ ಮನಸ್ಸು ಹಾಗೆ ಹಠಾತ್ತಾಗಿ ಕೆಟ್ಟುದಕ್ಕೆ ಕಾರಣವೇನೆಂದು ಊಹಿಸಲೂ ಆಗಲಿಲ್ಲ.

ಒಂದು ದಿನ ಸಂಜೆ ಆರು ಗಂಟೆಯ ಹೊತ್ತಿಗೆ ರಾಮಕೃಷ್ಣರಾಯ ತಾನೇ ಮಾಧವನ ರೂಮಿಗೆ ಬಂದ. ಮುಖದಲ್ಲಿ ಚಿಂತೆ ಅಚ್ಚೊತ್ತಿದಂತಿತ್ತು. ಗಡ್ಡ ಇನ್ನಷ್ಟು ದಟ್ಟವಾಗಿ ಬೆಳೆದಿತ್ತು. ಕಣ್ಣು ಇನ್ನಷ್ಟು ಆಳಕ್ಕೆ ಇಳಿದು, ಇನ್ನಷ್ಟು ಉಗ್ರವಾಗಿ ಉರಿಯುತ್ತಿತ್ತು. ರಾಮಕೃಷ್ಣ ಬಂದವನೇ

"ಸ್ವಲ್ಪ ನನ್ನ ಸಂಗಡ ಹೊರಕ್ಕೆ ಬರುತ್ತೀರಾ, ಮಾಧವಾ?" ಎಂದು

ಕೇಳಿದ. ಧ್ವನಿಯಲ್ಲಿ ಸೌಜನ್ಯವಿತ್ತು, ಆತ್ಮೀಯತೆ ಇತ್ತು.

"ಆಗಲಿ, ಬರುತ್ತೇನೆ, ನಡೆಯಿರಿ" ಎಂದು ಮಾಧವ ಅವನ ಹಿಂದೆಯೇ ಹೊರಟ. ಅವನು ಮಾತಾಡದೆ ಮುಂದೆ ಮುಂದೆ ಹೋಗುತ್ತಿದ್ದ. ಮಾತಿಲ್ಲದೆ ಮಾಧವ ಅವನನ್ನು ಹಿಂಬಾಲಿಸಿ ನಡೆಯುತ್ತಿದ್ದ. ಮಾಸ್ತಿಕಟ್ಟೆಯ ತನಕ ಮುಖ್ಯ ಬೀದಿಯಲ್ಲೇ ನಡೆದು ಅಲ್ಲಿಂದ ಪಶ್ಚಿಮಕ್ಕೆ ಒಂದು ಓಣಿ ಹಿಡಿದು ರಾಮಕೃಷ್ಣ ಮುಂದುವರಿದ. "ಇನ್ನೂ ಸ್ವಲ್ಪ ದೂರ ಬನ್ನಿ" ಎಂದು ಮುಂದೆ ನಡೆದ. ಈತ ತನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತಿದ್ದಾನೆಂದು ಮಾಧವನಿಗೆ ಆಶ್ಚರ್ಯ. ಕೊಂಚ ದೂರ ಹೋದ ಬಳಿಕ ಒಂದು ಮನೆಯ ಹತ್ತಿರ ನಿಂತು ರಾಮಕೃಷ್ಣ "ಇದೇ ನಮ್ಮ ಮನೆ, ಬನ್ನಿ" ಎಂದು ಬೀದಿಯ ಬಾಗಿಲನ್ನು ತೆರೆದು ಒಳಕ್ಕೆ ಅಡಿಯಿಟ್ಟ.

ಮನೆ ತಕ್ಕಮಟ್ಟಿಗೆ ದೊಡ್ಡದೇ. ಮನೆಯ ಸುತ್ತಲೂ ಸಣ್ಣ ತೋಟ; ತೋಟದ ಸುತ್ತಲೂ ಅರ್ಧ ಆಳು ಎತ್ತರದ ಗೋಡೆ ಹೊರಗಿನಿಂದ ನೋಡು ವುದಕ್ಕೆ ಅಷ್ಟು ದೊಡ್ಡದಾಗಿ ಕಂಡರೂ ಒಳಗೆ ಅಷ್ಟು ದೊಡ್ಡದಲ್ಲ; ಆದರೂ ಅಚ್ಚುಕಟ್ಟಾದ ಮನೆ. ಅಲ್ಲಿ ಒಂದು ಕೋಣೆಯೊಳಕ್ಕೆ ರಾಮಕೃಷ್ಣ ಮಾಧವ ನನ್ನು ಕರೆದುಕೊಂಡು ಹೋದ. ಕೋಣೆಯಲ್ಲಿ ಕೊಳೆ ತುಂಬಿರಲಿಲ್ಲವಾದರೂ ಸುತ್ತಮುತ್ತಲೂ ಪುಸ್ತಕಗಳು ಚೆದರಿ ಬಿದ್ದಿದ್ದವು ಅಲ್ಲಿ ಒಂದು ಚಾಪೆ ಹಾಸಿತ್ತು. ಆ ಚಾಪೆಯ ಮೇಲೂ ಪುಸ್ತಕಗಳೇ. ಸಂಜೆ ಸಮಯವಾಗಿದ್ದುದ ರಿಂದ ಕೋಣೆಯಲ್ಲಿ ಮಸುಕು ಬೆಳಕು ಕವಿದಿತ್ತು. ಕೋಣೆಯಲ್ಲಿ ಎರಡು ಕಿಟಕಿಗಳಿದ್ದುವು. ಒಂದು ಸಂಪೂರ್ಣವಾಗಿ ತೆರೆದಿತ್ತು, ಇನ್ನೊಂದು ಅರ್ಧ ಮಾತ್ರ. ಗೋಡೆಯ ಮೇಲೆ ಎರಡು ಮೂರು ಫೋಟೋಗಳು ತೂಗಾಡು ತ್ತಿದ್ದುವು. ಆ ಮಂದವಾದ ಬೆಳಕಿನಲ್ಲಿ ಅವು ಯಾರ ಫೋಟೋಗಳೆಂದು ತಿಳಿಯುವುದು ಮಾಧವನಿಗೆ ಕಷ್ಟವಾಯಿತು. ಒಂದು ಫೋಟೋ ಮಾತ್ರ ಗಾಂಧಿಜಿಯ ಫೋಟೋವಿನಂತೆ ಕಂಡಿತು. ಗೂಟವೊಂದರ ಮೇಲೆ ಎರಡು ಮೂರು ಜುಬ್ಬಾಗಳೂ ಒಂದೆರಡು ಧೋತರಗಳೂ ಪಾಯಿಜಾಮಾಗಳೂ ತೂಗಾಡುತ್ತಿದ್ದುವು. ಒಂದು ಮೂಲೆಯಲ್ಲಿ ಒಂದು ಮೇಜು. ಮೇಜಿನ ಪಕ್ಕದಲ್ಲೇ ಪುಸ್ತಕಗಳ ಬೀರುವೊಂದು. ಮೇಜಿನ ಮೇಲೂ ಪುಸ್ತಕಗಳು ಹರಡಿದ್ದುವು. ಇದನ್ನೆಲ್ಲ ನೋಡುತ್ತ ಒಂದು ಕ್ಷಣ ಹಾಗೇ ನಿಂತ ಮಾಧವನನ್ನು

ಕುರಿತು ರಾಮಕೃಷ್ಣ "ಕೂತುಕೊಳ್ಳಿ" ಎಂದ. ಮಾಧವನಿಗೆ ಎಲ್ಲಿ ಕುಳಿತುಕೊಳ್ಳುವುದೆಂದು ತಿಳಿಯದೆ ಕೊಂಚ ಕಕ್ಕಾವಿಕ್ಕಿಯಾದುದನ್ನು ಕಂಡು ರಾಮಕೃಷ್ಣ

"ಓಹೋ, ಕೂತುಕೊಳ್ಳುವುದಕ್ಕೆ ಇಲ್ಲಿ ಸ್ಥಳವೇ ಇಲ್ಲ. ನನ್ನ ರೂಮಿನಲ್ಲಿ ಪುಸ್ತಕಗಳದೇ ಸರ್ವಾಧಿಕಾರ" ಎನ್ನುತ್ತಾ ಪುಸ್ತಕಗಳನ್ನು ಕೊಂಚ ಅತ್ತ ಸರಿಸಿ ಸ್ವಲ್ಪ ಜಾಗ ಮಾಡಿದ. ಮಾಧವ ಕುಳಿತುಕೊಂಡ. ರಾಮಕೃಷ್ಣ ಲಾಟೀನು ತೆಗೆದುಕೊಂಡು ಬತ್ತಿಗೆ ಬೆಂಕಿ ಕಡ್ಡಿ ಗೀರಿದ. ಲಾಟೀನಿನ ಮಸುಕು ಬೆಳಕು ರೂಮನ್ನೆಲ್ಲ ಬೆಳಗಿತು. ಆಗ ಆ ಕೊಠಡಿ ಪುಸ್ತಕ ರಾಕ್ಷಸನ ಗುಹೆಯಂತೆ ಕಂಡಿತು. ಅದು ರಾಮಕೃಷ್ಣನ ಮನಸ್ಸಿನಂತೆಯೇ ಅಸ್ತವ್ಯಸ್ತ. ಆ ಊರಲ್ಲಿ ಆ ಮನೆಯಲ್ಲಿ ಆ ಕೋಣೆಗೆ ಸ್ಥಳವಿಲ್ಲ ಎಂದು ತೋರಿತು. ಅದೇ ರೀತಿ ರಾಮಕೃಷ್ಣನಿಗೂ ಕೂಡಾ ಇಂಥ ಲೋಕದಲ್ಲಿ ಸ್ಥಳವಿಲ್ಲವೋ ಎನ್ನಿಸಿತು ಮಾಧವನಿಗೆ.

"ನೀವು ಬಹಳ ಓದುತ್ತಿರುವ ಹಾಗಿದೆ" ಎಂದ ಮಾಧವ.

"ಹೌದು, ಅದೂ ಒಂದು ಹುಚ್ಚು" ಎಂದು ರಾಮಕೃಷ್ಣ "ಆ ದಿನ ನೀವು ಬಹಳ ನೊಂದುಕೊಂಡಿರಬೇಕು — ಅಲ್ಲವೇ ?" ಎಂದು ಕೇಳಿದ.

"ಇಲ್ಲವೆಂದು ಹೇಳುವುದು ಹೇಗೆ ? ನೀವು ಅಷ್ಟು ಬೇಗ ಆ ರೀತಿ ಏಕಾಏಕಿ ಮನಸ್ಸು ನೋಯುವ ಮಾತಾಡಬಹುದೆಂದು ನಾನು ಕನಸಿನಲ್ಲೂ ಎಣಿಸಿರಲಿಲ್ಲ."

"ಕ್ಷಮಿಸಿ, ಮಾಧವ. ಅಂದು ನನ್ನ ಮನಸ್ಸು ತೀರಾ ಕೆಟ್ಟಿತ್ತು. ಮನಸ್ಸು ಕೆಟ್ಟಾಗ ನನ್ನಲ್ಲಿ ಅಡಗಿರುವ ಅನಾಗರಿಕತೆಯಲ್ಲ ಮೇಲಕ್ಕೇಳುತ್ತದೆ-ತಿಳಿನೀರನ್ನು ಕಲಕಿದರೆ ಕೊಳೆಯೇ ಮೇಲಕ್ಕೇರುವಂತೆ."

"ಅಷ್ಟು ಮನಸ್ಸು ಕೆಡುವಷ್ಟು ಏನು ನಡೆದಿತ್ತು- ಕೇಳಬಹುದೇ ?"

"ನಾನು ಈಗ ಏನು ಮಾಡುತ್ತಿದ್ದೇನೆ ಎಂದು ನೀವು ಆ ದಿನ ಪ್ರಶ್ನೆ ಕೇಳಿದಿರಿ, ಅದಕ್ಕೆ ಈಗ ಉತ್ತರ ಹೇಳುತ್ತೇನೆ, ಬನ್ನಿ" ಎಂದವನೆ ರಾಮಕೃಷ್ಣ ದೀಪವನ್ನು ಆರಿಸಿ ಬಿಟ್ಟು ಕೈಯಲ್ಲೊಂದು ಟಾರ್ಚು ಹಿಡಿದುಕೊಂಡು ಎದ್ದು ಬಾಗಿಲ ಕಡೆ ನಡೆದ. ಇದೇನು ಹೀಗೆ ಹೊರಟೇ ಬಿಟ್ಟನಲ್ಲ ಆಸಾಮಿ ಎಂದು ಕೊಳ್ಳುತ್ತ ಮಾಧವ ಅವನನ್ನು ಹಿಂಬಾಲಿಸಿದ. ಅವರು ತೋಟವನ್ನು ದಾಟಿ

ಮನೆಯಿಂದ ಹೊರಟು ಬೀದಿಗಿಳಿದರು.

ಬೀದಿ ತುಂಬ ಕತ್ತಲು ಕವಿದಿತ್ತು. ಕೃಷ್ಣಪಕ್ಷದ ರಾತ್ರಿ ಆ ಓಣಿಯಲ್ಲಿ ಬೀದಿದೀಪ ಕೂಡ ಇಲ್ಲ. ಸರಸರನೆ ಹೋಗುತ್ತಿದ್ದ ರಾಮಕೃಷ್ಣನನ್ನು ಬಹಳ ಕಷ್ಟದಿಂದಲೇ, ಆಗೀಗ ಎಡವುತ್ತ, ಮುಗ್ಗರಿಸುತ್ತ ಮಾಧವ ಹಿಂಬಾಲಿಸಿದ. ಹೊರಗಡೆ ಗಾಳಿ ಹಿತವಾಗಿ ಬೀಸುತ್ತಿತ್ತು. ಆಕಾಶದಲ್ಲಿ ಒಂದು ಮೋಡವೂ ಕಾಣಲಿಲ್ಲ. ಒಂದೂ ಇಲ್ಲ ಎನ್ನುವ ಹಾಗೆ ದೂರದಲ್ಲಿ ದಿಗಂತದ ಹತ್ತಿರ ಒಂದೆರಡು ಬಿಳಿ ಮೋಡದ ತುಂಡುಗಳು ತೇಲುತ್ತಿದ್ದುವು. ಅದು ಬಿಟ್ಟರೆ ಆಕಾಶ ನೀಲವಾಗಿ ಬಾಗಿತ್ತು. ಅವರು ಓಣಿಯನ್ನು ದಾಟಿ ರಾಜಬೀದಿಗೆ ಬಂದರು. ರಾಜಬೀದಿಯಿಂದ ರಾಮಕೃಷ್ಣ ನೇರವಾಗಿ ದಕ್ಷಿಣಕ್ಕೆ ಮುಖ ತಿರುಗಿಸಿ ನಡೆಯ ತೊಡಗಿದ. ಊರಾಚೆಗೆ ಇರುವ ವಿಸ್ತಾರವಾದ ಬಯಲು ನರಿಬೇಣ ಬಂತು. ಒಂದು ಭಾಗ ತಗ್ಗು ಇನ್ನೊಂದು ಭಾಗ ಏರು ಆಗಿದ್ದರೂ ಆ ಬಯಲೇ ಆ ಊರಿನ ಹೈಸ್ಕೂಲಿಗೆ ಆಟದ ಬಯಲು. ಅಲ್ಲೇ ಸಂಜೆ ಹೊತ್ತು ಹುಡುಗರು ಫುಟ್‌ಬಾಲ್ ಆಡುತ್ತಿದ್ದರು. ಆಗಲೇ ಏಳುಗಂಟೆ ಆಗಿ ಹೋಗಿದ್ದರಿಂದ ನರಿ ಬೇಣದಲ್ಲಿ ಆಟಗಾರರ ತಂಡ ಇರಲಿಲ್ಲ. ಅಲ್ಲಲ್ಲಿ ಊದಿಕೊಂಡಿದ್ದ ಮರಳ ದಿಣ್ಣೆಗಳ ಮೇಲೆ ಒಬ್ಬಿಬ್ಬರು ಕುಳಿತು ' ಪಟ್ಟಾಂಗ ಸೇವೆ ' ನಡಸುತ್ತಿದ್ದರು. ಬೇಣದ ಮಧ್ಯದಲ್ಲಿ ಒಂದು ಕಾಲು ಹಾದಿ ಪಶ್ಚಿಮಕ್ಕೆ ತಿರುಗುತ್ತದೆ. ಬೇಣದ ಪಶ್ಚಿಮ ಸರಹದ್ದಿನಲ್ಲಿ ಮರಗಳು ಒತ್ತೊತ್ತಾಗಿ ಬೆಳೆದು ನಿಂತ ಹಾಡಿಯೊಂದಿದೆ. ಅದನ್ನು ದಾಟಿ ರಾಮಕೃಷ್ಣ ಮುಂದುವರಿದ. ಯಥಾಪ್ರಕಾರ ಮಾಧವನೂ ಹಿಂಬಾಲಿಸಿದ. ಆ ಕಡೆ ಭೂತಗಳ ಹಾವಳಿ ಹೆಚ್ಚು ಎಂದು ಎಲ್ಲ ಹುಡುಗರೂ ಬಲ್ಲರು. ಕತ್ತಲಾದ ಮೇಲೆ ಆ ಕಡೆ ಹೋಗುತ್ತಿದ್ದವರು ಬಹಳ ಅಪರೂಪ. ಭೂತಗಳ ಭಯವನ್ನು ಮನಸ್ಸು ಅಲ್ಲ ಗಳೆದು ಎಷ್ಟೋ ಕಾಲ ಕಳೆದಿದ್ದರೂ ಆ ಕಡೆ ಬಂದಾಗ ಮಾಧವನ ಎದೆ ಕೊಂಚ ಧಸಕ್ಕೆನ್ನದೆ ಇರಲಿಲ್ಲ. ಅಷ್ಟು ಹೊತ್ತಿಗೆ ಎಲ್ಲಿಂದಲೋ ಮೋಡಗಳು ಬಂದು ಆಕಾಶವನ್ನು ಕವಿದು ಕತ್ತಲು ನಾಲ್ಮಡಿಯಾದಂತೆ ಕಂಡಿತು. ಹಾಡಿ ಯನ್ನು ದಾಟಿ ಆಚೆ ಗದ್ದೆಗಿಳಿದು ಇಬ್ಬರೂ ಗದ್ದೆಯ ಅಂಚಿನ ಮೇಲೆ ಕೊಂಚ ದೂರ ನಡೆದರು. ಅಲ್ಲಿ ಒಂದು ಹಕ್ಕಲು ಸಿಕ್ಕುತ್ತದೆ. ಅದರಲ್ಲಿ ಒಂದೆರಡು ಹುಣಿಸೆ ಮರ ಬಿಟ್ಟರೆ ಇನ್ನೇನೂ ಇಲ್ಲ. ಆ ಹಕ್ಕಲ ಮಧ್ಯದಲ್ಲಿ ಒಂದು

ಮನೆ. ಆ ಕತ್ತಲಲ್ಲಿ ಅದು ಒಂದು ಮನೆಯ ಹಾಗೆ ಕಂಡಿತು ಅಷ್ಟೆ. ಹತ್ತಿರ ಹೋದಾಗ ಅದರ ನಿಜಸ್ವರೂಪ ತಿಳಿಯಿತು. ಒಂದು ಕಾಲದಲ್ಲಿ ಅದು ಮನೆಯಾಗಿತ್ತು, ಆದರೆ ಈಗ ಅದು ಮನೆಯ ಅವಶೇಷ ಮಾತ್ರ. ಮೇಲಿನ ಮಹಡಿ ಕುಸಿದು ಬಿದ್ದು ಬಹಳ ಕಾಲ ಕಳೆದಿರಬೇಕು. ಗೋಡೆಗಳು ಮಾತ್ರ ಇನ್ನೂ ಭದ್ರವಾಗಿದ್ದಂತೆ ಕಂಡವು. ಹೊರಗೋಡೆಯಲ್ಲಿ ಅಲ್ಲಲ್ಲಿ ಬಿರುಕು ಬಿಟ್ಟಿದ್ದರೂ ಗೋಡೆ ಗಟ್ಟಿಮುಟ್ಟಾಗಿಯೇ ಇತ್ತು. ಮನೆಯ ಮುಂಬಾಗಿಲು ಮುಕ್ತದ್ವಾರವಾಗಿತ್ತು. ಬಿದ್ದು ಹೋಗಿದ್ದ ಬಾಗಿಲನ್ನು ಯಾರೋ ಪುಣ್ಯಾತ್ಮರು ಹೊತ್ತುಕೊಂಡು ಹೋಗಿರಬೇಕು. ಮುಂದಿನ ಬಾಗಿಲ ಮೂಲಕ ಇಬ್ಬರೂ ಒಳ ಹೊಕ್ಕರು. ಆ ಹಾಳು ಮನೆಯಲ್ಲಿ ಸುಯ್ಯೆಂದು ಬೀಸುತ್ತಿದ್ದ ಗಾಳಿ ಅಳುತ್ತಿದ್ದಂತೆ ತೋರಿತು. ಮನೆಯ ಹಿಂಭಾಗದಲ್ಲಿ ಏನೋ ಕಟಕಟ ಪಟಪಟ ಸದ್ದಾಗಿ ಮಾಧವ ಕೊಂಚ ನಡುಗಿದ. ಟಾರ್ಚ್ ಹೊತ್ತಿಸಿ ಹಿಡಿದಿದ್ದ ರಾಮು ಕೃಷ್ಣ ಅದನ್ನು ಗಮನಿಸಿ " ಹೆದರಬೇಡಿ; ಅದು ಇಲಿ ಹೆಗ್ಗಣಗಳ ಸಂಚಾರ ಅಷ್ಟೆ " ಎಂದ.

ಟಾರ್ಚಿನ ಬೆಳಕಿನಲ್ಲಿ ಮನೆಯ ಒಂದು ಪಕ್ಕದಲ್ಲಿ ಒಂದು ಕೋಣೆಯ ಬಾಗಿಲು ಕಾಣಿಸಿತು. ಆ ಬಾಗಿಲು ಭದ್ರವಾಗಿಯೇ ಕಂಡಿತು. ಅದಕ್ಕೆ ತುಕ್ಕು ಹಿಡಿದ ಒಂದು ಹಳೆಯ ಬೀಗ ಹಾಕಿತ್ತು. ರಾಮುಕೃಷ್ಣ ತನ್ನ ಜುಬ್ಬದ ಕಿಸೆಯಿಂದ ಒಂದು ಬೀಗದ ಕೈ ತೆಗೆದು ನಿರಾಯಾಸವಾಗಿ ಆ ಬೀಗ ತೆಗೆದು ಬಾಗಿಲನ್ನು ಒಳಕ್ಕೆ ತಳ್ಳಿದ. ಆ ಕೋಣೆಯಿಂದ ಒಂದು ಬಗೆಯ ಉಸಿರು ಕಟ್ಟಿಸುವ ಗಾಳಿ ಹೊರ ಬಂತು. ಎಷ್ಟೋ ದಿನಗಳಿಂದ ಅದರ ಕಿಟಕಿಗಳನ್ನು ತೆರೆದಂತೆಯೇ ಕಾಣಲಿಲ್ಲ. ರಾಮುಕೃಷ್ಣ ಒಂದು ಬೆಂಕಿ ಕಡ್ಡಿ ಗೀರಿ ಅಲ್ಲೇ ಮೂಲೆಯಲ್ಲಿದ್ದ ಲ್ಯಾಂಪೊಂದನ್ನು ಹೊತ್ತಿಸಿದ. ಹೊತ್ತಿಸುವ ಮೊದಲು ಆ ಬಾಗಿಲನ್ನು ಹಾಕಿ ಚಿಲಕ ಹಾಕಿಕೊಳ್ಳಲು ಮರೆತಿರಲಿಲ್ಲ. ಎಲ್ಲ ಕೆಲಸವೂ ಬಹು ದಿನದ ಅಭ್ಯಾಸದ್ದು ಎಂಬ ಹಾಗೆ ಸಹಜವಾಗಿ ನಡೆಯಿತು.

ಕುತ್ತಿಗೆತನಕ ಮಸಿ ಮೆತ್ತಿದ್ದ ಆ ಲ್ಯಾಂಪಿನಿಂದ ಹೊರಟ ಕುರುಡು ಬೆಳಕು ತುಂಬಿದ್ದ ದಟ್ಟ ಕತ್ತಲಿನೊಡನೆ ಹೋರಾಡ ತೊಡಗಿತು. ಕೋಣೆಯ ಒಳಗಡೆ ಒಂದು ಹರಕು ಚಾಪೆ. ಚಾಪೆಯ ಮೇಲೂ ಕೆಳಗೂ ಸುತ್ತಲೂ ರಸ್ತೆಯ ಕೆಂಪು ಧೂಳು ಕವಿದಿತ್ತು. ಆ ಕೊಠಡಿಗೆ ಚಾಮರ ಸೇವೆ ನಡೆಯದೆ

ಎಷ್ಟು ಕಾಲ ಸಂದಿತ್ತೋ! ಮೂಲೆಯಲ್ಲಿ ಕಟ್ಟಿದ್ದ ಜೇಡದ ಬಲೆಗಳು ನೆಲದ ತನಕವೂ ಜೋಲುತ್ತಿದ್ದುವು. ಒಂದು ಮೂಲೆಯಲ್ಲಿ ಬಿಳಿ ಕಾಗದದ ಕೆಲವು ಹಾಳೆಗಳು ಕಂಡವು. ಇನ್ನೊಂದು ಮೂಲೆಯಲ್ಲಿ ಬಟ್ಟೆ ಮುಚ್ಚಿದ್ದ ಏನೋ ಒಂದು ಇತ್ತು; ಅದು ಏನು ಎಂದು ಹೇಳಲು ಸಾಧ್ಯವಿರಲಿಲ್ಲ. ಇಷ್ಟಲ್ಲದೆ ಅಲ್ಲಿ ಇನ್ನೇನೂ ಇರಲಿಲ್ಲ. ಅಲ್ಲಲ್ಲಿ, ಕೋಣೆಯಲ್ಲೆಲ್ಲ ಹರಿದ ಕಾಗದದ ಚೂರುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ರಾಮಕೃಷ್ಣ ದೀಪ ಹಚ್ಚಿ ಚಾಪೆಯ ಮೇಲೆ ಕುಳಿತುಕೊಂಡು ಮಾಧವನಿಗೂ ಪಕ್ಕದಲ್ಲೇ ಕುಳಿತುಕೊಳ್ಳುವಂತೆ ಹೇಳಿ

" ನೋಡಿದಿರಾ, ಇದು ಈ ರೂಮು ಏನು ಗೊತ್ತಾಯಿತೇ ? " ಎಂದ.

" ಇಲ್ಲ, ಗೊತ್ತಾಗಲಿಲ್ಲ. ಹಾಳುಮನೆಯ ಕತ್ತಲ ಕೋಣೆ ಅಂತ ಮಾತ್ರ ತಿಳಿಯುತ್ತದೆ. ಕಲ್ಕತ್ತೆಯ ಆ ಕತ್ತಲ ಕೋಣೆ ಹೀಗೇ ಇದ್ದಿರಬಹುದು — ಅಲ್ಲವೇ ? "

" ಹಾ, ಹಾ; ಈ ಕತ್ತಲ ಕೋಣೆಯೇ ನನ್ನ ಕರ್ಮಶಾಲೆ. ಸದ್ಯಕ್ಕೆ ನಾನು ಮಾಡುವ ಕೆಲಸ ಇಲ್ಲೇ ನಡೆಯುತ್ತದೆ " ಎಂದು ರಾಮಕೃಷ್ಣ ನಸುನಕ್ಕ.

" ಇಲ್ಲಿ ಅದೇನು ಕೆಲಸ ಮಾಡುತ್ತೀರಪ್ಪಾ ? ಭೂತ ಎಬ್ಬಿಸುವ ಕೆಲಸವೋ ? " ಎಂದು ಮಾಧವನೂ ನಕ್ಕ.

" ಸರಿಯಾಗಿಯೇ ಹೇಳಿದಿರಿ. ಇಲ್ಲಿ ನಾನು ಒಂದು ಜಾತಿಯ ಭೂತಗಳನ್ನು ಎಬ್ಬಿಸುತ್ತೇನೆಂಬುದು ನಿಜ. ಆದರೆ ಆ ಭೂತಗಳಿಂದ ಜನಕ್ಕೆ ಏನೂ ಭಯವಿಲ್ಲ, ಸರಕಾರಕ್ಕೆ ಮಾತ್ರ. " ಈ ಎಲ್ಲ ಮಾತುಗಳು ಅರ್ಥವಾಗದೆ ಮಾಧವ ಕಣ್ಣುಕಣ್ಣು ಬಿಟ್ಟು ನೋಡುತ್ತ ಕುಳಿತ. ನಿಜವಾಗಿಯೂ ಈ ಮನುಷ್ಯ ಹುಚ್ಚನೇ ಇರಬಹುದೇ ? ಇಂಥ ಹಾಳುಮನೆಯಲ್ಲಿ ರಾತ್ರಿ ಹೊತ್ತು ಅದೆಂಥ ಕೆಲಸ ಇರಬಹುದಪ್ಪಾ ಎಂದು ಮಾಧವ ಯೋಚಿಸುತ್ತಿರುವಾಗಲೇ

" ನೋಡಿದಿರಾ ? ಆ ಮೂಲೆಯಲ್ಲಿ ಬಟ್ಟೆ ಮುಸುಕು ಹಾಕಿಕೊಂಡು ಕುಳಿತಿರುವ ಅದು ಏನು ಅಂತ ? " ಎಂದು ರಾಮಕೃಷ್ಣ ಹೇಳಿದ.

" ನೋಡಿದೆ. ಆದರೆ ಬಟ್ಟೆ ಮುಸುಕು ತೆಗೆಯದೆ ಅದರ ಮುಖದ

ಗುರುತು ಹತ್ತುವುದು ಹೇಗೆ?" ಎಂದು ಮಾಧವ ಕೇಳಿದ. ರಾಮಕೃಷ್ಣ ಮೆತ್ತಗೆ ಆ ವಸ್ತುವಿನ ಕಡೆಗೆ ಸರಿದು, ಅದನ್ನು ಮುಚ್ಚಿದ್ದ ಬಟ್ಟೆಯನ್ನು ಮೇಲಕ್ಕೆತ್ತಿದ. ಒಳಗಡೆ ಒಂದು ಸೈಕ್ಲೋಸ್ಟೈಲ್ ಯಂತ್ರ ಅಡಗಿ ಕುಳಿತಿದ್ದುದು ಬೆಳಕಿಗೆ ಬಂತು. ಮಾಧವನಿಗೆ ಈಗ ಈ ಕತ್ತಲ ಕೋಣೆಯ ರಹಸ್ಯ ಕೊಂಚಕೊಂಚವಾಗಿ ತಿಳಿಯಿತು.

"ನೀವು 'ಸಂಗ್ರಾಮ' ಎಂಬ ಆ ಕರಪತ್ರ ನೋಡಿದ್ದೀರಾ?"

"ನೋಡದೆ ಉಂಟೆ? ಅದು ಪ್ರಿಂಟಾಗುವ ಸ್ಥಳ ಇದೇ. ಅಲ್ಲವೇ?"

"ಇದು ನಮ್ಮ ಮುದ್ರಣಾಲಯ; ಆ ಕರಪತ್ರದ ಸಂಪಾದಕನೂ ಪ್ರಕಾಶಕನೂ ನಾನೇ."

"ನೀವೊಬ್ಬರೇ ಈ ಕೆಲಸವನ್ನೆಲ್ಲ ಮಾಡುತ್ತಿದ್ದೀರಾ?"

"ನನಗೆ ಇಬ್ಬರು ಸಹಾಯಕರಿದ್ದಾರೆ. ಒಬ್ಬರು ಮುದ್ರಕರು, ಇನ್ನೊಬ್ಬರು ಪತ್ರವನ್ನು ಹಂಚುವವರು; ಪತ್ರವನ್ನು ಹಂಚುವವ ಈಗ ಹದಿನೈದು ದಿನಗಳ ಹಿಂದೆ ಪೋಲೀಸರ ಕೈಗೆ ಸಿಕ್ಕಿಬಿದ್ದ: ಅಂದಿನಿಂದ ಮುದ್ರಕನೇ ಹಂಚುಗಾರನಾಗಿದ್ದಾನೆ; ನಾನು ಮುದ್ರಣದ ಕೆಲಸವನ್ನು ವಹಿಸಿಕೊಂಡಿದ್ದೇನೆ."

"ಪೋಲೀಸರ ಕಾಟ ತಟ್ಟಲಿಲ್ಲವೇ ನಿಮಗೆ?"

"ತಟ್ಟದೇ ಉಂಟೇ? ಆದರೆ ಈ ವರೆಗೂ ನಮ್ಮ ಈ ಕಾರ್ಯಾಲಯದ ಪತ್ತೆ ಅವರಿಗೆ ಹತ್ತಿಲ್ಲ. ಊರಿನೊಳಗೆ ಸಂಶಯ ಕಂಡ ಎಲ್ಲ ಸ್ಥಳಗಳನ್ನೂ ಶೋಧಿಸಿದ್ದಾರೆ. ಈ ಹಾಳುಮನೆಯ ಕಡೆ ಅವರ ದೃಷ್ಟಿ ಬಿದ್ದಿಲ್ಲ. ನಮ್ಮ ನಾರಾಯಣ ಅವರ ಕೈಗೆ ಸಿಕ್ಕಿದಾಗ ಮಾತ್ರ ನಮಗೆ ಕೊಂಚ ಹೆದರಿಕೆ ಇತ್ತು. ಹುಡುಗನನ್ನು ಹಿಂಸಿಸಿ ಗುಟ್ಟೆಲ್ಲ ತಿಳಿದುಕೊಳ್ಳುವರೋ ಅಂತ. ಆದರೆ ನಾರಾಯಣ ಧೀರ, ಹೇಡಿಯಲ್ಲ. 'ಹಂಚುವುದು ನನ್ನ ಕೆಲಸ; ಅದನ್ನು ಎಲ್ಲಿ ಬರೆಯುತ್ತಾರೋ ನನಗೆ ತಿಳಿಯದು. ಅದನ್ನು ನನಗೆ ಯಾರು ಕೊಡುತ್ತಾರೋ — ನಾನು ನಿಮಗೆ ಹೇಳುವುದಿಲ್ಲ. ಬೇಕಾದ್ದು ಮಾಡಿ' ಎಂದು ಬಿಟ್ಟನಂತೆ."

"ನಿಮ್ಮ ಮೇಲೆ ಪೋಲೀಸರಿಗೆ ಸಂಶಯವಿಲ್ಲವೇ?"

"ಉಂಟು. ಆದರೆ ನಾನು ಹೆಚ್ಚು ಮಾತಾಡುವವನಲ್ಲ: ನನ್ನ

ಗುಟ್ಟು ಇನ್ನೂ ಅವರಿಗೆ ತಿಳಿದಿಲ್ಲ.. ಜಿಲ್ಲಾ ಕಾಂಗ್ರೆಸ್ ಕಮಿಟಿಯ ಸದಸ್ಯ ನಾನು ಎಂಬುದಷ್ಟು ಅವರಿಗೆ ತಿಳಿದಿದೆ. ಕುಂದಾಪುರದಲ್ಲಿ ಕುಳಿತು ಅಪ್ಪನ ಆಸ್ತಿ ಕರಗಿಸುತ್ತಾ ಪುಸ್ತಕದ ಹುಳುವಾಗಿ ಬಿದ್ದಿದ್ದಾನೆ ಎಂದು ಅವರ ಅಭಿಪ್ರಾಯ. "

" ನೀವು ಈ ಕೆಲಸವನ್ನು ಎಷ್ಟು ದಿನಗಳಿಂದ ಮಾಡುತ್ತ ಬಂದಿದ್ದೀರಿ?" ಮಾಧವ ಕೇಳಿದ.

" ಈಗ ಐದಾರು ತಿಂಗಳಿಂದ ಇದೇ ಕೆಲಸ. ನನಗೋ ಬೇಜಾರು ಬಂದಿದೆ. ಈ ಕೆಲಸವೇನೋ ನಡೆಯಬೇಕಾದದ್ದೇ. ಪತ್ರಿಕೆಗಳ ಮೇಲೆಲ್ಲ ಸರಕಾರ ಪ್ರತಿಬಂಧಕ ಹಾಕಿರುವುದರಿಂದ ನಿಜ ಸಮಾಚಾರ ತಿಳಿಸಲು " ಸಂಗ್ರಾಮ " ದಂಥ ಕರಪತ್ರಗಳು ಅಗತ್ಯ. ಆದರೆ ಇದು ತೀರ ಜಡ ಜೀವನ. ಇಲ್ಲಿ ಯಾವ ಚಳುವಳಿಯೂ ಇಲ್ಲ. ಸತ್ಯಾಗ್ರಹ ಆರಂಭವಾದ ಹೊಸತರಲ್ಲಿ ಕೆಲವರು ಜೈಲಿಗೆ ಹೋದರು. ಆ ಮೇಲೆ ಎಲ್ಲ ತಣ್ಣಗೆ. ಈ ಜಡ ಜೀವನ ನನಗೆ ಬಹಳ ಬೇಸರವಾಗಿದೆ. "

" ಈ ಕೆಲಸ ಬಿಟ್ಟು ಇನ್ನೇನು ಮಾಡಬೇಕಂತ ನಿಮ್ಮ ಆಶೆ ? "

" ನೇರವಾಗಿ ಸತ್ಯಾಗ್ರಹದಲ್ಲಿ ನಾನು ಭಾಗವಹಿಸದೆ ಗತ್ಯಂತರವಿಲ್ಲ. ಆ ಅವಕಾಶವನ್ನು ಕೇಳಿ ಸತ್ಯಾಗ್ರಹದ ಸರ್ವಾಧಿಕಾರಿಗಳಿಗೆ ಬರೆದಿದ್ದೇನೆ. ನಿಮ್ಮನ್ನು ಈ ಹಿಂದೆ ನೋಡಿದೆನಲ್ಲ ಆ ದಿನವೇ ನನಗೆ ಕಾಗದ ಬಂದಿತ್ತು- " ಸದ್ಯ ಬೇಡ " ಅಂತ. ಅದರಿಂದ ನನಗೆ ತುಂಬ ನಿರಾಶೆಯಾಗಿತ್ತು, ಕೋಪವೂ ಬಂದಿತ್ತು. ಆದರೆ ಇಂಥ ಸಂಗ್ರಾಮಕಾಲದಲ್ಲಿ ಪ್ರತಿಯೊಬ್ಬ ಸಿಪಾಯಿಯೂ ತನ್ನ ತನ್ನ ಮೇಲಧಿಕಾರಿಗಳಿಗೆ ವಿಧೇಯನಾಗಿರಲೇ ಬೇಕು. ಅದಕ್ಕಾಗಿ ಸುಮ್ಮನಿದ್ದೇನೆ " ಎಂದು ರಾಮಕೃಷ್ಣರಾಯ ಸುಮ್ಮನಾದ.

ಸ್ವಲ್ಪ ಹೊತ್ತು ಬಿಟ್ಟು ಮಾಧವ, " ರಾಮಕೃಷ್ಣರಾಯರೇ, ನಾನು ನಿಮ್ಮನ್ನೊಂದು ಮಾತು ಕೇಳಲೇ ? " ಎಂದ.

" ಅದಕ್ಕೇನಂತೆ ಕೇಳಿ. "

" ನಿಮ್ಮ ಈ ' ಸಂಗ್ರಾಮ ' ದ ಮುದ್ರಣ ಕಾರ್ಯ ನನಗೆ ವಹಿಸಿ ಬಿಡಿ. "

ಈ ಮಾತು ಕೇಳಿ ರಾಮಕೃಷ್ಣ ಕೊಂಚ ಹೊತ್ತು ಮಾತಾಡಲಿಲ್ಲ.

ಅವನು ಏನೋ ಚಿಂತೆಯಲ್ಲಿ ಮುಳುಗಿದ್ದಂತೆ ಕಂಡಿತು. ಆ ಮೇಲೆ ಅವನು ದೃಢಸ್ವರದಲ್ಲಿ " ಮಾಧವಾ, ನಿಮಗೆ ಈ ಹುಚ್ಚು ಬೇಡ " ಎಂದ. ಮುಂದೆ ಮಾತಾಡಲು ಸಾಧ್ಯವಿಲ್ಲ ಎನ್ನುವಂತೆ ರಾಮಕೃಷ್ಣ ಮಾತಾಡಿದ್ದ. ಆದರೂ ಮಾಧವ

" ಇದು ಹುಚ್ಚು ಹೇಗೆ ? ನನಗೂ ದೇಶಸೇವೆಗೆ ಕೊಂಚ ಅವಕಾಶ ಸಿಗಬಾರದೆ ? ಸಂಜೆ ಹೊತ್ತು ನನಗೆ ಇನ್ನೇನು ಕೆಲಸ ? ಈ ಕೆಲಸ ನಾನು ಏಕೆ ಮಾಡಬಾರದು ? "

" ನಿಮಗೆ ವಿದ್ಯೆಯಲ್ಲಿ ಪ್ರೀತಿಯುಂಟೋ ಇಲ್ಲವೋ ? "

" ಉಂಟು. "

" ನಿಮ್ಮ ಈ ವಯಸ್ಸಿನಲ್ಲಿ ನಿಮ್ಮ ಮನಸ್ಸು ವಿದ್ಯೆಯಲ್ಲಿ ಮಾತ್ರ ಮಗ್ನ ವಾಗಬೇಕು. ಇನ್ನು ಯಾವ ಹವ್ಯಾಸಕ್ಕೂ ಕೈ ಹಾಕ ಕೂಡದು. "

" ಏಕೆ ? ದೇಶಸೇವೆಯ ಈ ಅಲ್ಪ ಕಾರ್ಯವನ್ನು ಮಾಡಿದರೆ ಏನು ತೊಂದರೆ ? "

" ತೊಂದರೆ ಏನು ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಆದರೆ ಈ ಕೆಲಸ ಮನಸ್ಸನ್ನೆಲ್ಲ ಆವರಿಸುವ ಕೆಲಸ, ಮೈ ಮರೆಯಿಸುವ ಕೆಲಸ. ಇಂಥ ಕೆಲಸ ಈಗ ನಿಮಗೆ ಖಂಡಿತ ಬೇಡ. ನೀವು ಬೆಳೆಯ ಬೇಕು, ನಿಮ್ಮ ಕವಿತ್ವ ಶಕ್ತಿಯೂ ಬೆಳೆಯ ಬೇಕು. ಆ ರೀತಿಯಿಂದ ನೀವು ಇನ್ನೂ ದೊಡ್ಡ ಸೇವೆ ಮಾಡಲು ಸಾಧ್ಯವಾಗುತ್ತದೆ. "

" ದೇಶ ಹೋರಾಟದಲ್ಲಿ ಮುಳುಗಿರುವಾಗ ಈ ದೇಶದ ಮಕ್ಕಳು ಯಾರೇ ಆಗಲಿ ಸುಮ್ಮನೆ ಕುಳಿತುಕೊಳ್ಳಬಹುದೇ ? "

" ಸುಮ್ಮನೆ ಕುಳಿತುಕೊಳ್ಳದೆ ಏನು ಆತ್ಮಹತ್ಯ ಮಾಡಿಕೊಳ್ಳುತ್ತೀರಾ ? ನಾನು ಹೇಳುವ ಮಾತು ಕೇಳುತ್ತೀರಾ, ಮಾಧವ. ನನ್ನ ಮಾತನ್ನು ನೀವು ನಂಬುವಿರಾ ? "

" ನಿಮ್ಮ ಮಾತನ್ನು ನಂಬದೆ ಹೇಗೆ ? "

" ನಿಮಗೆ ಈಗ ಸಿಪಾಯಿಯಾಗುವ ವಯಸ್ಸಲ್ಲ. ಆ ಮೇಲೂ ಕೂಡಾ ನೀವು ಸಿಪಾಯಿಯಾಗಲಾರಿರಿ. ಆಗಬಾರದೆಂದೇ ನನ್ನ ಇಷ್ಟ. ಕಲೆಯ ಶಕ್ತಿಯುಳ್ಳ ನೀವು ನಿಮ್ಮ ಮನಸ್ಸಿನ ಸ್ವಾತಂತ್ರ್ಯವನ್ನು ಸದಾ ಕಾಪಾಡಿಕೊಳ್ಳ

ಬೇಕು — ತಿಳಿಯಿತೆ ? ಈ ಮಾತನ್ನು ನೀವು ಎಂದೂ ಮರೆಯಬೇಡಿ. ”

“ ಆದರೆ — ”

“ ಆದರೆ ಗೀದರೆ ಏನೂ ಇಲ್ಲ ” ಎಂದು ರಾಮಕೃಷ್ಣ ಮಾಧವನ ಹೆಗಲ ಮೇಲೆ ಕೈಯಿಟ್ಟು ಅವನ ಕಣ್ಣುಗಳನ್ನು ಎವೆಯಿಕ್ಕದೆ ನೋಡಿದ. ಮಾಧವ ಕತ್ತೆತ್ತಿ ನೋಡಿದಾಗ ರಾಮಕೃಷ್ಣನ ಕಣ್ಣುಗಳು ಹನಿಗೂಡಿದ್ದುದು ಕಂಡು ಬಂತು. “ ಮಾಧವಾ, ನಿಮ್ಮಲ್ಲಿ ನನಗೆ ಹೇಳಲಾರದಷ್ಟು ಪ್ರೀತಿ ಹುಟ್ಟಿ ಬೆಳೆದಿದೆ. ನೀವು ರೂಮಿಗೆ ಹೋಗಿ ಪುಸ್ತಕ ಹಿಡಿಯಿರಿ ” ಎಂದು ಅವನು ಎದ್ದು ನಿಂತು ತುಕ್ಕು ಹಿಡಿದ ಬೀಗವನ್ನು ಕೈಯಲ್ಲಿ ಹಿಡಿದುಕೊಂಡು ದೀಪವನ್ನು ಆರಿಸಿ ಆ ಹಾಳು ಕೋಣೆಯಿಂದ ಹೊರಬಿದ್ದ. ಹೊರಗೆ ಕತ್ತಲು ಇನ್ನಷ್ಟು ದಟ್ಟವಾಗಿತ್ತು. ಹೊರಗೆ ಬಂದ ಒಂದು ಕ್ಷಣ ಏನೂ ಕಾಣಿಸಲಿಲ್ಲ. ಆದರೂ ಮಾಧವ ರಾಮಕೃಷ್ಣನನ್ನು ಅನುಸರಿಸಿ ಅಲ್ಲಿಂದ ಹೊರಟ. ಹೊರಗೆ ಗಾಳಿ ಸುಖವಾಗಿ ಬೀಸಿತು; ನಕ್ಷತ್ರಗಳ ಮಂದಪ್ರಕಾಶ ದಾರಿಯನ್ನು ಅಸ್ಪಷ್ಟವಾಗಿ ತೋರಿತು. ದೂರದ ಮರದಲ್ಲಿ ಗೂಬೆಯೊಂದು ಘೂಕ್ಕೆಂದಿತು. ಹತ್ತಿರದ ಬೇಲಿಯಲ್ಲಿ ಏನೋ ಸರಸರ ಎಂದು ಹರಿದು ಹೋಯಿತು. ಸ್ವಲ್ಪ ದೂರದಿಂದ ನಾಯಿಯೊಂದು ಎಡೆಬಿಡದೆ ಬೊಗಳುತ್ತಿತ್ತು. ಆದರೆ ಇದಾವುದೂ ಮಾಧವನ ಮನಸ್ಸನ್ನು ಸೆಳೆಯಲಿಲ್ಲ. ಅವನು ಮೌನವಾಗಿ ನಡೆಯುತ್ತ ರಾಮಕೃಷ್ಣ ರಾಯನ ಮಾತುಗಳನ್ನೇ ಮೆಲುಕು ಹಾಕುತ್ತಿದ್ದ. ಅವನು ತೋರಿದ ಆತ್ಮೀಯತೆಯನ್ನು, ಪ್ರೀತಿಯನ್ನು ಕಂಡು ಮಾಧವನ ಹೃದಯ ಕರಗಿತ್ತು. ಕಣ್ಣು ಹನಿ ತುಂಬಿತ್ತು. ಇಷ್ಟು ಹೊತ್ತಿಗೆ ಅವರು ನರಿಬೇಣವನ್ನು ದಾಟಿ ರಸ್ತೆಗೆ ಬಂದಿದ್ದರು. ಅಗೋ ಕುಂದೇಶ್ವರ ದೇವಸ್ಥಾನದ ಕಡೆ ಹೋಗುವ ಓಣಿ ದಾಟಿತು. ಮಾಧವನ ಹೋಟಲೂ ಬಂತು. ಹೋಟಲ ಬಾಗಿಲ ಮುಂದೆ ನಿಂತು ಮಾಧವ

“ ಇನ್ನು ಯಾವಾಗ ಮತ್ತೆ ನೋಡುವುದು ? ” ಎಂದು ಕೇಳಿದ.

“ ಯಾವಾಗಲೋ ! ” ಎಂದು ಮತ್ತೆ ಹಿಂತಿರುಗಿ ನೋಡದೆ ರಾಮಕೃಷ್ಣರಾಯ ಅವಸರ ಅವಸರವಾಗಿ ಹೊರಟೇ ಬಿಟ್ಟ. ಅವನು ಹೋದ ದಾರಿಯನ್ನೇ ಕೊಂಚ ಹೊತ್ತು ದಿಟ್ಟಿಸಿ ನೋಡುತ್ತ ಮಾಧವ ‘ಯಾವಾಗಲೋ’ ಎಂದು ಒಮ್ಮೆ ನಿಟ್ಟುಸಿರು ಬಿಟ್ಟು ಹೋಟಲಿನೊಳಕ್ಕೆ ಕಾಲಿಟ್ಟ.

ಈ ಸಂಗತಿ ನಡೆದು ನಾಲ್ಕೈದು ದಿನಗಳ ತನಕ ಮಾಧವನಿಗೆ ರಾಮ ಕೃಷ್ಣರಾಯನದೇ ಯೋಚನೆ. ಆ ನಾಲ್ಕೈದು ದಿನಗಳ ಕಾಲವೂ ಅವರು ಮತ್ತೆ ಭೇಟಿಯಾಗಲಿಲ್ಲ. ಆರನೆಯ ದಿನ ಸಂಜೆ ಪೇಟೆಯ ಕಡೆ ಹೋಗಿ ಬಂದಿದ್ದ ಕೃಷ್ಣ "ನೋಡೋ ಮಾಧವ" ಎಂದು ಅವನ ಕೈಗೆ ಒಂದು ಪತ್ರಿಕೆಯನ್ನು ಕೊಟ್ಟು ಅದರಲ್ಲಿದ್ದ ಒಂದು ವಾರ್ತೆಯನ್ನು ತೋರಿಸಿದ. ಅಲ್ಲಿ ಹೀಗೆ ಬರೆದಿತ್ತು: "ಅಂಕೋಲೆಯಲ್ಲಿ ಉಪ್ಪಿನ ಸತ್ಯಾಗ್ರಹ ನಡೆಸುತ್ತಿದ್ದ ಸತ್ಯಾಗ್ರಹಿಗಳ ಮೇಲೆ ನಿನ್ನೆ ಭಾರೀ ಲಾಠಿ ಛಾರ್ಜು ನಡೆಯಿತು. ಅನೇಕ ಜನ ಸತ್ಯಾಗ್ರಹಿಗಳು ಗಾಯಗೊಂಡರು. ಅವರಲ್ಲಿ ಕುಂದಾಪುರದಿಂದ ಬಂದ ಸತ್ಯಾಗ್ರಹಿ ರಾಮಕೃಷ್ಣ ಎಂಬುವರ ಪರಿಸ್ಥಿತಿ ಬಹಳ ಶೋಚನೀಯವಾಗಿದೆ ಯಂತೆ. ಅವರು ಆಸ್ಪತ್ರೆಯಲ್ಲಿದ್ದಾರೆ." ಆ ವಾರ್ತೆಯ ಕೆಳಗೆ ಮರು ದಿನದ ತಾರೀಕಿನಲ್ಲಿ ಇನ್ನೊಂದು ವಾಕ್ಯ ಸೇರಿತ್ತು: "ಶ್ರೀ ರಾಮಕೃಷ್ಣರ ಪರಿ ಸ್ಥಿತಿ ಉತ್ತಮಗೊಳ್ಳುತ್ತಿದೆಯೆಂದು ಹೇಳಲಾಗಿದೆ."

ಈ ವರ್ತಮಾನವನ್ನು ಓದಿ ಮಾಧವ ಏನೂ ಮಾತಾಡಲಿಲ್ಲ. ಅವನ ಕಣ್ಣಿನಿಂದ ಒಂದು ಹನಿ ನೀರು ಬಿತ್ತು. ಆದರೆ ಅವನ ಮನಸ್ಸು ಮಾತ್ರ ಅಲ್ಲೋಲಕಲ್ಲೋಲವಾಗಿತ್ತು, ಆ ಬಿದಿರುಮೆಳೆ ಗಡ್ಡದ, ಹುಲ್ಲುರಾಶಿ ತಲೆಯ ಆದರೆ ಚಿನ್ನದಂಥ ಹೃದಯದ, ಆಕಾಶಗಾಮಿ ಮನಸ್ಸಿನ ಆ ರಾಮಕೃಷ್ಣ ರಾಯನನ್ನು ಮತ್ತೆ ನೋಡುವೆನೋ ಇಲ್ಲವೋ ಎಂದು ಮಾಧವನ ಹೃದಯ ತುಡಿಯಿತು. ತನ್ನ ಬಾಳಿಗೆ ಬಂದು ಸೇರಿದ ಆಧಾರವೊಂದು ಕಳಚಿ ಬಿದ್ದಂತೆಯೇ ಅವನಿಗೆ ತೋರಿತು. ತಾನು ಮತ್ತೆ ನಿರಾಧಾರಿಯಾದ ಹಾಗೆ; ಮತ್ತೆ ಏಕಾಂಗಿಯಾದ ಹಾಗೆ ಅನ್ನಿಸಿತು. ತನ್ನ ಈ ದುಃಖ ರಾಮಕೃಷ್ಣನಿ ಗಾಗಿಯೋ ಅಥವಾ ಅದು ಕೇವಲ ತನಗೇ ಆಗಿಯೋ ಎಂದು ಮಾಧವನಿಗೂ ಹೇಳಲಾಗುತ್ತಿರಲಿಲ್ಲ. ನಮ್ಮ ದುಃಖವೆಲ್ಲ ಪ್ರಥಮತಃ ಆತ್ಮಾನುಕಂಪೆಯ ಪರಿಣಾಮ; ಪರದುಃಖ ಸಹಾನುಭೂತಿ — ಆ ಮೇಲೆ.

## ೭

ಮಾಧವನ ದೇಹ ಬಡಕಲು ; ಎತ್ತರ ಸಾಮಾನ್ಯ, ಗಾತ್ರವೂ ಅಷ್ಟೇ. ಕೃಷ್ಣನದು ದೃಢವಾದ ಮೈಕಟ್ಟು, ಎತ್ತರವಾದ ದೇಹ, ಕಣ್ಣು ತುಂಬುವ ಗಾತ್ರ. ದಿನದಿನಕ್ಕೂ ಕೃಷ್ಣನ ದೇಹ ಪುಷ್ಟಿಗೊಳ್ಳುತ್ತಿತ್ತು. ಅವನ ನರ ನರದಲ್ಲೂ ಹೊಸ ರಕ್ತ ನುಗ್ಗಿ ಬರುತ್ತಿತ್ತು. ತೋಳಿನ ಮಾಂಸಖಂಡಗಳು ಉಂಡುಂಡೆಯಾಗಿ ಉಬ್ಬುತ್ತಿದ್ದುವು. ಫುಟ್‌ಬಾಲ್, ' ಸುರಸುರ ಗುದ್ದು, ' ' ಬಾಸ್ಕೆಟ್ ಬಾಲ್, ' ಓಟದ ಪಂದ್ಯ, ' ಹೈ ಜಂಪ್, ' ಲಾಂಗ್ ಜಂಪ್ ' ಮುಂತಾದ ಆಟಗಳಲ್ಲಿ ತಲ್ಲೀನನಾಗಿ ದೇಹವನ್ನು ದಂಡಿಸಿದರೂ ಅದು ಇನ್ನಷ್ಟು, ಮತ್ತಷ್ಟು ಮತ್ತವಾಗಿ ಘೀಳಿಡುತ್ತಿತ್ತು. ದೇಹದಲ್ಲಿ ಬಂದು ತುಂಬು ತ್ತಿದ್ದ ಶಕ್ತಿ, ಸತ್ವ, ಉತ್ಸಾಹ ಹೊಸ ಹೊಸ ಸಾಹಸಗಳಿಗೆ ಬಾಯಿಬಿಡ ತೊಡಗಿದ್ದುವು. ಸುಮ್ಮನೆ ಸ್ಥಾಣುವಿನಂತೆ ಕುಳಿತಿರುವುದು, ಕುಳಿತು ಕನಸು ಕಾಣುವುದು ಅವನಿಗೆ ಸೇರದು. ಏನಾದರೂ ಮಾಡಬೇಕು, ಏನಾದರೂ- ಎಂದು ಮನಸ್ಸು ಸದಾ ತುಡಿಯುತ್ತಿತ್ತು. ಆ ತೋಳು, ಆ ಕಾಲು ಆ ಗುಂಡಿಗೆ ಗಾಳಿ ತುಂಬಿದ ಫುಟ್‌ಬಾಲಿನಂತೆ ಪುಟಿಯುವುವು. ಗಾಳಿಯೂದಿ ಬಿಟ್ಟ ಬೆಲೂನಿನಂತೆ ದೇಹ ಆಕಾಶಗಮನವನ್ನೇ ಕೈ ಕೊಳ್ಳುವೆನೆಂದು ಉಬ್ಬಿ ಊದಿ ಚಿಮ್ಮುವುದು. ಆ ಹೋಟಲನ್ನೇ ಎತ್ತಿ ಬೇರೆ ಕಡೆ ಇಟ್ಟು ಬಿಡ ಬಹುದೋ, ಆ ಶಾಲೆಯನ್ನೇ ಕಿತ್ತು ಬೇರೆ ಸ್ಥಳದಲ್ಲಿ ನೆಡಬಹುದೋ, ಅಥವಾ ಹಿರಣ್ಯಕಶಿಪುವಿನಂತೆ ಈ ಭೂಮಿಯನ್ನೇ ಚಾಪೆಯಂತೆ ಸುತ್ತಿ ತಲೆಯ ಮೇಲಿಟ್ಟು ಓಡಾಡಬಹುದೋ, ರಾವಣೇಶ್ವರನಂತೆ ಕೈಲಾಸ ಪರ್ವತವನ್ನೇ ಕಿತ್ತು ಎತ್ತ ತೊಡಗಬಹುದೋ, ಹನುಮಂತನಂತೆ ಸಂಜೀವನ ಪರ್ವತವನ್ನೇ ಬೆರಳ ತುದಿಯಲ್ಲಿ ತರಬಹುದೋ— ಎಂಬ ಉಲ್ಲಾಸದಿಂದ, ಉದ್ವೇಗದಿಂದ ಕೃಷ್ಣನ ಮನಸ್ಸು ಕುಣಿಯ ತೊಡಗಿತ್ತು.

ಯಾವ ಆಟದ ಬಯಲಲ್ಲೂ ಕೃಷ್ಣನೇ. ಎಲ್ಲ ಆಟಗಳಲ್ಲೂ ಎಲ್ಲರನ್ನೂ ಮೀರಿಸುವ ಛಲ, ಮೀರಿಸಿ ತನ್ನ ವೀರಶ್ರೀಯನ್ನು ಮೆರೆಯುವ ಆಶೆ. ಪ್ರತಿ ಯೊಂದು ಮ್ಯಾಚಿನಲ್ಲೂ ಕೃಷ್ಣನಿದ್ದ ಪಕ್ಷಕ್ಕೇ ಜಯ. ಆಟದಲ್ಲಿ ಅವನ

ಏಕಾಗ್ರತೆ, ನೈಪುಣ್ಯ ಅಷ್ಟು. ಆದರೆ ಮಾಧವನಲ್ಲಿ ಕ್ರಮೇಣ ಆಟದ ಆಶೆ ಕುಗ್ಗುತ್ತ ಬಂದಿತ್ತು. ಮಿಡ್ಲ್ ಸ್ಕೂಲಿನಲ್ಲಿದ್ದಾಗ ಎಲ್ಲ ಆಟಗಳಲ್ಲೂ ಭಾಗವಹಿಸುತ್ತಿದ್ದ; ಹತ್ತು ಜನ ಹುಡುಗರೊಡನೆ ಸೇರಿ ಕುಣಿದು ನಕ್ಕು ಕೇಕೆ ಹಾಕಿ ಆಟವಾಡಿ ಆಟದ ಆನಂದದಲ್ಲಿ ಮೈಮರೆಯುತ್ತಿದ್ದ. ಆದರೆ ಹೈಸ್ಕೂಲಿಗೆ ಬಂದ ಮೇಲೆ ಆಗಲೇ ಬಲಿತಿದ್ದ ಓದುವ ಗೀಳು ಸರ್ವಭಕ್ಷಕವಾಗಿ ಮಾರ್ಪಟ್ಟಿತು. ಉಳಿದೆಲ್ಲ ಆಶೆಗಳನ್ನೂ ಮೆಟ್ಟಿ ಪುಸ್ತಕಗಳು ಮಾಧವನ ಮನಸ್ಸನ್ನು ಆಕ್ರಮಿಸಿದುವು. ಈ ಪರಿವರ್ತನಕ್ಕೆ ಮಾಧವನ ಅಹಂಕಾರವೂ ಒಂದು ಕಾರಣ ತಾನು ಆಟದಲ್ಲಿ ಉಳಿದವರನ್ನು ಮೀರಿಸಿ ಹೆಸರು ಪಡೆಯಲಾರೆನೆಂಬುದು ಬಹು ಬೇಗ ಅವನಿಗೆ ವ್ಯಕ್ತವಾಯಿತು. ಆಟದಲ್ಲಿ ತಾನು ಸೇರಿದರೆ ಹತ್ತರ ಕೂಡ ಹನ್ನೊಂದನೆಯ ಸ್ಥಾನವೇ ತನ್ನದು ಎಂದು ತಿಳಿದ ಕೂಡಲೇ ಅವನಿಗೆ ಅದರಲ್ಲಿ ಆಸಕ್ತಿ ಕಡಮೆಯಾಗುತ್ತ ಬಂತು. ಎಲ್ಲ ಕಡೆಯಲ್ಲೂ ಎಲ್ಲ ಪಾಳಿಯದಲ್ಲೂ ತನ್ನ ಕೀರ್ತಿಧ್ವಜವೇ ಮುಗಿಲೆತ್ತರ ನಿಲ್ಲಬೇಕೆಂಬ ಅವನ ಆಶೆಗೆ ಅನೇಕ ಏಟುಗಳು ಬಿದ್ದುವು. ಪಾಠದಲ್ಲೂ ಕೂಡಾ ಎಲ್ಲರನ್ನೂ ಮೀರಿಸಬಲ್ಲ ಬುದ್ಧಿ ಶಕ್ತಿಯಿದ್ದರೂ ಹಾಗೆ ಮೀರಿಸಲು ಬೇಕಾದ ಸತತ ಅಭ್ಯಾಸ, ದೃಢವ್ರತ, ತನ್ನ ಕೈ ಮೀರಿದ್ದು ಎಂಬುದು ಕ್ರಮೇಣ ಅವನಿಗೆ ತಿಳಿಯುತ್ತ ಬಂತು. ಕನಸು ಕಾಣುವ ಮನಸ್ಸು ಬೀಜಗಣಿತದಲ್ಲಿ ತಲ್ಲೀನವಾಗಲು ಹಿಂಜರಿಯುತ್ತಿತ್ತು. ಮನಸ್ಸಿನ ಗುಹೆಯಲ್ಲಿ ಓಡಾಡುತ್ತಿದ್ದ ಮಾಧವ ಭೂಮಿತಿಯೊಳಕ್ಕೆ ಅಡಕ ವಾಗಲು ಅಸಮರ್ಥನಾದ. ಇದೆಲ್ಲ ಒಂದು ದೌರ್ಬಲ್ಯವೇ ಎಂದು ಅವನು ಬಲ್ಲ. ಅದನ್ನು ಗೆಲ್ಲಲು ನಿರಂತರವಾಗಿ ಹೋರಾಡುತ್ತಿದ್ದ. ಆದರೆ ಆ ಹೋರಾಟ ವನ್ನು ಕೊನೆ ಮುಟ್ಟಿಸಲು ಅತ್ಯಗತ್ಯವಾದ ಸಂಕಲ್ಪಶಕ್ತಿಯೇ ತನ್ನಲ್ಲಿ ಸಾಲದು ಎಂದು ತಿಳಿದಾಗ ಮಾತ್ರ ಅವನು ತತ್ತರಿಸುತ್ತಿದ್ದ. ಆದರೆ ಸಾಹಿತ್ಯ ವೊಂದರಲ್ಲಿ ಮಾತ್ರ - ಅದು ಕನ್ನಡವಿರಲಿ, ಸಂಸ್ಕೃತವಿರಲಿ, ಇಂಗ್ಲಿಷ್ ಇರಲಿ - ಅವನನ್ನು ಮೀರಿಸಬಲ್ಲವರು ಆ ಶಾಲೆಯಲ್ಲಿ ಯಾರೂ ಇಲ್ಲ. ಅಲ್ಲಿ ಮಾತ್ರ ಅವನು ಚಕ್ರಾಧಿಪತ್ಯ ನಡಸಬಹುದು. ಆದಕಾರಣ ಅವನ ಸಾಹಿತ್ಯಾ ಭ್ಯಾಸ ಆ ಮೂರು ವರ್ಷವೂ ಅವ್ಯಾಹತವಾಗಿ ಸಾಗಿತ್ತು. ಸರಿಯಾಗಿ ಅರ್ಥ ವಾಗದೆ ಇದ್ದರೂ ಆಗಲೇ ಹಳೆಗನ್ನಡ ಕಾವ್ಯಗಳ ಮೇಲೆ ಕೂಡಾ ಆಗಾಗ ಧಾಳಿ ನಡಸುತ್ತಿದ್ದ. ಈಗ ಪರೀಕ್ಷೆ ಹತ್ತಿರವಾಗುತ್ತಿದ್ದುದರಿಂದ ಉಳಿದೆಲ್ಲ

ವಿಚಾರಗಳನ್ನೂ ಮನಸ್ಸಿನಿಂದ ಹೊರಗಟ್ಟಿ ಪಠ್ಯಪುಸ್ತಕಗಳ ಮೇಲೆ ತನ್ನ ಮನಸ್ಸಿನ ಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿದ್ದ. ಮುಂದೆ ಓದಲೇ ಬೇಕು, ಹಾಗೆ ಓದಬೇಕಾದರೆ ಚೆನ್ನಾಗಿ ಪಾಸಾಗದೆ ಗತ್ಯಂತರವಿಲ್ಲ ಎಂಬ ಭಾವನೆ ಅಂಕುಶದಂತೆ ತಿವಿದು ಅವನ ಮನಸ್ಸು ಪುಸ್ತಕಗಳಲ್ಲಿ ಮಗ್ನವಾಗುವಂತೆ ಮಾಡುತ್ತಿತ್ತು. ಕೃಷ್ಣನೂ ಓದುತ್ತಾನೆ, ಮನಸ್ಸುಕೊಟ್ಟೇ ಓದುತ್ತಾನೆ. ಆದರೆ ಓದೇ ಪರಮಸಾಧ್ಯ ಎಂಬ ಭಾವನೆ ಅವನಿಗಿಲ್ಲ. ದಿನದ ಹತ್ತು ಕೆಲಸಗಳಲ್ಲಿ ಅದೂ ಒಂದು; ಒಂದು ದಿನವೂ ಹತ್ತುಗಂಟೆಯ ಮೇಲೆ ಅವನು ದೀಪ ಉರಿಸಲೊಲ್ಲ; ಆರು ಗಂಟೆ ಆದ ಮೇಲೆ ಹಾಸಿಗೆಯ ಮೇಲೆ ಮಲ-ಗಿರಲಾರ.

ಇನ್ನೇನು ಪರೀಕ್ಷೆಗೆ ಇಪ್ಪತ್ತೇ ದಿನಗಳು. ಪರೀಕ್ಷೆ ಬಂದೇ ಬಿಟ್ಟಿತು. ವಿದ್ಯಾರ್ಥಿಗಳಲ್ಲಿ ಆಟಗುಳಿಗಳಾದವರೂ ಕೂಡಾ ರಾತ್ರಿ ಹನ್ನೆರಡುಗಂಟೆ ಹೊಡೆಯುವುದನ್ನು ತಮ್ಮ ಜೀವನದಲ್ಲೇ ಮೊದಲ ಬಾರಿಗೆ ಕೇಳತೊಡಗಿದರು. ಮಾಧವನೂ ಹನ್ನೆರಡು ಗಂಟೆಗಳ ತನಕ ಓದಿ ಬೆಳಗ್ಗೆ ಆರುಗಂಟೆಗೆ ಏಳುತ್ತಿ-ದ್ದನು. ಪ್ರತಿಸಂಜೆ ಹೊಳೆಯ ದಂಡೆಯಮೇಲೋ, ಕುಂದಾಪುರದಿಂದ ಕೋಟೇಶ್ವರಕ್ಕೆ ಹೋಗುವ ರಸ್ತೆಯಮೇಲೋ ಅಲೆದು ಬರುವುದನ್ನು ಮಾತ್ರ ಅವನು ಬಿಟ್ಟಿಲ್ಲ. ಒಂದು ದಿನ ಕೃಷ್ಣ ಇದ್ದಕ್ಕಿದ್ದಂತೆಯೇ ಮಾಧವನನ್ನು ಕುರಿತು

"ನಾವು ಈಜು ಕಲಿತು ಬಿಡಬೇಕಯ್ಯ" ಎಂದ.

"ಹೊಳೆ ಇಳಿಯದೆ ಈಜು ಕಲಿಯುವುದು ಹೇಗೆ?" ಎಂದು ಮಾಧವ ಪ್ರಶ್ನಿಸಿದ.

"ಹೊಳೆ ಇಳಿದೇ ಕಲಿಯುವಾ. ರಜೆ ಬಂದ ಕೂಡಲೇ ನಾವು ಊರಿಗೆ ಹೊರಟು ಬಿಡಬೇಕು. ಅಲ್ಲಿ ಹೋದ ಮೇಲೆ ನಮ್ಮೂರಿನ ಆ ಕೊಳಕು ನೀರಿನ ಕೆರೆಯಲ್ಲೇ ನಾವು ಈಜು ಕಲಿಯಬೇಕಾದರೆ; ಇಲ್ಲಿ ಹೊಳೆ ಇದೆ, ಕಲಿತು ಬಿಡೋಣ."

"ಕೃಷ್ಣಾ, ಈಜು ಕಲಿಯುವುದೇನೋ ಸರಿಯೆ. ಆದರೆ ಈಗ ಬೇಡಪ್ಪಾ. ಪರೀಕ್ಷೆ ಹತ್ತಿರ ಬಂತು. ಅದು ಮುಗಿಯಲಿ, ಆಮೇಲೆ ಎರಡು ದಿನವಿದ್ದು ಈಜು ಕಲಿತೇ ಊರಿಗೆ ಹೊರಡಬಹುದಯ್ಯ, ಈಗ ಬೇಡ."

" ಪರೀಕ್ಷೆ ಅಂತ ಇಡೀ ದಿನ ನೀನು ಓದಿ ಗುಡ್ಡೆ ಹಾಕುವುದು ನಾನು ಕಂಡಿಲ್ಲವೇ ? ಸಂಜೆಹೊತ್ತು ಹೇಗೂ ನಿನ್ನ ಕಾರ್ಯಕ್ರಮ ಉಂಟಲ್ಲ; ವಾಕಿಂಗೋ, ಹೊಳೆಯ ದಂಡೆಗೆ ಹೋಗಿ ಕುಳಿತುಕೊಳ್ಳುವುದೋ; ಅದರ ಬದಲು ಒಂದು ನಾಲ್ಕುದಿನ ಹೊಳೆಯೊಳಗೆ ಕುಳಿತುಕೊಂಡರೆ ಸರಿ "

" ಇದೇನು ಕೃಷ್ಣ ನಿನಗೆ ಇದ್ದಕ್ಕಿದ್ದಂತೆ ಈ ಹೊಸ ಆಶೆ ? "

" ಏಕೋ ಗೊತ್ತಾಗುವುದಿಲ್ಲ, ಮಾಧವ. ಅಂತೂ ಈಜು ಕಲಿಯದೆ ಸಾಧ್ಯವಿಲ್ಲ ಎನ್ನಿಸುತ್ತದೆ. ಮೊನ್ನೆ ಏಕೋ ಹೊಳೆಯ ದಂಡೆಗೆ ಹೋಗಿದ್ದೆ. ನಮ್ಮ ಕ್ಲಾಸಿನ ರಾಮುಪ್ರಭು, ಮೊಗವೀರಸುಬ್ಬ, ತಿಮ್ಮಪ್ಪಭಟ್ಟ, ಇವರೆಲ್ಲ ಹೇಗೆ ಬಾತುಕೋಳಿಯ ಹಾಗೆ ಈಸುತ್ತಿದ್ದರು ಅಂತೀಯ. ಇವತ್ತೇ ಶುರು ಮಾಡಿ ಬಿಡೋಣ, ಬಾರೋ. "

ಮಾಧವನಿಗೆ ಈ ಹೊಸ ಆಶೆ ಅಷ್ಟು ಆಕರ್ಷಕವೆನ್ನಿಸಲಿಲ್ಲ. ಆದರೆ ಈಜು ಕಲಿಯಬೇಕಾದ್ದು ಅಗತ್ಯ ಎಂದು ಅವನಿಗೂ ಎನ್ನಿಸಿತು. ಅವನೂ ಕೂಡಾ ಚಿಕ್ಕವನಾಗಿದ್ದಾಗ ಈಜು ಕಲಿಯುತ್ತೇನೆ ಅಂತ ಮಳೆಗಾಲದಲ್ಲಿ ನೀರುತುಂಬಿದ್ದ ಗದ್ದೆಯಲ್ಲೋ, ಒಂದಡಿ ಆಳದ ತೋಡುಗಳಲ್ಲೋ ಕೈಯೂರಿ ಕಾಲು ಬಡಿದವನೇ. ಆದರೆ ಸಂದರ್ಭ ಸರಿಯಲ್ಲ ಎಂದು ತೋರಿತು. ಅಲ್ಲದೆ ಕುಂದಾಪುರದ ಹೊಳೆ ನೆಚ್ಚುವುದು ಕಷ್ಟ. ಯಾವ ಹೊತ್ತಿಗೆ ಏನಾಗ ಬಹುದೋ. ಉಬ್ಬರ ಎಷ್ಟು ಹೊತ್ತಿಗೆ ಬಂದು ಹಾಯುವುದೋ ಹೇಳುವುದು ಕಷ್ಟ. ಎಲ್ಲಿ ಆಳವೋ ಎಲ್ಲಿ ಕಡಿಮೆಯೋ— ಹೇಗೆ ಗೊತ್ತಾಗಬೇಕು ?

" ಅಲ್ಲವೋ ಕೃಷ್ಣ ಈ ಹೊಳೆಯ ಸಹವಾಸ ಕಷ್ಟವಲ್ಲವೇ ? ಅಲ್ಲದೆ ನಮಗೆ ಈಜು ಕಲಿಸುವವರಾದರೂ ಯಾರು ? '' ಎಂದು ಕೇಳಿದ.

" ಮೊಗವೀರಸುಬ್ಬನ ಹತ್ತಿರ ಆಗಲೇ ಮಾತಾಡಿದ್ದೇನಯ್ಯ; ಅವನಿಗೆ ಈ ಹೊಳೆ ಎಂದರೆ ಮನೆಮುಂದಿನ ಅಂಗಳವಿದ್ದ ಹಾಗೆ. ಈಜು ಕಲಿಸಲು ಅವನು ಒಪ್ಪಿಕೊಂಡು ಬಿಟ್ಟಿದ್ದಾನೆ. "

ಮಾಧವನಿಗೆ ಕೃಷ್ಣನ ಈ ಉತ್ಸಾಹವನ್ನು ಭಂಗಪಡಿಸುವುದು ಸರಿಯಲ್ಲ ಎಂದು ತೋರಿತು. ಕೊನೆಗೂ ತನ್ನ ಒಪ್ಪಿಗೆ ಕೊಟ್ಟ. ಮೇಲೆ ಮೇಲೆ ಕಂಡು ತಾನು ಮನಸೋತಿದ್ದ ಆ ಹೊಳೆಯ ಅಂತರಂಗ ಹೇಗಿದೆಯೋ ನೋಡಬೇಕೆಂದು ನಿಶ್ಚಯಿಸಿದ. ಈ ಮಾತುಗಳನ್ನು ಕೇಳುತ್ತಿದ್ದ ಹೋಟಲುಯಜಮಾನ ಹೊಟ್ಟೆ

ರಾಮಯ್ಯ ತನ್ನ ಹೊಟ್ಟೆಯ ಮೇಲೆ ಕೈಯಾಡಿಸುತ್ತ "ಈ ಗಂಗೊಳ್ಳಿ ಹೊಳೆಯ ಸಹವಾಸ ಬೇಡಪ್ಪಾ. ಬಹಳ ಅಪಾಯ. ಆಗಲೇ ಒಂದೆರಡು ಜನದ ಬಲಿ ತೆಗೆದುಕೊಂಡಿದೆಯಪ್ಪಾ, ಬೇಡಿ" ಎಂದು ರಾಗವಾಗಿ ಹೇಳಿದ. ಆ ಮಾತು ಕೇಳಿ ಕೃಷ್ಣ ನಕ್ಕು "ಸಾಯುವುದೇ ಇದ್ದರೆ ಯಾರಿಗೆ ತಪ್ಪಿಸುವು ದಕ್ಕೆ ಆಗುತ್ತದೆ, ಹೇಳಿ. ಈ ಮನೆಯೇ ಕುಸಿದು ಬೀಳಬಹುದು. ಬೀದಿ ಯಲ್ಲಿ ಹೋಗುವಾಗ ಬಸ್ಸೇ ಮೈ ಮೇಲೆ ಬಂದು ಬಿಡಬಹುದು. ಆ ಬಸ್ಸು ಎಷ್ಟು ಜನರನ್ನು ಬಲಿ ತೆಗೆದುಕೊಂಡಿಲ್ಲ ಹೇಳಿ" ಎಂದ. "ಮಹಾರಾಯ, ನಿನ್ನ ಸಂಗಡ ವಾದಮಾಡುವವರು ಯಾರು ಹೇಳು? ಆದರೆ ಕೊಂಚ ಜಾಗ್ರತೆಯಿರಲಿ" ಎಂದು ಹೋಟಲಿನ ಯಜಮಾನ ಸುಮ್ಮನಾದ.

ಆ ಸಂಜೆಯೇ ಹುಡುಗರ ತಂಡ ನದಿಯ ಕಡೆ ನುಗ್ಗಿತು. ದೊಡ್ಡ ಕೋಟೆಯೊಂದನ್ನು ವಶಪಡಿಸಿಕೊಳ್ಳಲು ಹೋಗುವ ಸೇನಾನಿಯಂತೆ ಕೃಷ್ಣ ಹೆಜ್ಜೆಯಿಡುತ್ತಿದ್ದ. ಸುರಂಗ ಹಾಕುವುದರಲ್ಲಿ ತಜ್ಞನಾದ ಸಮರಪಂಡಿತನಂತೆ ಅವರ ಗೆಳೆಯ ಮೊಗವೀರ ಸುಬ್ಬ ಗಂಭೀರವಾಗಿ ನಡೆಯುತ್ತಿದ್ದ. ರಾಮಪ್ರಭು, ತಿಮ್ಮಪ್ಪಭಟ್ಟ, ಭೀಮರಾಯ, ಶಿವೈತಾಳ ಇವರು ಸಿಪಾಯಿಗಳಂತೆ ಹಿಂಬಾಲಿಸಿ ಬರುತ್ತಿದ್ದರು. ರಾಮಪ್ರಭು ಆಗಲೇ ನೀರಲ್ಲಿ ತೇಲುವುದನ್ನು ಕಲಿತಿದ್ದೇನೆ ಎಂದು ಜಂಭ ಹೊಡೆಯುತ್ತಿದ್ದ. ಭೀಮರಾಯ ತಾನು ಹೊಳೆಯೊಳಗೆ ಇಳಿದು ನಿಲ್ಲ ಬಲ್ಲೆ ಎಂದು ತನ್ನ ಬಡಾಯಿ ಕೊಚ್ಚಿಕೊಂಡ. ಶಿವೈತಾಳ ತಾನು ಈ ದಿನ ಖಂಡಿತ ಒಂದು ಫರ್ಲಾಂಗ್ ದೂರ ಈಜಿ ಹೋಗಿಯೇ ಸಿದ್ಧ ಎಂದು ಬುರುಡೆ ಬಿಟ್ಟ.

ದೋಣಿಗಳು ಓಡಾಡುವ ಕಡುವಿನ ಕಡೆಗೆ ಅವರು ಹೋಗಲಿಲ್ಲ. ಪೋಸ್ಟಾಫೀಸಿನ ಹತ್ತಿರದ ಓಣಿಯಲ್ಲಿ ತಿರುಗಿ ಮೊಗವೀರರ ಮನೆಗಳ ಮೂಲಕ ಹಾದು ನದಿಯ ದಂಡೆಗೆ ಬಂದರು. ದಂಡೆಗೆ ಬರುವ ತನಕ ಇಲ್ಲದೆ ಇದ್ದ ಉತ್ಸಾಹ ಈಗ ಮಾಧವನಲ್ಲಿ ಮೊರೆಯಿತು. ನದಿ ಶಾಂತವಾಗಿ ಕಣ್ಣ ಮುಂದೆ ಹರಡಿತ್ತು. ಅದರ ನೀರು ತೆಳು ರೇಸಿಮೆಯ ಥಾನಿನಂತೆ ಮರ್ಮರಿಸುತ್ತಿತ್ತು. ಇಳಿತದ ಕಾಲ. ಹೊಳೆಯ ಮಧ್ಯದಲ್ಲಿ ಭೂತಾಕಾರದ ಮರಳ ದಿಣ್ಣೆಗಳು ತಲೆಯೆತ್ತಿ ನಿಂತಿದ್ದುವು. ಉದ್ದಕ್ಕೆ ಅಲ್ಲಿಂದ ಇಲ್ಲಿಯ ತನಕ ಪಶ್ಚಿಮದಿಂದ ಪೂರ್ವಕ್ಕೆ ಮರಳು ಹೆಬ್ಬಾವಿನಂತೆ ಮಲಗಿತ್ತು. ನೀರು, ಮರಳ ದಿಬ್ಬ;

ಮತ್ತೆ ಅಷ್ಟು ನೀರು ಮರಳ ದಿಬ್ಬ – ಹೀಗೆ ಅರ್ಧ ಹೊಳೆಯ ತನಕವೂ ಸಲೀ ಸಾಗಿ ನಡೆದು ಹೋಗಬಹುದು. ಅದರಾಚೆಗೆ ಮಾತ್ರ ಬಹಳ ಆಳ. ಆ ಕಡೆಗೆ ಹೋಗುವಂತಿಲ್ಲ. ಈಚೆ ಈಜಲು ತಕ್ಕಷ್ಟು ಆಳವಾದ ನೀರು ಸಿಕ್ಕುವುದೇ ಕಷ್ಟ ವೆಂದು ತೋರಿತು. ಎಲ್ಲರೂ ತಮ್ಮ ತಮ್ಮ ಅಂಗಿಗಳನ್ನು ಕಳಚಿ ದಂಡೆಯ ಮರಳ ಮೇಲಿಟ್ಟು ಹೊಳೆಯೊಳಕ್ಕೆ ಇಳಿದರು. ಒಂದಷ್ಟು ದೂರ ನೀರೇ ಇರ ಲಿಲ್ಲ. ಮರಳಲ್ಲಿ ಓಡೋಡುತ್ತ ನಡೆದು ಕೊನೆಗೂ ನೀರಿನಲ್ಲಿ ಕಾಲಿಟ್ಟರು. ಅಲ್ಲಿ ನೀರು ಏನು ಪಾದ ಮುಳುಗಬಹುದು ಅಷ್ಟೆ. ಆದರೂ ಅದರ ವೇಗವೋ! ಸುಯ್ಯೆಂದು ನೀರು ಮುಂದೋಡುತ್ತಿತ್ತು. ಇನ್ನೂ ಕೊಂಚ ಮುಂದೆ ನಡೆದರು, ಮಂಡಿಯ ತನಕ ನೀರು ಸಿಕ್ಕಿತು. ಮತ್ತೆ ಮರಳು ಸಿಕ್ಕುವ ತನಕ ಹೀಗೇ ಹೋಗಬಹುದು. ಹೋಗ ಹೋಗುತ್ತ ನೀರು ಆಳ ಆಳವಾಗುತ್ತದೆ, ಮತ್ತೆ ಬೆಟ್ಟ ಬೆಟ್ಟಾಗುತ್ತದೆ. ಮಂಡಿಯುದ್ದ ನೀರಿನಲ್ಲೇ ಹುಡುಗರೆಲ್ಲ ಬಿದ್ದು ಒದ್ದಾಡಿ ದರು. ಶಖೆಯಲ್ಲಿ ಬೆಂದಿದ್ದ ದೇಹ ತಂಪು ತಂಪಾಯಿತು. ಹೊಳೆಯ ತಳಕ್ಕೆ ಕೈಯೂರಿ ಕಾಲುಗಳನ್ನು ಬಡಿದರು. ತಲೆಯನ್ನು ನೀರಿನೊಳಕ್ಕೆ ಅದುಮಿ ಮುಳುಗು ಹಾಕಿದರು. ತಂಪುಗಾಳಿ ಪಶ್ಚಿಮದಿಂದ ಬೀಸಿತು. ಇಳಿದ ಸೂರ್ಯನ ಬೆಚ್ಚನೆ ಬೆಳಕು ಹೊಳೆಯ ನೀರಿನ ಮೇಲೆ ಮಲಗಿದ್ದುದು ಈಗ ಎಚ್ಚತ್ತು ಚಂಚಲವಾಯಿತು. ಮೊಗವೀರ ಸುಬ್ಬ – ಆ ಜಲವಿದ್ಯಾಪ್ರವೀಣ – ಮೊತ್ತ ಮೊದಲು ತನ್ನ ಕರಾಮತಿಯನ್ನು ತೋರಿ ತನ್ನ ಶಿಷ್ಯವೃಂದದ ಹೃದಯದಲ್ಲಿ ಈಜುವ ಆಶೆಯನ್ನು ಉದ್ದೀಪಿಸಿದ. ಸರ್‍ರನೆ ಬಾಣದಂತೆ ನೀರನ್ನು ಸಿಗಿದು ನೊರೆ ಚಿಮ್ಮಿಸುತ್ತಾ ಮುಂದೋಡಿದ. ನೀರ ಮೇಲೆ ಹೊಟ್ಟೆ ಮೇಲಾಗಿ ಮಲಗಿ ಕಪ್ಪೆಯಂತೆ ತೇಲಿದ. ನೀರಿನ ಹಾಸಿಗೆಯ ಮೇಲೆ ಮಗ್ಗುಲಾಗಿ ಮಲಗಿದ. ಅವನು ಅಂಗತ್ತನಾಗಿ ನೀರಿನ ಮೇಲೆ ಚಲಿಸದೆ ಮಲಗಿದ್ದಾಗ ಅವನ ಕಾಲ್ಕೈ ಬಾಳೆಮೀನುಗಳಂತೆ ನೀರಿನಲ್ಲಿ ಒಳಗಡೆ ಸಳಸಳ ಜುಳುಜುಳು ಎಂದು ಆಡ್ತ್ತಿದ್ದುವು. ಒಂದು ಸಲ ಅವನು ನೀರಿನಲ್ಲಿ ಮುಳುಗಿ ಅದೃಶ್ಯನಾದ. ಎಲ್ಲಿ ಹೋದನೋ ಎಂದು ನೋಡುತ್ತಿರುವಾಗಲೇ ಶಿವೈತಾಳ ಬಿದ್ದು ಚೀರಿದ; ನೀರು ಆಳವಿರಲಿಲ್ಲವಾಗಿ ಬಿದ್ದವನು ಒಂದೇ ಒಂದು ಗುಟುಕು ಉಪ್ಪು ನೀರು ಕುಡಿದು ಮೇಲಕ್ಕೆದ್ದ. ಮುಳುಗಿದ್ದ ಸುಬ್ಬ ನೀರಿನೊಳಗಡೆಯೇ ಈಜುತ್ತ ಬಂದು ಹಾಗೆ ಶಿವೈತಾಳನ ಕಾಲು ಹಿಡಿದು ಎಳೆದಿದ್ದ. ಎಲ್ಲರೂ ನಕ್ಕರು, ಶಿವೈತಾಳನೂ

ನಗಬೇಕಾಯಿತು. "ಏನೋ, ಈಜು ಬಲ್ಲ ನೀನೇ ಹೀಗೆ ಚೀರಿದರೆ ನಮ್ಮೆಲ್ಲರ ಗತಿಯೇನೋ!" ಎಂದು ಕೃಷ್ಣ ತಮಾಷೆಮಾಡಿದ.

ಮೊಗವೀರ ಸುಬ್ಬ ಹೀಗೆ ತನ್ನ ಕೌಶಲವನ್ನು ತೋರಿದ ಮೇಲಂತೂ ಈಜು ಕಲಿಯಲೇ ಬೇಕೆಂದು ಎಲ್ಲರೂ ಶಪಥ ಮಾಡಿದರು. ಮತ್ತೆ ಕಾಲು ಬಡಿಯುವುದು ಶುರುವಾಯಿತು. ಈಗ ಜಲವಿದ್ಯಾಗುರು ಸುಬ್ಬ ತನ್ನ ಶಿಷ್ಯರಲ್ಲಿ ಒಬ್ಬೊಬ್ಬರನ್ನೇ ಆರಿಸಿಕೊಂಡು ಆ ವಿದ್ಯೆಯ ರಹಸ್ಯವನ್ನು ಬೋಧಿಸತೊಡಗಿದ. "ನೀರಿನ ಮೇಲೆ ತೇಲುವುದು ಬಹಳ ಸುಲಭ" ಎಂದು ಹೇಳುತ್ತಾ ಅವನು ಕೃಷ್ಣನ ಹೊಟ್ಟೆಯ ಕೆಳಗೆ ತನ್ನ ಕೈಯಿಟ್ಟು ನಿಂತ. ಕೃಷ್ಣ ತನ್ನ ದೇಹದ ಆ ಕಡೆ ಮತ್ತು ಈ ಕಡೆಯ ತೂಕ ಸರಿ ಹೋಗುವಂತೆ ಮಾಡಿಕೊಂಡು ಕೈ ಕಾಲು ಆಡಿಸಿದ, ಬಡಿದ. ಒಂದು ಸಲ ತೂಕ ತಪ್ಪಿ ಬಿದ್ದ, ಎದ್ದ, ಮತ್ತೆ ತಾನೇ ಪ್ರಯತ್ನಿಸತೊಡಗಿದ. ಮಾಧವನೇ ಮೊದಲಾದ ಇತರರೂ ತಮ್ಮ ಕೈಲಾದಷ್ಟು ಪ್ರಯತ್ನ ಮಾಡತೊಡಗಿದರು. "ನೋಡಿ ಈ ಬ್ಯಾಲೆನ್ಸ್ ಬಂದರೆ ಸರಿ, ಆಮೇಲೆಲ್ಲ ಸುಲಭ. ಇದು ಸೈಕಲ್ ಹತ್ತುವುದು ಕಲಿತಷ್ಟೇ ಸುಲಭ. ಹೆದರಬೇಡಿ" ಎಂದು ಹೇಳುತ್ತ ಸುಬ್ಬ ಪ್ರತಿಯೊಬ್ಬರಿಗೂ ನೆರವಾಗುತ್ತಿದ್ದ. ಆ ದಿನ ಕತ್ತಲಾಗುವಷ್ಟರಲ್ಲೇ ಕೃಷ್ಣ ನೀರಿನ ಮೇಲೆ ತನ್ನ ದೇಹವನ್ನು ಸಲೀಸಾಗಿ ತೇಲಿಸುವ ಕಲೆಯನ್ನು ಸ್ವಾಧೀನಪಡಿಸಿಕೊಂಡ. ಎಷ್ಟು ಕಷ್ಟಪಟ್ಟರೂ ಮಾಧವನ ದೇಹ ನೀರಿನ ಮೇಲೆ ಆ ದಿನ ತೇಲಲಿಲ್ಲ. ಈಜು ಕಲಿಯುವ ಆ ಸಾಹಸದಲ್ಲಿ ಅವನು ಐದಾರು ಗುಟುಕು ನೀರು ಕುಡಿದದ್ದಷ್ಟೇ ಲಾಭವಾಯಿತು. ಕೃಷ್ಣ ಮಾತ್ರ ಉಬ್ಬಿಹೋದ. ಕೃಷ್ಣನಿಗೆ ತನ್ನ ದೇಹವೊಂದು ಹಾಯಿ ದೋಣಿಯಾಗಿ ಮಾರ್ಪಟ್ಟಂತೆ ತೋರಿತು. ಗಂಗೊಳ್ಳಿ ಹೊಳೆಯೇನು, ಸಮುದ್ರವನ್ನೇ ಬೇಕಾದರೆ ಈಜಿ ಆಚೆ ಹೋಗಬಹುದು. ಆ ಮಚ್ವೆ, ಆ ಲಗ, ಆ ಹಡಗು ಇವಕ್ಕೆಲ್ಲ ಈಗ ಅವನು ಸರಿಸಾಟಿ.

ಇಷ್ಟು ಹೊತ್ತಿಗೆ ಹೊತ್ತು ದಳದಳ ಎನ್ನುತ್ತಿತ್ತು. ನೀರಿನಲ್ಲಿ ಕೈ ಕಾಲು ಬಡಿದಾಡಿ ಎಲ್ಲರಿಗೂ ದಣಿವಾಗಿತ್ತು. ಹೊಟ್ಟೆ ಹಸಿದಿತ್ತು. ಇನ್ನೇನು ಕತ್ತಲಾಗಿಯೇ ಬಿಡುತ್ತದೆ. ನಿಧಾನವಾಗಿ ನದಿಯ ನೀರು ಏರುತ್ತಿತ್ತು. ನದಿಯೊಳಗಣ ಮರಳ ದಿಬ್ಬಗಳ ಹೊರಗೆರೆ ಮಸಕು ಮಸಕಾಗಿತ್ತು - ಆಗಲೇ. ನೀರಿನಿಂದ ಎದ್ದು ಹೊರಬಂದವರ ಮೈಯೆಲ್ಲ ಸಡಿಲು ಸಡಿಲಾಗಿತ್ತು. ದೇಹ

ಹಗುರವಾದ ಹಾಗೆ ಅನಿಸಿತು. ಮಾಂಸಖಂಡಗಳೆಲ್ಲ ಗಾಳಿ ಹೋದ ಚೆಂಡಿನಂತೆ ಚಪ್ಪಟೆಯಾದ ಹಾಗೆ ಕಂಡವು. ನೀರಿನಿಂದ ಮೇಲಕ್ಕೆದ್ದ ಮೇಲೆ ಎಲ್ಲರನ್ನೂ ವಿಚಿತ್ರವಾದ ಹಸಿವು ಕಾಡತೊಡಗಿತು. ಕಾಲನ್ನು ಎತ್ತಿಡಲೇ ಸಾಧ್ಯವಿಲ್ಲ ಎಂಬಷ್ಟು ದಣಿವು ಹಠಾತ್ತಾಗಿ ತಲೆದೋರಿತು. ಹೊಟ್ಟೆ ಹಪ್ಪಳದಷ್ಟು ಚಪ್ಪಟೆಯಾಗಿತ್ತು.

“ ನಾವು ಬಿದ್ದದ್ದು ನೀರಿಗಾದರು ನಮ್ಮ ಹೊಟ್ಟೆಗೆ ಬೆಂಕಿ ಬಿದ್ದಹಾಗೆ ಆಗಿದೆಯಲ್ಲೋ ” ಎಂದ ಕೃಷ್ಣ.

“ ನನಗಂತೂ ಈ ಶಿವೈತಾಳನನ್ನೇ ತಿಂದು ಬಿಡುವ ಎನ್ನಿಸುತ್ತದೆ ” ಎಂದ ಮಾಧವ.

“ಬೇಡಪ್ಪ, ಅವನನ್ನು ತಿನ್ನಬೇಡ. ಆಮೇಲೆ ನಮಗೆ ಈಜು ಕಲಿಸುವವರು ಯಾರು ? ” ಎಂದು ಭೀಮರಾಯ ನಕ್ಕ. ಎಲ್ಲರೂ ನಕ್ಕರು.

“ ಬೇಡಪ್ಪಾ, ನಗುವುದಕ್ಕೂ ಶಕ್ತಿಯಿಲ್ಲ ” ಎಂದ ಮಾಧವ.

ಎಲ್ಲರೂ ತಮ್ಮ ತಮ್ಮ ಮನೆಗೋ ಹೋಟಲಿಗೋ ನಡೆದರು. ಆ ದಿನದಷ್ಟು ಚೆನ್ನಾಗಿ ಮಾಧವನಾಗಲೀ ಕೃಷ್ಣನಾಗಲೀ ಹಿಂದೆ ಎಂದೂ ಆ ಹೋಟಲಿನಲ್ಲಿ ಊಟ ಮಾಡಿರಲಿಲ್ಲ. ಅವರು ಊಟಮಾಡುತ್ತಿದ್ದಾಗ ಹೊಟ್ಟೆ ರಾಮಯ್ಯ ಅಲ್ಲಿಗೆ ಬಂದ.

“ ಈಜು ಕಲಿಯಬೇಡಿ ಅಂತ ನೀವು ಹೇಳಿದ್ದು ಏಕೆ ಅಂತ ನನಗೆ ಈಗ ಗೊತ್ತಾಯಿತು ” ಎಂದ ಕೃಷ್ಣ.

“ ಅದೇನಪ್ಪಾ, ನಿನಗೆ ಗೊತ್ತಾದದ್ದು ? ” ಎಂದು ಹೋಟಲಿನ ಒಡೆಯ ಕೇಳಿದ.

“ ಈ ದಿನ ಈಜಿ ಬಂದದ್ದರಿಂದ ನಮ್ಮ ಊಟ ಡಬಲ್. ದಿನಾ ಈಜಿದರೆ ಆ ಮೇಲೆ— ” ಈ ಮಾತು ಕೇಳಿ ಊಟಕ್ಕೆ ಕುಳಿತವರೆಲ್ಲ ನಕ್ಕರು. ರಾಮಯ್ಯನೂ ನಕ್ಕ.

“ ನೀವೆಲ್ಲ ಎಷ್ಟು ಊಟ ಮಾಡೀರಿ ಅಂತ ನನಗೆ ಗೊತ್ತು; ಆದರೂ ಹೇಳ್ತೀನೆ, ಕೇಳಿ, ಆ ಹೊಳೆಯ ಸಹವಾಸ ಬೇಡ. ನಾನೂ ಒಂದು ಕಾಲದಲ್ಲಿ ಈಜು ಕಲಿಯಲು ಈ ಹೊಳೆಗೆ ಹೋಗುತ್ತಿದ್ದೆ— ”

“ ಆಹಾ ನೀವೇ ? ನೀವು, ಈಜು ? ” ಎಂದು ಕೃಷ್ಣ ನಕ್ಕ.

"ನಿನಗೆ ನೋಡು ಎಲ್ಲ ತಮಾಷೆಯೇ. ಈ ಹೊಟ್ಟೆ ಆಗ ಇರಲಿಲ್ಲ, ಮಾರಾಯ. ಹುಟ್ಟುವಾಗಲೇ ಇಂಥ ಹೊಟ್ಟೆ ಪಡಕೊಂಡು ಬಂದಿದ್ದೆ ಅಂತ ತಿಳಿದಿದ್ದೀರಾ?" ಎಂದು, "ಆಗ ಒಂದು ಸಲ ಪ್ರವಾಹ ಹೊಡೆದುಕೊಂಡು ಬಂತು ನೋಡಿ; ನನ್ನ ಕಾಲೇ ತಪ್ಪಿ ಹೋಯಿತು. ಸಮುದ್ರದ ಕಡೆಯಿಂದ ಬಂದ ಆ ಹೊಯ್ಲಿಗೆ ನಾನು ತತ್ತರಿಸಿ ಹೋದೆ; ಬಿದ್ದು ಬಿಟ್ಟೆ. ಏನೋ ದೇವರ ದಯದಿಂದ ಎದ್ದು ನಿಂತು ದಡಕ್ಕೆ ಪಾರಾದೆ" ಎಂದ.

ಆದರೆ ಈ ಯಾವ ಬೆದರಿಕೆಯೂ ಕೃಷ್ಣನ ಮನಸ್ಸನ್ನು ಮುಟ್ಟಲಿಲ್ಲ. ಮನಸ್ಸು ಹಾಗೆ ಒಂದು ವಿಷಯದ ಒಂದೇ ಮುಖದಲ್ಲಿ ನೆಟ್ಟಾಗ ಉಳಿದ ಮುಖಗಳು ಕಂಡರೂ ಕಾಣಿಸುವುದಿಲ್ಲ. ಈಜು ಕಲಿಯುವುದು ಎಡೆಬಿಡದೆ ನಾಲ್ಕೈದು ದಿನ ನಡೆಯಿತು. ಕೃಷ್ಣ ಈಗ ಸಲೀಸಾಗಿ ಈಜಬಲ್ಲ. ಒಂದು ಇಪ್ಪತ್ತುಗಜ ದೂರ ಹೋಗಿ ಬರಬಲ್ಲ. ಆಗಲೇ ಅವನು ಸುಬ್ಬನ ಯುಕ್ತಿಗಳನ್ನೆಲ್ಲ ಒಂದೊಂದಾಗಿ ಕಲಿತಿದ್ದ. ನೀರಿನ ಮೇಲೆ ಬೆನ್ನುಕೆಳಗಾಗಿ ಅಂಗತ್ತನೆ ಮಲಗಿ ಕಪ್ಪೆಯಂತೆ ತೇಲುತ್ತಿದ್ದ, ಮಗ್ಗುಲಾಗಿ ಮಲಗಿ ಸುಯ್ಯೆಂದು ಮುಂದೆ ಸುಗಿಯುತ್ತಿದ್ದ, ನೀರಿನಲ್ಲಿ ಮುಳುಗಿ ಜಲಸ್ತಂಭನ ಮಾಡುತ್ತಿದ್ದ. ಹೊಳೆಯೊಳಗೆ ಅವನ ಉತ್ಸಾಹವೇ ಉತ್ಸಾಹ. ಚೆಂಡಿನಂತೆ ನೀರಿನ ಮೇಲೆ ಪುಟಿದು, ಚಿಮ್ಮಿ ಓಡಾಡುತ್ತಿದ್ದ. ಈ ನೀರಿಗೂ ಕೃಷ್ಣನಿಗೂ ಏನೋ ವಿಶೇಷ ಸಂಬಂಧವಿರುವ ಹಾಗೆ ಕಂಡಿತು. "ನೀನು ಜಲಚರವಾಗಿಯೇ ಹುಟ್ಟಬೇಕಾಗಿತ್ತು, ಕೃಷ್ಣ" ಎಂದ ಮಾಧವ. "ಹಿಂದಿನ ಜನ್ಮದಲ್ಲಿ ಈ ಕೃಷ್ಣ ಮೀನೇ ಆಗಿದ್ದಿರಬೇಕು" ಎಂದು ಶಿವೈತಾಳ ನಕ್ಕ.

"ಇನ್ನು ಎರಡು ಮೂರು ದಿನಗಳಲ್ಲಿ ನೀನೇ ನನಗೆ ಈಜು ಕಲಿಸಬಹುದು" ಎಂದು ಮೊಗವೀರಸುಬ್ಬನೂ ಹೇಳಿದ. ಈ ಮಾತುಗಳನ್ನು ಕೇಳಿ ಕೃಷ್ಣನಿಗೆ ನಿಜವಾಗಿಯೂ ಸಂತೋಷವಾಯಿತು. ಹಿಡಿದ ಕೆಲಸ ಸಾಧಿಸಿತು. ಹೊಳೆ ಅವನ ಸ್ವಾಧೀನವಾಯಿತು— ಕೃತಕೃತ್ಯತೆಯ ತೃಪ್ತಿ ಮುಖದಲ್ಲಿ ಮಿನುಗಿತು.

ಮಾಧವನೂ ಇಷ್ಟು ದಿನಗಳಲ್ಲಿ ಒಂದು ಮಾರು ದೂರ ನೀರಿನಲ್ಲಿ ಹೋಗುವುದನ್ನು ಕಲಿತಿದ್ದ. ಅವನಿಗೆ ಇನ್ನೂ ಅದರಲ್ಲಿ ಪರಿಣತಿ ಇಲ್ಲ. ಕೃಷ್ಣನ ಈ ಸುಲಭ ಸಿದ್ಧಿಯನ್ನು ಕಂಡು ಮಾಧವನ ಮನಸ್ಸು ಕೊಂಚ ನೋಯದೆ

ಇರಲಿಲ್ಲ, ಮುದುರದೆ ಇರಲಿಲ್ಲ. ಕೃಷ್ಣನಿಗೆ ಈಗ ದೊರೆಯುತ್ತಿರುವ ಪ್ರಶಂಸೆ ಯೆಲ್ಲ ತನಗೇ ದೊರೆತ್ತಿದ್ದರೆ – ಎಂದು ಒಂದು ಕ್ಷಣ ಅನಿಸಿತು. ಆದರೆ ಅದು ಹೇಗೆ ದೊರೆತೀತು? ಇಂಥ ಎಲ್ಲ ಕೆಲಸಗಳಲ್ಲೂ ಮಾಧವ ಯಾವಾಗಲೂ ಹಿಂದೆ. ಅದನ್ನು ಒಪ್ಪಲೇ ಬೇಕು. ಆದರೆ ಇದರಲ್ಲೂ ತಾನು ಎಲ್ಲರನ್ನೂ ಮೀರಿಸಲು ಸಾಧ್ಯವಾಗಿದ್ದರೆ ಖಂಡಿತವಾಗಿ ಚೆನ್ನಾಗಿತ್ತು. ಮಾಧವನ್ನು ಸೊಂಟದ ತನಕ ನೀರಿನಲ್ಲಿ ನಿಂತು ಹೀಗೆ ಯೋಚಿಸುತ್ತಾನೆ. ಆದರೆ ಕೃಷ್ಣನಿಗೆ ಇಂಥ ಯಾವ ಯೋಚನೆಯೂ ಇಲ್ಲ. ನದಿ ವಿಶಾಲವಾಗಿ ಹರಡಿದೆ. ಅದರ ತುಂಬ ನೀರು ಹಾಸಿದೆ. ಆ ನೀರಿನ ಮೇಲೆ ತೇಲುವುದಕ್ಕಿಂತ ಸುಖ ಬೇರೆ ಯಾವುದಿದೆ? ಹಾಗೆ ನೀರಿನ ಮೇಲೆ ಅಂಗತ್ತನೆ ಮಲಗಿ ಮೇಲೆ ಕಣ್ಣು ಹಾಕಿದರೆ ವಿಶಾಲ ನೀಲ ಆಕಾಶ ಕಾಣುತ್ತದೆ. ಅದೂ ಒಂದು ರೀತಿಯ ದೊಡ್ಡ ನದಿಯೇ ಸರಿ. ಅಲ್ಲಿ ಮೋಡಗಳು ಚಲಿಸುತ್ತವೆ– ನಡೆದಾಡುವ "ಕುದುರು" ಗಳಂತೆ. ಹಕ್ಕಿಗಳು ಅಲ್ಲಿ ಈಸುತ್ತವೆ, ಈ ಹುಡುಗರಂತೆ. ಹೀಗೆ ಆಗಾಗ ಕೃಷ್ಣನಿಗೆ ಅನ್ನಿಸುತ್ತದೆ. ಆದರೆ ಮುಖ್ಯವಾಗಿ ಕಲಿಯಬೇಕಾದದ್ದು ಈಜುವ ವಿದ್ಯೆಯ ಮರ್ಮಗಳನ್ನು. ದೂರ ದೂರ ಈಜಿ ಹೋಗುವುದು ಒಂದು; ಈಜುವ ಎಲ್ಲ ತಂತ್ರಗಳನ್ನೂ, ಕರಾಮತಿಗಳನ್ನೂ ಸ್ವಾಧೀನ ಪಡಿಸಿ ಕೊಳ್ಳುವುದು ಇನ್ನೊಂದು. ಈ ಎರಡು ಬಗೆಯ ಕೆಲಸಗಳಲ್ಲಿ ಅವನು ಸದಾ ಮಗ್ನ. ಈಗ ಸುಬ್ಬನೂ ಅವನೂ ಪಂದ್ಯ ಹೂಡಿ ಈಜುತ್ತಾರೆ. ನೀರನ್ನು ಸಿಗಿಯುತ್ತಾ ಬಾಣದಂತೆ ಚಿಮ್ಮಿ, ಮುಂದೋಡುತ್ತಾರೆ. ನೀರಿನಲ್ಲಿ ಮುಳುಗಿ ಅದೃಶ್ಯವಾಗಿ ಈಜಾಡುತ್ತಾರೆ.

ಹೀಗೆ ಏಳೆಂಟು ದಿನಗಳು ಕಳೆದುವು. ಅಂದು ಶನಿವಾರ. ಆಗಲೇ ಐದೂವರೆ ಗಂಟೆ. ಬಿಸಿಲಿನ ಬೇಗೆ ತಗ್ಗಿತ್ತು. ಕಾದ ಧೂಳಿನ ಮೇಲೆ ತಂಪು ಗಾಳಿ ಬೀಸುತ್ತಿತ್ತು. ಅಷ್ಟು ಹೊತ್ತು ಓದುತ್ತಿದ್ದ ಕೃಷ್ಣ ಪುಸ್ತಕವನ್ನು ತೆಗೆದಿಟ್ಟು ಆ ಎಂದು ಆಕಳಿಸಿದ. ಆ ಸದ್ದಿಗೆ ಮಾಧವನೂ ಕತ್ತೆತ್ತಿ ನೋಡಿ ಬಾಯಿ ಯನ್ನು ದೊಡ್ಡದಾಗಿ ತೆರೆದು ಬೆರಳಿನಿಂದ ಚಿಟಿಕೆ ಹೊಡೆದ.

"ಇನ್ನು ಹೊರಡೋಣ" ಎಂದ ಕೃಷ್ಣ.

"ಎಲ್ಲಿಗೆ?" ಎಂದ ಮಾಧವ, ಬೇಕೆಂತಲೇ.

"ಇನ್ನೆಲ್ಲಿಗೆ, ಹೊಳೆಗೆ!" ಕೃಷ್ಣನ ಮಾತಿನಲ್ಲಿ ಪ್ರೇಯಸಿಯ ಕಡೆಗೆ

ನಾಗಾಲ್ಲೋಟ ಮಾಡಲೆಳಸುವವನ ಉದ್ವೇಗವಿತ್ತು.

" ಈ ದಿನ ಈಜಲು ಹೋಗುವುದು ಬೇಡ, ಕೃಷ್ಣ. "

" ಏಕೆ ? "

" ನೀನು ಮರೆತೆಯಾ ? ಕ್ಲಬ್ಬಿನಲ್ಲಿ ಬೆಂಗಳೂರಿನ ಸಾಹಿತಿಗಳಾದ ರಾಮರಾಯರ ಭಾಷಣ ಇದೆಯಲ್ಲ ! "

" ಇದೆ. "

" ಇಬ್ಬರೂ ಹೋಗುವಾ, ಬಾ. ಹೊಳೆಯೇನು ಓಡಿ ಹೋಗುತ್ತದೆಯೇ ? ನಾಳೆ, ನಾಡಿದ್ದು ಹೋದರಾಯಿತು " ಎಂದು ಮಾಧವ ನುಡಿಯಲು ಕೃಷ್ಣ ಸ್ವಲ್ಪ ಹೊತ್ತು ಸುಮ್ಮನಿದ್ದ. ಅವನು ಯೋಚಿಸುತ್ತಿರುವಂತೆ ತೋರಿತು. ಆ ಮೇಲೆ ಒಂದೆರಡು ನಿಮಿಷಗಳು ಕಳೆದ ಬಳಿಕ

" ಇಲ್ಲ ಮಾಧವ, ಭಾಷಣಕ್ಕೆ ನೀನು ಹೋಗು; ನಾನು ಅಷ್ಟು ಹೊತ್ತು ಈಜಾಡಿ ಬರುತ್ತೇನೆ. "

" ಒಂದು ದಿನ ಈಜಾಡದಿದ್ದರೆ ಏನೋ ಕೃಷ್ಣಾ; ಬಾ ಇಬ್ಬರೂ ಸಭೆಗೆ ಹೋಗುವಾ. "

" ಇಲ್ಲ ಮಾಧವ; ನಾನು ಹೋಗುವ ಮೊದಲು ಈಜುವುದು ಚೆನ್ನಾಗಿ ಬರಲೇ ಬೇಕು. "

" ಈಗಲೇ ನಿನಗೆ ಚೆನ್ನಾಗಿ ಈಜಲು ಬರುತ್ತದಲ್ಲ — ಇನ್ನೇನೋ ? "

" ಇಷ್ಟು ಸಾಲದು; ಒಂದು ಫರ್ಲಾಂಗು ದೂರವಾದರೂ ಈಜಿ ಹೋಗಲು ಸಾಧ್ಯವಾಗದೆ ಹೋದರೆ ಏನು ಫಲವಯ್ಯಾ ? "

" ಯಾವುದನ್ನೂ ಇಷ್ಟು ಹಚ್ಚಿಕೊಳ್ಳಬಾರದು, ಕೃಷ್ಣ. ಒಂದು ದಿನ ಅದನ್ನು ಬಿಟ್ಟರೆ ಏನು ಮುಳುಗಿ ಹೋಗುತ್ತದೆ ? "

" ಆಗಲಿ, " ಎಂದು ಕೃಷ್ಣ ಬಟ್ಟೆ ಹಾಕಿಕೊಂಡ. ಅವನ ಕಡೆಗೆ ಒಮ್ಮೆ ಮಾಧವ ಮುಖವೆತ್ತಿ ನೋಡಿದ. ಕೃಷ್ಣನ ಅಂಗಸೌಷ್ಠವವನ್ನು ಕಂಡು ಬೆರಗಾದ. ಮೊದಲಿಗಿಂತ ಅವನು ಇನ್ನೂ ಬಲಿಷ್ಠನಾಗಿ ಬೆಳೆದಿದ್ದಂತೆ ತೋರಿತು. ಕೋಲುಗಳಂತಿದ್ದ ತನ್ನ ಕೈಕಾಲುಗಳನ್ನೂ ಮರದ ದಿಮ್ಮಿಗಳಂತೆ ಉಂಡುಂಡೆಯಾಗಿದ್ದ ಅವನ ಅಂಗಾಂಗಗಳನ್ನೂ ಒಂದು ಕ್ಷಣ ಮಾಧವ ಹೋಲಿಸಿಕೊಂಡ.

ಇಬ್ಬರೂ ಹೊರಟರು. ಹೋಟಲಿಂದ ನಾಲ್ಕು ಗಜ ದೂರ ಹೋಗಿರ

ಬಹುದು - ಅಷ್ಟೆ. ಅಷ್ಟರಲ್ಲಿ ಮೊಗವೀರ ಸುಬ್ಬ ಆ ಕಡೆಯಿಂದ ಬರುತ್ತಿದ್ದ

"ಕೃಷ್ಣ, ಈಜಾಡಲು ಇವತ್ತು ಬರುವುದಿಲ್ಲವೇನಯ್ಯಾ," ಎಂದು ಕೇಳಿದ.

ಕೃಷ್ಣ ಒಂದು ಕ್ಷಣ ಸುಮ್ಮನಿದ್ದ. ಆ ಮೇಲೆ

"ಮಾಧವಾ, ನೀನು ಸಭೆಗೆ ಹೋಗಯ್ಯ; ನಾನು ಹೋಗಿ ಒಂದು ಅರ್ಧ ಗಂಟೆ ಈ ಸುಬ್ಬನ ಜೊತೆಗೆ ಈಜಿ ಬರುತ್ತೇನೆ" ಎಂದು ಮತ್ತೆ ಹಿಂದೆ ನೋಡದೆ ಸುಬ್ಬನ ಸಂಗಡ ನಡೆದ. ಮಾಧವನೂ ಮತ್ತೆ ಬಾ ಎನ್ನಲಿಲ್ಲ. ತನ್ನ ಪಾಡಿಗೆ ತಾನು ಕ್ಲಬ್ಬಿನ ಕಡೆಗೆ ನಡೆದ.

ಕೃಷ್ಣ ನದಿಯ ಕಡೆಗೆ ನಡೆದ. ಹೋಟಲು ಬಿಟ್ಟು ಹೊರಟಾಗ ಈ ದಿನ ಈಜುವುದು ಬೇಡವೆಂತಲೇ ನಿರ್ಧರಿಸಿದ್ದ. ಆದರೆ ಸುಬ್ಬನನ್ನು ನೋಡಿದ ಕೂಡಲೇ ಆ ನಿರ್ಧಾರ ಕರಗಿ ಹೋಯಿತು. ನದಿ ಅವನನ್ನು ಕಣ್ಣಿಗೆ ಕಾಣದ ಹಗ್ಗಗಳಿಂದ ಬಿಗಿದು ಸೆಳೆಯಿತು. ಉರಿಯುವ ದೀಪದ ಕಡೆಗೆ ಓಡುವ ಪತಂಗದಂತೆ ಅವನ ಮನಸ್ಸು ಹೊಳೆಯ ಕಡೆಗೆ ಧಾವಿಸಿತು. ಎಷ್ಟು ದೂರ ಹೋದರೂ ಮತ್ತೆ ಮತ್ತೆ ಸುಳಿಯೊಳಕ್ಕೆ ಬಂದು ಸಿಕ್ಕಿ ಗಿರಗಿರನೆ ಸುತ್ತುವ ತರಗೆಲೆಯಂತೆ ಅವನ ಮನಸ್ಸು ಹೊಯ್ದಾಡಿತು. ಬುದ್ಧಿ ಎಷ್ಟು ಬೇಡಬೇಡವೆಂದರೂ ತಾನು ಒಲಿದ ಹೆಣ್ಣಿನ ಕಡೆಗೇ ಸುತ್ತುವ ಮನಸ್ಸಿನಂತೆ, ಕೃಷ್ಣನ ಮನಸ್ಸು. ನದಿಯ ತಣ್ಣನೆಯ ನೀರಿನಲ್ಲಿ ಮುಳುಗಿದ್ದರೆ ಮನಸ್ಸಿಗೆ ಏನೋ ಹಿತ ಅಲ್ಲಿ ಈಜಿ ಬಂದರೆ ಅಂಗಾಂಗಗಳೆಲ್ಲ ದಣಿದು ಒಂದು ಬಗೆಯ ಅಪೂರ್ವವಾದ ತಣಿವು. ಮಾಂಸಖಂಡಗಳೆಲ್ಲ ಸಡಿಲು ಸಡಿಲಾಗಿ ದೇಹದ ಬಿಗಿ ಮನಸ್ಸಿನ ಬಿಗಿ ಎರಡೂ ಕಡಿಮೆಯಾದ ಹಾಗೆ.

ಅಂದು ಹೊಳೆ ಬಹು ಶಾಂತವಾಗಿತ್ತು. ಗಾಳಿ ತಡೆಹಿಡಿದ ನಗುವಿನಂತೆ ಆಗಾಗ ಮುಗುಳಾಗಿ ಅರಳಿ ಮರೆಯಾಗುತ್ತಿತ್ತು. ನದಿಯ ಮೇಲೆ ಅಲೆಗಳೇ ಇಲ್ಲವೋ ಎಂಬ ಹಾಗೆ ಕನ್ನಡಿಯಂತೆ ಮೇಲ್ಮೈ ಲಕಲಕಿಸುತ್ತಿತ್ತು. ಆಗೀಗ ಅದು ಕೊಂಚ ಸುಕ್ಕು ಸುಕ್ಕಾಗಿ ಮತ್ತೆ ಅದೇ ಮೊದಲಿನ ನುಣುಪು ನೆಲಸುತ್ತಿತ್ತು. ಮುಳುಗುವ ಸೂರ್ಯನ ಕಿರಣ ಹೊಳೆಯ ನೀರಿಗೆ ಬೆಳ್ಳಿ ಮುಲಾಮು ಸವರಿದಂತೆ ಕಂಡಿತು. ಅಲ್ಲೊಂದು ಮೀನು ಇಲ್ಲೊಂದು ಮೀನು ಛಂಗನೆ ನೀರು ಬಿಟ್ಟು ಒಂದು ಗಜ ದೂರ ನೆಗೆದು ಆಟವಾಡುತ್ತಿದ್ದುವು.

ಧಡದ ಮೇಲಿನ ತೆಂಗಿನ ಗರಿಗಳು ಮೆಲ್ಲಗಾಳಿಗೆ ಕೊಂಚವೇ ಅಲ್ಲುಗ್ಗಿ ಮರ್ಮರಿಸುತ್ತಿದ್ದುವು. ನದಿಯ ನೀರಿನಲ್ಲಿ ಅವುಗಳ ನೀಳವಾದ ನೆಳಲು ಪ್ರತಿಬಿಂಬಿಸಿತ್ತು. ತೆಂಗಿನ ಗರಿಗಳ ನಡುವೆ ಕುಳಿತ ಕಾಗೆಗಳು ಕಾಕಾ ಎಂದವು. ಮೇಲೆ ಆಕಾಶದಲ್ಲಿ ಒಂದು ಹದ್ದು ಬಿಚ್ಚಿದ ರೆಕ್ಕೆ ಬಿಚ್ಚಿದಂತೆಯೇ ತೇಲುತ್ತಿತ್ತು. ಕೃಷ್ಣ ಸುಬ್ಬರು ನಿಂತ ಜಾಗದಿಂದ ಕೆಲವು ಗಜದೂರದಲ್ಲಿ ಇಬ್ಬರು ಮೊಗವೀರ ಹೆಂಗಸರು ನೀರಿನಲ್ಲಿ ಬಾಗಿ ಏಡಿಗಳನ್ನು ಹುಡುಕುತ್ತಿದ್ದರು. ಅದೋ ಅಲ್ಲಿ, ಆ ಮರಳದಿಬ್ಬದಾಚೆ ಒಂದು ಸಣ್ಣ ದೋಣಿಪಾತಿಯಲ್ಲಿ ಬೆಸ್ತರ ಹುಡುಗನೊಬ್ಬ ಗಳುವನ್ನು ಹೊಳೆಯ ತಳಕ್ಕೆ ಇಟ್ಟು ಮಿಾಟುತ್ತಿದ್ದ. ಪಾತಿ ಮೆಯ್ಯೆಂದು ಮುಂದೋಡುತ್ತಿತ್ತು. ಸುತ್ತಮುತ್ತಲ ಸೃಷ್ಟಿಯೇ ತೀರ ಗಂಭೀರ ವಾಗಿದ್ದಂತೆ ಕಂಡಿತು. ಆಕಾಶದ ಮೋಡಗಳು ಕೂಡಾ ತಮ್ಮ ಆಟಗಳನ್ನು ನಿಲ್ಲಿಸಿ ನಿಂತಲ್ಲೇ ನಿಂತು ಯಾವುದೋ ಯೋಚನೆಯಲ್ಲಿ ತಲ್ಲೀನವಾಗಿದ್ದಂತೆ ಕಂಡವು. ಆಚೆ ಗಂಗೊಳ್ಳಿ ದಡದ ಹತ್ತಿರ ಸಾಲು ಸಾಲು ದೋಣಿಗಳು ಸೋಮಾರಿಗಳಂತೆ ಮಲಗಿದ್ದುವು. ನಾಲ್ಕಾರು ಮಚ್ವೆಗಳು ಸಂಜೆಯ ಬೆಳಕಿನಲ್ಲಿ ನಿಂತು ಓಲಾಡುತ್ತಿದ್ದುವು.

ಕೃಷ್ಣ ಸುಬ್ಬನ ಸಂಗಡ ನೀರಿಗಿಳಿದಾಗ ಹೊಳೆ ಹುಬ್ಬುಗಂಟಿಕ್ಕುತ್ತಿದ್ದಂತೆ ತೋರಿತು. ಎದ್ದೂ ಏಳದ ಅಲೆಗಳು; ಇಪ್ಪತ್ತು ಗಜ ಹೋದರೂ ಮಂಡಿ ತನಕವೂ ಏರದ ನೀರು. ಗಾಳಿಗೇ ಉಸಿರು ಕಟ್ಟಿದ ಹಾಗೆ ಆಗೀಗ ಒಂದೊಂದು ನಿಟ್ಟುಸಿರು. ಆಚೆ ಸಮುದ್ರದ ಕಡೆ ನೋಡಿದರೂ ಅಷ್ಟೆ — ಎರಡಾಳುದ್ದ ಮೂರಾಳುದ್ದ ನೆಗೆದು ನೊರೆ ಕಾರುತ್ತಿದ್ದ ತೆರೆಗಳು ಈಗ ಕಾಣಿಸಲಿಲ್ಲ. ದೂರ ದಲ್ಲಿ ಪಶ್ಚಿಮದ ಅಳಿವೆಯ ಬಳಿ ತೆರೆಗಳು ಆರ್ಭಟ ತಗ್ಗಿ ಒಂದೆರಡು ಗಜ ಎತ್ತರಕ್ಕೆ ನೆಗೆದು ಹುರುಪಳಿದು ಬೀಳುವುದು ದೂರದಿಂದಲೇ ಕಾಣುತ್ತಿತ್ತು.

" ಏಕೋ ಹೊಳೆ ಒಂದು ತರಹ ಇದೆ ಇವತ್ತು " ಎಂದ ಸುಬ್ಬ

" ತರಹ ಏನು ? ಕೊರೆ ಇಳಿತ ಅಂತ ತೋರುತ್ತೆ. ನೀರೇ ಇಲ್ಲ ಎನ್ನುವ ಹಾಗೆ ಕಾಣುತ್ತದೆ — ಅಷ್ಟೆ " ಎಂದ ಕೃಷ್ಣ.

" ಇಲ್ಲ ಕಣಯ್ಯ; ಏನೋ ಸಂದೇಹ ಬರುತ್ತದೆ ನನಗೆ - ಈ ಹೊಳೆ ನೋಡಿದರೆ. ಇಳಿಯಲೋ ಬೇಡವೋ - ಅಂತ " ಎಂದು ಸುಬ್ಬ ಕೊಂಚ ಅಧೀರನಾದಂತೆ ನುಡಿದ. ಆದರೆ ಕೃಷ್ಣನ ಮನಸ್ಸಿನಲ್ಲಿ ಯಾವ ಅಂಜಿಕೆಯೂ

ಮೂಡಲಿಲ್ಲ. ಅವನಿಗೆ ಆ ಹೊಳೆಯ ಭಂಗಿಯಲ್ಲಿ ಯಾವ ಮಾರ್ಪಾಟೂ ಕಾಣಿಸಲಿಲ್ಲ. ಅದೇ ಹೊಳೆ. ಅದೇ ನೀರು. ಬಗೆದು ಸೀಳಿ ತೇಲಿ ಗೆಲ್ಲ ಬೇಕಾದ ನೀರು. ಅದರೊಡನೆ ಸೆಣಸುವ ಕಲಿ ಆತ. ಅದನ್ನು ವಶಪಡಿಸಿ ಕೊಂಡು ಪಳಗಿಸುವ ಆಶೆಯಲ್ಲದೆ ಬೇರೆ ಆಶೆ ಅವನ ಮನಸ್ಸಿನಲ್ಲಿ ಮೊಳೆಯದು.

ಕೊನೆಗೆ ಇಬ್ಬರೂ ನೀರಿಗಿಳಿದು ಈಜತೊಡಗಿದರು. ದಡದಿಂದ ಬಹಳ ದೂರ, ಸುಮಾರು ಅರ್ಧ ಫರ್ಲಾಂಗು ದೂರ ನಡೆದ ಮೇಲೆಯೇ ಅವರಿಗೆ ಈಜಲು ಅನುಕೂಲವಾದ ನೀರು ಸಿಕ್ಕಿತು. ಪಂಥ ಕಟ್ಟಿ ಈಜಿದರು. ಮುಂದೆ ಕಾಣುತ್ತಿದ್ದ ಮರಳ ದಿಬ್ಬದ ತನಕ ಈಜಿ ಅದನ್ನು ಸುತ್ತಿ ಈಚೆಗೆ ಬರುವರು. ಮತ್ತೆ ಅಂಗತ್ತನಾಗಿ ಈಜುವುದು; ನೀರಲ್ಲಿ ಮುಳುಗುವುದು; ಮಗ್ಗುಲಾಗಿ ಮುನ್ನುಗ್ಗುವುದು. ಇಷ್ಟು ಹೊತ್ತಿಗೆ ದಡದ ಮೇಲೆ ಕೆಲವು ಹುಡುಗರು ನಿಂತಿದ್ದರು. ಅವರಲ್ಲಿ ಶಿವೈತಾಳನೂ ಇದ್ದ. ಕೃಷ್ಣ ಮತ್ತೆ ಸುಬ್ಬ ಆಗಲೇ ಈಜು ಆರಂಭಿಸಿಬಿಟ್ಟದ್ದರಿಂದ ಅವನು ಹಾಗೆಯೇ ದಡದ ಮೇಲೆ ಕುಳಿತು ಅವರ ಪಂದ್ಯವನ್ನು ಗಮನಿಸುತ್ತಿದ್ದ. ಇಷ್ಟು ಹೊತ್ತಿಗಾಗಲೇ ಹೊಳೆಯಲ್ಲಿ ನೀರು ಅಂಗುಲ ಅಂಗುಲವಾಗಿ ಏರುತ್ತಿತ್ತು. ಆಗಲೇ ದಡದವರೆಗೂ ನೀರು ಕೈ ಚಾಚಿತ್ತು. ನಿಶ್ಯಬ್ದವಾಗಿದ್ದ ಅಲೆಗಳು ಕ್ರಮಕ್ರಮವಾಗಿ ಬಹು ನೋವಿನಿಂದೆಂಬಂತೆ ನೀಳವಾಗಿ ಮರ್ಮರಿಸತೊಡಗಿದುವು. ಸೂರ್ಯನೂ ಮುಳುಗಿದ್ದ ಆಗ ತಾನೇ. ಮಬ್ಬು ನಿಧಾನವಾಗಿ ಕವಿಯುತ್ತಿತ್ತು.

" ಸಾಕು ಕೃಷ್ಣಾ, ಇನ್ನು ಹೋಗೋಣ " ಎಂದ ಸುಬ್ಬ.

" ಸ್ವಲ್ಪ ತಡೆಯೋ, ಮಹಾರಾಯ. ಇವತ್ತು ಈಜಿದ್ದು ಈಜಿದ ಹಾಗೇ ಆಗಲಿಲ್ಲ, ಇನ್ನೂ. ನೋಡು, ಇನ್ನೊಂದು ಸಲ ಆ ಮರಳ ದಿಬ್ಬವನ್ನು ಬಳಸಿ ಬರೋಣ. "

ಈಗ ಆ ಮರಳ ದಿಬ್ಬದ ತಲೆ ಮಾತ್ರ ನೀರಿನಲ್ಲಿ ಕಾಣುತ್ತಿತ್ತು. ಅದರ ಆಚೆ ಕಡೆ ಸಮುದ್ರದ ದಿಕ್ಕಿನಿಂದ ನೀರು ಸುಯ್ಯೆಂದು ಬರುತ್ತಿತ್ತು. ನೀರು ನೊರೆನೊರೆಯಾಗುತ್ತಿರುವುದು ಈಚೆಗೂ ಕಾಣಿಸುತ್ತಿತ್ತು. ಸಮುದ್ರದ ಘರ್ಜನೆ ಮಾರಿಯ ಢೋಲಿನ ಬಡಿತದಂತೆ ಬಂದು ಕಿವಿಗೆ ಹಾಯುತ್ತಿತ್ತು. ಗಾಳಿಯೂ ಕೂಡಾ ಎಚ್ಚರಗೊಂಡು ಹುಚ್ಚು ಹುಚ್ಚಾಗಿ ಬೀಸತೊಡಗಿತು – ಜೋರಾಗಿ ಒಂದು ಸಲ; ಸ್ವಲ್ಪ ಹೊತ್ತು ಶಾಂತ; ಮತ್ತೆ ಭೋ ಎಂದು.

ತೆಂಗಿನ ಮರಗಳ ಎಲೆಗಳು ಬರಬರ ಸರಸರ ಎಂದು ಧೀಂಕಿಡತೊಡಗಿದುವು. ಮರದ ಮೇಲಣ ಕಾಗೆಗಳು ಕಾಕಾ ಎಂದು ಅರಚಿದುವು. ಸಂಜೆಯ ಆ ನಿಶ್ಶಬ್ದದಲ್ಲಿ ದೂರದಲ್ಲಿ ಯಾರೋ ಬೆಸ್ತರು ' ಏ ಲಾಲಿ ಲೇಸೋ, ಏ ಮಾಲಿ ಲೇಸೋ ' ಎಂದು ಹೇಳುತ್ತಿದ್ದುದು ಕರುಣಾಕ್ರಂದನದಂತೆ ಗಾಳಿಯಲ್ಲಿ ತೆರೆ ತೆರೆಯಾಗಿ ತೇಲಿ ಬಂತು. ಪಶ್ಚಿಮ ದಿಗಂತದ ಹತ್ತಿರ ರಕ್ತದ ನೊರೆಯುಕ್ಕಿ ಅಡಗಿತು. ಗಾಳಿಗೆ ಭೂತಾವೇಶ ಬಂದ ಹಾಗೆ ತೋರಿತು. ಭೋ ಭೋ ಭೋ ಎಂದು ವಿಚಿತ್ರವಾಗಿ, ವಿಕಟವಾಗಿ ಅದು ಮೊರೆಯಿತು. ತೆಂಗಿನ ಗರಿಗಳು ಹೃದಯದ್ರಾವಕವಾಗಿ ಮರ್ಮರಿಸಿದುವು. ಮೋಡ ತುಂಬಿದ ಆಕಾಶದಲ್ಲಿ ಕಾರ್ಮೋಡಗಳು ಸೊಕ್ಕಿದ ಆನೆಗಳ ಹಿಂಡಿನಂತೆ ಮಾರ್ಮಲೆದುವು.

ಆಗಲೇ ಕೃಷ್ಣ ಸುಬ್ಬ ಇಬ್ಬರೂ ಮರಳ ದಿಬ್ಬವನ್ನು ಪಶ್ಚಿಮ ದಿಕ್ಕಿನಲ್ಲಿ ಬಳಸಿ ಅವರಾಚೆ ಉತ್ತರಕ್ಕೆ ಈಜಿ ಹೋಗಿದ್ದರು. ಆ ಕಡೆ ಸಮುದ್ರದ ಅಲೆಗಳು ಹೊಳೆಯ ಬಾಯಿಯಲ್ಲಿ ಹೊಕ್ಕು ತೆರೆತೆರೆಯಾಗಿ ದಿಣ್ಣೆ ದಿಣ್ಣೆಗಳಾಗಿ ನೇರವಾಗಿ ಬುಸುಗುಟ್ಟಿ ಬಂದು ಮೊರೆಯುತ್ತಿದ್ದುವು. ನೀರು ತಕಪಕ ತಕಪಕ ಕುಣಿಯಿತು. ಕೊಪ್ಪರಿಗೆಯಲ್ಲಿ ಕುದಿಯುತ್ತಿರುವ ಕಬ್ಬಿನ ಹಾಲಿನಂತೆ ಅದು ಕೊತ ಕೊತ ಕುದಿದು ನೊರೆಗರೆಯಿತು. ನೀರಿನ ಭಾರಿ ಭಾರಿ ಹಲಗೆಗಳು ಉರುಳುರುಳಿ ಬಂದು ಮರಳ ದಿಣ್ಣೆಗೆ ಬಡಿದು ಸಿಗಿದು ಸೀಳಿ ಹೋಳಾಗಿ ಗರಗಸಕ್ಕೆ ಸಿಕ್ಕಿದಂತೆ ಪುಡಿಪುಡಿಯಾಯಿತು. ಹೊಳೆ ಎಚ್ಚರಗೊಂಡಿತ್ತು. ತನ್ನ ಕತ್ತಲಿನಾಟವನ್ನು ಆಗಲೇ ಆರಂಭಿಸಿಬಿಟ್ಟಿತ್ತು. ಹಸಿದ ಹುಲಿಯಂತೆ ಅದು ಗರ್ಜಿಸಿತು; ಮದವೇರಿದ ಆನೆಯಂತೆ ಘೀಳಿಟ್ಟಿತು. ತೋಳದಂತೆ ಮುಸುಗುಟ್ಟಿತು. ಅದು ತನ್ನ ಸಾವಿರ ಕೈಗಳನ್ನು ಚಾಚಿ ಹಾ ಎಂದು ಬಾಯಿ ತೆರೆದು ದಿಕ್ಕುದಿಕ್ಕುಗಳನ್ನು ಬಾಚಿತು, ದಡದಡವನ್ನು ತಡಕಿತು. ಬಂದು ಬಡಿಯುತ್ತಿರುವ ತೆರೆಗಳ ಹೊಡೆತಕ್ಕೆ ಕೃಷ್ಣ ಸುಬ್ಬ ಇಬ್ಬರೂ ತತ್ತರಿಸಿ ಹೋದರು. ಅಷ್ಟು ಹೊತ್ತಿನಿಂದ ಈಜಿ ಈಜಿ ಇಬ್ಬರೂ ಆಗಲೇ ಆಯಾಸಗೊಂಡಿದ್ದರು. ನೀರನ್ನು ಬಡಿದು ಬಡಿದು, ಬಗೆದು ಬಗೆದು ಕೈ ಮರದ ಕೈಯ ಹಾಗೆ ಆಗಿತ್ತು. ಹೇಗಾದರೂ ಆಚೆ ದಡ ಸೇರಿದರೆ ಸಾಕೆಂದು ಇಬ್ಬರೂ ಶಕ್ತಿ ಮೀರಿ ಕೈಕಾಲು ಬಡಿದರು. ಎಷ್ಟು ಕಷ್ಟಪಟ್ಟರೂ ಆ ನೀರಿನ ಹೊಡೆತದಲ್ಲಿ, ಆ ಅದಮ್ಯಪ್ರವಾಹದ ಉಬ್ಬರದಲ್ಲಿ, ಆ ಉದ್ವಿಗ್ನ ಜಲದ ಉನ್ಮತ್ತ

ಹೂಂಕಾರದಲ್ಲಿ ಅವರ ಗತಿ ಕ್ಷಣಕ್ಷಣವೂ ಕುಂಠಿತವಾಗುತ್ತಿತ್ತು. ಆಹಾ, ಮರಳ ದಿಬ್ಬದ ಪೂರ್ವದ ಕೊನೆ ಅಲ್ಲೇ ಕಾಣುತ್ತಿದೆ. ಹತ್ತುಗಜ ದೂರ ಅಷ್ಟೆ. ಇನ್ನು ಅದನ್ನು ಬಳಸಿ ದಕ್ಷಿಣಕ್ಕೆ ಮೈಯಿಕ್ಕಿದರೆ ಕೊಂಚ ಕ್ಷೇಮ. ಆ ಮೇಲೆ ಈ ಹೊಡೆತವಿಲ್ಲ, ಈ ಬೊಬ್ಬಾಟವಿಲ್ಲ; ನಿಧಾನವಾಗಿ ಈಜಿ ಹೋಗಬಹುದು.

ಅದೋ, ಮರಳ ದಿಬ್ಬದ ಕೊನೆ ಬಂದೇ ಬಿಟ್ಟಿತು. ದಿಬ್ಬದ ಮೇಲೆ ಈಗ ಮುಂಡಿ ತನಕ ನೀರು ಏರಿತ್ತು. ಅಲ್ಲಿ ಕೊಂಚ ಹೊತ್ತು ನಿಂತು ದಣಿವಾರಿಸಿಕೊಂಡರೂ ಪರವಾ ಇಲ್ಲ. ಸುಬ್ಬನು ಒಂದು ಸಲ ತನ್ನ ಶಕ್ತಿಯನ್ನೆಲ್ಲ ತನ್ನ ರಟ್ಟೆಯಲ್ಲಿ ಕೇಂದ್ರೀಕರಿಸಿ ನೀರನ್ನು ಬಗೆದು ಚಿಮ್ಮಿದ; ದಿಬ್ಬ ಸಿಕ್ಕಿತು. ಅದರ ಮೇಲೆ ನಿಂತ. ನಿಂತು ಹಿಂತಿರುಗಿ ನೋಡಿದ. ಕೃಷ್ಣ ಇನ್ನೂ ನಾಲ್ಕಾರು ಗಜ ದೂರದಲ್ಲಿದ್ದ. ಅವನ ಹಿಂದಿನಿಂದ ಪರ್ವತಾಕಾರದ ಅಲೆಯೊಂದು ಹೆಬ್ಬಾವಿನಂತೆ ಮಿಡುಕಾಡುತ್ತ ಭೋರ್ಗರೆಯುತ್ತ ಮುಂದೊತ್ತಿ ಬರುತ್ತಿತ್ತು. ನೋಡಿ ಸುಬ್ಬ "ಕೃಷ್ಣಾ, ಬಾರೊ ಬೇಗ, ಬೇಗ" ಎಂದು ಕೂಗಿದ. ಗಾಳಿಯ ಆ ಭೋರಾಟದಲ್ಲಿ ಅದು ಕೃಷ್ಣನ ಕಿವಿಗೆ ಬಿತ್ತೋ ಇಲ್ಲವೋ. ಆದರೆ ಅವನು ಮರಳ ದಿಬ್ಬದ ಹತ್ತಿರ ಬಂದು ಇನ್ನೇನು ಸುಬ್ಬನನ್ನು ಸಮೀಪಿಸಬೇಕು — ಅಷ್ಟರಲ್ಲಿ ಆ ನೀರಿನ ಬೆಟ್ಟ ಬಂದು ಅವನನ್ನು ಬಡಿಯಿತು. ಕೃಷ್ಣ ತರಗೆಲೆಯಂತೆ ಚಿಮ್ಮಿ ಆ ಪ್ರವಾಹದ ಜೊತೆಗೆ ಸರ್ರನೆ ತೇಲಿ ಹೋದ. ಒಂದು ಕ್ಷಣ ದಿಗ್ಭ್ರಾಂತನಾದ ಸುಬ್ಬ ನೋಡುತ್ತಿರುವ ಹಾಗೆಯೇ ಕೃಷ್ಣ ಆಗಲೇ ಬಹುದೂರ ತೇಲಿ ಹೋಗಿದ್ದ. "ಸುಬ್ಬ, ಸತ್ತೆ" ಎಂದು ಒಮ್ಮೆ ಮಾಡಿದ ಅವನ ಚೀತ್ಕಾರ ಪಾತಾಳದಿಂದ ಬಂದ ಧ್ವನಿಯಂತೆ ಅಸ್ಪಷ್ಟವಾಗಿ ಕೇಳಿ ಸುಬ್ಬನ ಎದೆ ನಡುಗಿತು. ಕೂಡಲೇ ಸರಸರನೆ ಈಜಿ ದಡಕ್ಕೆ ಈಸಿ ಬಂದು ಕೂಗೆಬ್ಬಿಸಿದ; ಶಿವೈತಾಳ ಚೀರಿದ; ಹುಡುಗರೆಲ್ಲ ಸೇರಿ ಕಿರಿಚಿದರು. ಬೆಸ್ತರು ನಾಲ್ಕೈದು ಜನ ಸೇರಿ ದೋಣಿ ತೆಗೆದುಕೊಂಡು ನಾಗಾಲೋಟದಿಂದ ಗಳುವನ್ನು ಮಿಾಟುತ್ತ ಹುಟ್ಟನ್ನು ನೀರಿನಲ್ಲಿ ಕಡೆಯುತ್ತ ಪ್ರವಾಹವನ್ನು ಅಟ್ಟಿ ನಡೆದರು. ಶಿವೈತಾಳ ಹಾಗೆಯೇ ಚೀರುತ್ತ ಮಾಧವನನ್ನು ಹುಡುಕಿಕೊಂಡು ಹೊರಟ; ಹುಚ್ಚನಂತೆ ಬೀದಿಯ ಮೇಲೆ ಓಡುತ್ತ ಅವನು ಓಡುತ್ತಿದ್ದುದನ್ನು ಕಂಡು ಬಹಳ ಜನ ನಕ್ಕರು.

೮

ಮಾಧವ ರೂಮಿನಲ್ಲಿ ಒಬ್ಬನೇ ಈಗ. ಕೃಷ್ಣ ಕುಳಿತಿರುತ್ತಿದ್ದ ಆ ಜಾಗ ಈಗ ಖಾಲಿ. ತುಂಬು ಪ್ರೈಯ, ತುಂಬು ನಗೆಯ ಆ ಉತ್ಸಾಹಿ ಈಗ ಇಲ್ಲ. ಅವನ ತಂದೆ ಬಂದರು, ತಾಯಿ ಬಂದರು; ಆಸ್ಪತ್ರೆಗೆ ಹೋಗಿ ಬಂದರು. ಡಾಕ್ಟರು ತಲೆ ಆಡಿಸಿದರು, ಅಲ್ಲಾಡಿಸಿದರು, ನಿಟ್ಟುಸಿರು ಬಿಟ್ಟರು. ಕನಸಿನಲ್ಲಿ ಓಡಾಡಿದಂತೆ ಮಾಧವನೂ ಅತ್ತಿತ್ತ ಓಡಾಡಿದ. ಸುತ್ತಮುತ್ತಲೂ ಮಂಜು ಕವಿದ ದಾರಿಯಲ್ಲಿ ದಿಕ್ಕು ಕಾಣದೆ ಅಲೆದಾಡಿದ.

ಕೃಷ್ಣನಿಲ್ಲ. ಅದನ್ನು ನಂಬುವುದು ಹೇಗೆ ? ಎಲ್ಲವೂ ಇದೆ. ಜಗತ್ತು ಮೊದಲಿನಂತೆಯೇ. ಅದೇ ಹೋಟಲು, ಅದೇ ರೂಮು, ಅದೇ ಊರು, ಸ್ಕೂಲು, ನದಿ, ಜನ; ಆಕಾಶ, ಮೋಡ, ಸೂರ್ಯ, ಚಂದ್ರ, ನಕ್ಷತ್ರ. ಮರ, ಗಿಡ, ಬಳ್ಳಿ, ಹೂವು, ಕಾಯಿ, ಹಣ್ಣು, ತರಗೆಲೆ,. ಎಲ್ಲವೂ ಮೊದಲಿನಂತೆಯೇ ನಿಶ್ಚಿಂತವಾಗಿ ಕಂಡುವು. ಆದರೆ ಮಾಧವನ ಮನಸ್ಸು ಮಾತ್ರ ಅಲ್ಲೋಲ ಕಲ್ಲೋಲವಾಯಿತು. ಅದೇ ರೂಮಿನಲ್ಲಿ ಅಲ್ಲಿ ಕೂತು ಓದುತ್ತಿದ್ದ ಕೃಷ್ಣ, ತನ್ನ ಬಾಲ್ಯದಿಂದಲೂ ಸಂಗಾತಿಯಾಗಿ, ಗೆಳೆಯನಾಗಿ, ತನ್ನ ಜೀವನದ ಒಂದು ಮುಖ್ಯ ಅಂಗವಾಗಿ, ತನ್ನ ಹೃದಯದ ಒಂದು ಮುಖ್ಯ ಕೊಂಬೆ ಯಾಗಿ, ಜೀವನದಲ್ಲಿ ತನಗಿದ್ದ ಆಶೆಯ ಒಂದು ಬೇರಾಗಿ ಇದ್ದ ಕೃಷ್ಣ ಈಗ ಇಲ್ಲ. ಅದನ್ನು ನಂಬುವುದೇ ಅಸಾಧ್ಯ. ಇದು ಹೇಗೆ, ಏಕೆ, ಏತಕ್ಕಾಗಿ ? ಈ ಪ್ರಶ್ನೆಗಳ ಮಾಲೆಗೆ ಉತ್ತರವಿಲ್ಲ. ಈ ಪ್ರಶ್ನೆಗೆ ಎಲ್ಲರೂ ಮೂಕರು, ಎಲ್ಲವೂ ಮೂಕ. ಸುತ್ತಮುತ್ತಲಿನ ಜಗತ್ತೂ ಇದೇ ಪ್ರಶ್ನೆಯನ್ನು ಕೇಳುತ್ತದೆ. ಕಣ್ಣು ಬಿಟ್ಟು ನೋಡಿದಲ್ಲೆಲ್ಲ ಇದೇ ಪ್ರಶ್ನೆಯ ದೊಡ್ಡ ದೊಡ್ಡ ಕಂದರಗಳು ಬಾಯಿ ತೆರೆಯುತ್ತವೆ. ಆದರೆ ಅವನ್ನೆಲ್ಲ ದಾಟಿ ಆಚೆ ಹೋಗಬಲ್ಲ ಸಂಕವಿಲ್ಲ.

ಸಾವು. ಅದೊಂದು ಭಯಂಕರವಾದ ಸತ್ಯ. ಮನೆಯ ಮುಂದೆ ತಿಪ್ಪೆಯ ರಾಶಿಯನ್ನು ಕೆದಕುತ್ತ ಕಾಳು ಹುಡುಕುತ್ತಿರುವ ಕೋಳಿಮರಿಯನ್ನು ಆಕಾಶದಿಂದ ಬಂದೆರಗುವ ಗಿಡುಗವೋ ಹದ್ದೋ ಕಚ್ಚಿಕೊಂಡು ಹೋಗುತ್ತದೆ. ಆ ಮರಿ ಎಲ್ಲಿ ಹೋಯಿತು ? ಆ ರೆಕ್ಕೆ, ಪುಕ್ಕ, ಆ ಪುಟ್ಟ ಪುಟ್ಟ ಕಾಲು,

ಆ ಕೊ-ಕ್ಕೊ-ಕ್ಕೋ ........? ಈಗ ತಾನೇ ನೀರು ಬಿಟ್ಟು ಮೇಲಕ್ಕೆ ಬಂದು ಬೆಚ್ಚನೆ ಬಿಸಲಿಗೆ ಮೈಯೊಡ್ಡಿ ಮಲಗಿದೆ ಆ ಕಪ್ಪೆ. ಮರದ ಸಂದಿಯಿಂದ ಗಕ್ಕನೆ ಕಾಗೆ ಎರಗಿ ಬಂದು ಅದನ್ನು ಹಿಡಿದು ಹಾರಿ ದೂರ ಹೋಗಿ ಕುಕ್ಕಿ ಕುಕ್ಕಿ ಕೊಲ್ಲುತ್ತದೆ; ಕಪ್ಪೆ ಪ್ರಾಣಭಯದಿಂದ ಕೇಳುವವರ ಕರುಳು ಬಾಯಿಗೆ ಬರುವಂತೆ ಕೂಗುತ್ತದೆ. ಅದನ್ನು ಬಿಡಿಸುವವರಿಲ್ಲ. ಬಿಳಿ ಹೊಟ್ಟೆ ಮೇಲಾಗಿ ಅದು ಮಲಗುತ್ತದೆ, ಕಾಗೆ ಕುಕ್ಕುತ್ತದೆ, ಕುಕ್ಕುತ್ತದೆ.

ಸಾವು ಅದು ಎಲ್ಲಿಂದ ಬರುತ್ತದೆ? ಹುಲ್ಲನ್ನು ಹುಡುಕುತ್ತ ಕಾಡಿನಂಚಿಗೆ ಹೋಗುತ್ತದೆ ಹಸು; ಕಾಡಿನ ಪೊದೆಯ ಮರೆಯಲ್ಲಿ ಎರಡು ಕೆಂಗಣ್ಣುಗಳು ಹೊಳೆಯುತ್ತವೆ, ಮೀಸೆ ನಿಮಿರಿ ನಿಲ್ಲುತ್ತದೆ, ಮೈ ಕುಗ್ಗುತ್ತದೆ. ಹಸುವಿನ ಗೋಣಿನಿಂದ ರಕ್ತ ಚಿಮ್ಮುತ್ತದೆ ಈಗ ಹಸುವೆಲ್ಲಿ? ಕೊಳೆಯುತ್ತಿರುವ ಮಾಂಸದ ರಾಶಿ; ಹದ್ದು, ನಾಯಿ, ನರಿ, ಕಾಗೆಗಳಿಗೆ ಹಬ್ಬದೂಟ. ಕೊಟ್ಟಿಗೆಯ ಕರು 'ಅಂಬಾ' ಎಂದು ಅರಚುತ್ತದೆ; ಅಮ್ಮ ಮತ್ತೆ ಬರುವುದಿಲ್ಲ, ಇಲ್ಲ, ಎಂದಿಗೂ ಇಲ್ಲ.

ಸಾವು - ಹುಟ್ಟು. ಅವಳಿ ಜವಳಿ. ಒಂದನ್ನು ಬಿಟ್ಟು ಇನ್ನೊಂದಿಲ್ಲ. ಒಂದರ ಸಂಗಡವೇ ಇನ್ನೊಂದು. ಒಂದು ಬೇಕಾದರೆ ಇನ್ನೊಂದೂ ಬೇಡ ವೆನ್ನಲಾಗದು. ಸಾವು ಹಳೆಯದು. ಅದರ ಗಡ್ಡ ಯಾವಾಗಲೂ ಬಿಳುಪೇ. ಆದರೂ ಅದು ಅಷ್ಟೇ ಹೊಸತು. ಅದು ಚಿರಪರಿಚಿತವಾದದ್ದು. ಆದರೂ ಸದಾ ಅಪರಿಚಿತ. ನೆಳಲಿನಂತೆ ಅದು ನಮ್ಮ ಕಾಲ ಕೆಳಗೆ ಬಿದ್ದಿರುತ್ತದೆ; ಉಸಿರಾಡಿಸುವ ಗಾಳಿಯಂತೆ ಸುತ್ತುವರಿದಿರುತ್ತದೆ. ಅದು ಆರಿ ಹೋದಂತೆ ಕಾಣುವ ಜ್ವಾಲಾಮುಖಿ; ಅದರ ಮೇಲೆ ನಮ್ಮ ಆಟ, ನಮ್ಮ ಪಾಟ, ನಮ್ಮ ಹಾರಾಟ. ಅದು ಯಾವಾಗ ಎಚ್ಚರುವುದೋ, ಯಾರು ಬಲ್ಲರು?

ಸಾವು ಬರುವ ದಾರಿಗೆ ಸುಂಕವಿಲ್ಲ. ಅದು ಆಂಬ್ಯುಲೆನ್ಸ್ ಕಾರಿನಂತೆ. ಅದಕ್ಕೆ ಉಳಿದೆಲ್ಲ ವಾಹನಗಳೂ ದಾರಿ ಬಿಟ್ಟುಕೊಡಬೇಕು. ಹಳಿಯಿಲ್ಲದೆ ಓಡಾಡುವ ಮೆಯಿಲ್‌ಟ್ರೇಯಿನ್ ಅದು. ಅದನ್ನು ನಾವು ಹುಡುಕಿಕೊಂಡು ಹೋಗಬೇಕಾಗಿಲ್ಲ. ಅದೇ ನಮ್ಮನ್ನು ಹುಡುಕಿಕೊಂಡು ಬರುತ್ತದೆ, ನಾವಿರು ವಲ್ಲಿಗೆ, ನಾವೆಲ್ಲಿದ್ದರೆ ಅಲ್ಲಿಗೆ. ಪ್ರತಿಯೊಬ್ಬ ಮನುಷ್ಯನ ಜೀವನವೂ ಒಂದೊಂದು ಸ್ಟೇಶನ್ನು. ಅಲ್ಲಿಗೆ ಅದು ಬಂದೇ ಬರುತ್ತದೆ. ಯಾವಾಗ? ಅಂಥ ರೈಲ್ವೇ

ಟೈಮ್‌ಟೇಬಲ್ ಅಥವಾ ಗೈಡ್ ಇನ್ನೂ ಯಾರೂ ತಯಾರಿಸಿಲ್ಲ. ಬಂದಾಗ ಬಂದೀತು — ಕೇಳುವವರು ಯಾರು ? ಹೇಳುವವರು ಯಾರು ?

ಸಾವಿಗೂ ಒಂದು ನ್ಯಾಯವಿದೆಯೇ — ಹೇಳುವುದು ಕಷ್ಟ. ಅದರದ್ದು ಎಂಥ ನ್ಯಾಯವೇ ಇರಲಿ, ಅದು ನಮಗಂತೂ ತಿಳಿವ ನ್ಯಾಯವಲ್ಲ. ನಮಗೆ ಅದರ ವ್ಯವಹಾರವೆಲ್ಲ ಅನ್ಯಾಯವಾಗಿಯೇ ಕಾಣುತ್ತದೆ. ಎಳಸಸಿಯನ್ನೇ ಕತ್ತರಿಸಬೇಕಾದರೆ ಬೀಜವನ್ನಾದರೂ ಏಕೆ ಬಿತ್ತಬೇಕು ? ಎಳೆಯದಾದುವರಲ್ಲಿ, ಬೆಳೆಯುತ್ತಿರುವುದರಲ್ಲಿ, ಪರಿಪಾಕಗೊಳ್ಳುತ್ತಿರುವುದರಲ್ಲಿ ಅದಕ್ಕೆ ಇಷ್ಟೇಕೆ ಆಶೆ ? ಬೆಂಕಿಯುರಿಸಲು ಯಾವುದನ್ನು ಉಪಯೋಗಿಸಬೇಕು ? ಚಿಗುರೆಲೆ ಯನ್ನೋ, ತರಗೆಲೆಯನ್ನೋ ? ಚಿಗುರನ್ನೇ ಕಿತ್ತು ಬೆಂಕಿಗೆಸೆಯುತ್ತದೆ ಸಾವು; ಹೂವನ್ನೇ ಕಿತ್ತು ಹರಿಯುತ್ತದೆ ಸಾವು; ಮೊಳಕೆಯನ್ನೇ ಹಿಸುಕಿ ಗಹಗಹಿ ಸುತ್ತದೆ ಸಾವು.

ಈ ವಿಚಾರಗಳು ಏನೇ ಇರಲಿ, ಮಾಧವನ ಮನಸ್ಸು ಮಾತ್ರ ಸಿಡಿಲಿನ ಹೊಡೆತಕ್ಕೆ ಸಿಕ್ಕಿ ತಪ್ಪಿದ ಎಳಸಸಿಯಂತೆ ತತ್ತರಿಸಿತು. ಸುಡುವ ಮನೆಯೊಳಗೆ ಸಿಕ್ಕಿ ಅರೆಬೆಂದು ಅಂತೂ ಜೀವಸಹಿತ ಬಚಾವಾದವನಂತೆ ಅವನ ಮನಸ್ಸು ಬಾಡಿತು, ಕಮರಿತು. ವಸಂತಕಾಲದಲ್ಲಿ ಹಿಗ್ಗುತ್ತಿದ್ದ ಮನಸ್ಸು ಕುಗ್ಗಿತು, ಮುದುರಿತು. ಮನಸ್ಸಲ್ಲಿ ಬೆಳಗುತ್ತ ಭೂತ ಭವಿಷ್ಯಗಳನ್ನು ಬೆಳಗುತ್ತಿದ್ದ ಆ ದೀಪ ಆರಿಹೋದಂತೆ ಆಯಿತು. ಹೇಳಲಾರದ, ಹೇಳಬಾರದ ದುಃಖ ನರ ನರದಲ್ಲೂ ಲಾವಾದಂತೆ ಹರಿದು ನೆತ್ತರ ಕಣಕಣವನ್ನೂ ಅಗ್ನಿರಸವಾಗಿ ಕುದಿ ಸಿತು. ಜೀವನದ ಮೂಲಸೆಲೆಗಳೇ ಬತ್ತಿಹೋದಂತೆ, ತನ್ನ ಬಾಳಿನ ನದಿ ಕ್ಷಣಕ್ಷಣಕ್ಕೂ ಕಿರಿದಾಗುತ್ತ ಈಗ ಕೇವಲ ಒಂದು ನೀರ ಗೆರೆಯಾದಂತೆ ಅವನಿಗೆ ಅನಿಸಿತು.

ಕೃಷ್ಣ ಹೋದ. ಅವನಿಗೆ ಏನು ತಾನೆ ಕಡಿಮೆಯಿತ್ತು ? ಪ್ರೀತಿಸುವ ತಂದೆ ತಾಯಿಗಳು, ಬಂಧು ಬಳಗ; ಹೃದಯವಾಸಿಗಳಾದ ಸ್ನೇಹಿತರು; ಬುದ್ಧಿ, ಜನಪ್ರಿಯತೆ; ಯವ್ವನ, ಆರೋಗ್ಯ, ಉತ್ಸಾಹ, ಆನಂದ. ಆದರೂ ಹೊರಟೇ ಹೋದನಲ್ಲ! — ಕೃಷ್ಣ, ನೀನು ಹೀಗೆ ಹೊರಟು ಹೋಗಬಹುದೇ? ಅಲ್ಲವೋ, ಇನ್ನು ಯಾರಲ್ಲಿ ಸುಖದುಃಖ ಹೇಳಿಕೊಳ್ಳಲೋ ? ಹೇಳದೆಯೇ ನನ್ನ ಸುಖ ದುಃಖಗಳನ್ನು ನಿನ್ನ ಹಾಗೆ ಇನ್ನಾರು ತಾನೇ ತಿಳಿದುಕೊಳ್ಳಬಲ್ಲರು ? —

ಕೃಷ್ಣಾ, ಕೃಷ್ಣಾ, ಕೃಷ್ಣಾ — ಓಗೊಡೋ ಮಾರಾಯ; ಒಂದೇ ಒಂದು ಸಲ ಅನ್ನು 'ಮಾಧವಾ.' ನಿನ್ನ ಬೆಳ್ದಿಂಗಳಂಥ ನಗೆ ಮತ್ತೆ ಒಂದು ಸಲ ಅರಳಲಿ ಗೆಳೆಯ. ನೀರಸವಾದ, ಜಡವಾದ ಮಾತುಗಳ ಮಧ್ಯೆ ನಿನ್ನ ಧ್ವನಿ ನಕ್ಷತ್ರದಂತೆ ಒಂದೇ ಒಂದು ಸಲ ಮಿನುಗಬಾರದೆ?

ಬೇಡ, ಮಾತೂ ಬೇಡ. ಒಂದು ಕ್ಷಣ ಇಲ್ಲಿ ಓ ಅಲ್ಲಿ ನಿನ್ನ ಆ ಸ್ಥಳದಲ್ಲಿ ಕುಳಿತುಕೋ ಸಾಕು. ಕಿಟಕಿಯಾಚೆ ಎಂದಿನಂತೆ ಆ ಮರದ ಎಲೆ ಅಲುಗುತ್ತಿದೆ. ಅದರ ಮೇಲೆ ನೋಡು, ಆ ಹಸುರು ಗಿಳಿ ತನ್ನ ಕೆಂಪು ಕೊಕ್ಕನ್ನು ಆಡಿಸುತ್ತ ಹೇಗೆ ಕೂತಿದೆ. ಬಾರೋ, ಕೃಷ್ಣ. ನಾವಿಬ್ಬರೂ ಇಲ್ಲೇ ಕುಳಿತು ಆಕಾಶವನ್ನು ನೋಡುತ್ತಿರಲಿಲ್ಲವೆ? ಈಗ ನೋಡು. ಆ ಆಕಾಶ ಹೇಗಿದೆ! ಎಷ್ಟು ನೀಲ. ಅದರ ಮಧ್ಯೆ ನೋಡು ಆ ಮೋಡದ ಮರಿ ಆನೆ ಮರಿಯಂತೆ - ಅಲ್ಲಲ್ಲ - ಸಿಂಹದ ಮರಿಯಂತೆ - ಅದೂ ಅಲ್ಲ — ಕರಡಿಯ ಮರಿಯಂತೆ ಹೇಗೆ ಕ್ಷಣಕ್ಕೊಂದು ರೂಪತೊಟ್ಟು ನಲಿದಾಡುತ್ತಿದೆ.

— ನೋಡಿದೆಯಾ - ಈ ಶಖೆಯಲ್ಲಿ ಆ ತಂಗಾಳಿಯ ಅಲೆ ಹೇಗೆ ಬಂದು ಬೀಸಿತು. ಎಷ್ಟು ತಂಪಾಯಿತು! ಬಾರೋ, ಒಂದೇ ಒಂದು ಸಲ - ನಿನ್ನನ್ನು ಬಿಟ್ಟು ಒಂದು ಕ್ಷಣ ಅಗಲುವುದಿಲ್ಲ ಕಾಣೋ. ಆಟದ ಬಯಲಿಗೂ ಬರುತ್ತೇನೆ - ನಿನ್ನ ಸಂಗಡ. ಫುಟ್‌ಬಾಲ್ - ವಾಲಿಬಾಲ್ - ಯಾವ ಆಟವೋ ಆಡುತ್ತೇನೋ ನಿನ್ನ ಸಂಗಡ.

— ನಿನ್ನನ್ನು ಬಿಟ್ಟು ಊರಿಗೆ ಹೇಗೋ ಹೋಗಲಿ? ಹೋಗಿ ಏನು ಕಡಿಯಲಿ? ಎಲ್ಲಿಗೆ ಹೋಗಲಿ? ಆ ಪೇರಳೆ ಮರ, ಆ ಮಾವಿನ ಮರ, ಆ ಗೋವೆ ಮರ, ಆ ಹಾಡಿ, ಹಕ್ಕಲು, ಗದ್ದೆ, ಬಯಲು, ತೋಟ — ಅವುಗಳನ್ನು ನೀನಿಲ್ಲದೆ ಹೇಗೆ ಕಾಣಲಿ? ಹಗಲೆಲ್ಲ ಆ ಗದ್ದೆ ಬಯಲಿನಲ್ಲಿ ಆಡುತ್ತಿದ್ದೆವಲ್ಲ, ಕೃಷ್ಣ. ಮಳೆಗಾಲವೇನು, ಚಳಿಗಾಲವೇನು, ಬೇಸಗೆಯೇನು. ನಾವು ಚಿಕ್ಕವರಾಗಿದ್ದಾಗ ಹೇಗೆ ಕಾಲ ಕಳೆಯಿತು. ಮತ್ತೆ ಹಾಗೇ ಆಡೋಣ — ಆಗಬಹುದೆ? ತೋಡಿನ ನೀರಿಗೆ ಕಲ್ಲೆಸೆದು ಅಲೆಅಲೆಗಳನ್ನು ನೋಡುತ್ತ ನಿಲ್ಲೋಣ, ಬಾರೋ. ಮೊದಲ ಮಳೆ ಬಂದು ಕೆರೆ ತುಂಬ ಹಳದಿ ಬಣ್ಣದ ಕಪ್ಪೆಗಳು ಒಟಗುಟ್ಟುತ್ತ ಇರುವುದನ್ನು ಗಂಟೆಗಟ್ಟಲೆ ನಿಂತು ನೋಡೋಣ ಶಾಲೆಗೆ ಹೋಗುತ್ತ ದಾರಿಯಲ್ಲಿ ಇದೆಯಲ್ಲ, ನಮ್ಮೂರಿನಲ್ಲಿ, ಆ ಗೋವೆ

ತೇಲಿ ಬಂತು. ಆಕಾಶ ಹಸನ್ಮುಖವಾಯಿತು. ಬಳ್ಳಿ ತಕತಕ್ಕ ಎಂದಿತು. ಮರ ಥಾ ಥೈ ಎಂದಿತು. ಬುಟ್ಟಿಯ ಮುಚ್ಚಳವನ್ನೆತ್ತಿದ ಹಾವಿನಂತೆ ಅವನ ಮನಸ್ಸು ಹೆಡೆಯೆತ್ತಿ ನಿಂತಿತು.

ಅಹಂಕಾರ ಸರಸರನೆ ಹರಿಯಿತು.

ಬೆಳಕು ಹರಿಯಿತು.

ಎಂಥ ಕತ್ತಲಾದರೂ ಕಳೆಯಬೇಕು.

ಬೇಸಗೆಯ ಶಖೆ ತಣಿಸುವ ಮಳೆ ಸುರಿಯಲೇ ಬೇಕು.

ಸಾವಿನ ಮನೆಯಲ್ಲಿ ಮಗುವಿನ ಕೇಕೆ ಮತ್ತೆ ಮೊಳಗಲೇ ಬೇಕು.

ಕಡಿವ ಮರದ ಬುಡದಲ್ಲಿ ಮತ್ತೆ ಚಿಗುರು ಚಿಗಿಯಲೇ ಬೇಕು.

ಏಟು ತಿಂದು ಬಿದ್ದ ಮನಸ್ಸು ಮತ್ತೆ ಚೇತರಿಸಿಕೊಂಡು ಏಳಬೇಕು.

ಪಾತಾಳಕ್ಕಿಳಿದ ಮಾಧವ ನೆಲದ ಮೇಲೆ ಮತ್ತೆ ನಿಲ್ಲಬೇಕು.

ಅವನು ಮತ್ತೆ ಆಕಾಶಕ್ಕೆ ನೆಗೆಯಲೇ ಬೇಕು.

ಮಾಧವನು ಮತ್ತೆ ಮಾಧವನಾಗಲೇ ಬೇಕು.

ಗಾಯ ಮಾಯ್ದು ಮೇಲೆ ಮತ್ತೆಲ್ಲಿಯ ಕೀವು? — ಇನ್ನೊಂದು ಗಾಯ ಆಗುವ ತನಕ?

೯

ಪರೀಕ್ಷೆ ಅಂತೂ ಮುಗಿಯಿತು. ಕೃಷ್ಣ ನಿಲ್ಲದೆ ಓದೂ ಸಾಗಿತು; ಹಾಗೆ ಪರೀಕ್ಷೆ ಬಂತು, ಹೋಯಿತು ಮಾಧವನು ಪರೀಕ್ಷೆಯಲ್ಲಿ ಅಷ್ಟು ಕೆಟ್ಟದ್ದಾಗಿ ಏನೋ ಮಾಡಲಿಲ್ಲ. ಆದರೆ ಮನಸ್ಸು ಒಪ್ಪುವಷ್ಟು ಚೆನ್ನಾಗಿ ಯಾವ ವಿಷಯ ದಲ್ಲೂ ಉತ್ತರ ಬರೆಯಲಾಗಲಿಲ್ಲ. ತರಗತಿಯ ಎಲ್ಲ ಪರೀಕ್ಷೆಗಳಲ್ಲೂ ಇಂಗ್ಲಿಷ್ ಸಂಸ್ಕೃತಗಳಲ್ಲಿ ಅಷ್ಟು ಚೆನ್ನಾಗಿ ಉತ್ತರ ಬರೆದು ಅಷ್ಟು ಹೆಚ್ಚು ಮಾರ್ಕ್ಸ್ ತೆಗೆಯುತ್ತಿದ್ದ ತಾನು ಈ ಪಬ್ಲಿಕ್ ಪರೀಕ್ಷೆಯಲ್ಲಿ ಆ ವಿಷಯಃಗಳಲ್ಲೇ ಅಷ್ಟು ತೃಪ್ತಿಕರವಾಗಿ ಏಕೆ ಬರೆಯಲಿಲ್ಲ? ಇಂಗ್ಲಿಷ್‌ನಲ್ಲಿ ಒಂದು ಪ್ರಶ್ನೆಯನ್ನೇ ಬಿಡ ಬೇಕಾಯಿತು. ಏಕೆ? ಸಮಯವನ್ನು ಅಷ್ಟು ಹೊಂದಿಸಿಕೊಳ್ಳುವುದಕ್ಕೆ ಆಗದೆ ಹೋಯಿತೇ? ಸಂಸ್ಕೃತದಲ್ಲಿ ಆ ಒಂದು ಪ್ರಶ್ನೆಯನ್ನು ಏಕೆ ಅಪಾರ್ಥ ಮಾಡಿಕೊಳ್ಳಬೇಕಾಗಿತ್ತು? ಚೆನ್ನಾಗಿ ಗೊತ್ತಿದ್ದ ಪ್ರಶ್ನೆಯನ್ನು ಬಿಟ್ಟು ಗೊತ್ತಿಲ್ಲ ದುದನ್ನೇ ಏಕೆ ಕೈಗೆ ತೆಗೆದುಕೊಂಡ? ಇರುವ ಶಕ್ತಿಯ ಅರ್ಧಾಂಶ ಮಾತ್ರ ಏಕೆ ಪರೀಕ್ಷೆಯಲ್ಲಿ ವಿನಿಯೋಗವಾಯಿತು?

ಈ ಎಲ್ಲ ಪ್ರಶ್ನೆಗಳಿಗೆ ಅವನಿಗೆ ಉತ್ತರ ಸಿಕ್ಕಲಿಲ್ಲ. ಈ ಜಗತ್ತಿನಲ್ಲಿ ಯಾವ ಪ್ರಶ್ನೆಗೆ ತಾನೇ ಸಲೀಸಾಗಿ ಉತ್ತರ ಸಿಕ್ಕುತ್ತದೆ? ಉತ್ತರವಿಲ್ಲದ ಈ ಪ್ರಶ್ನೆಗಳು ಹುಟ್ಟುವುದಾದರೂ ಏಕೆ? ಈ ಪ್ರಶ್ನೆಗಳಿಗೇನಾದರೂ ಕೊನೆ ಉಂಟೆ? ಆಕಾಶದ ಲಕ್ಷ ನಕ್ಷತ್ರಗಳಂತೆ ಅವು ಮಿನುಗುತ್ತವೆ; ಮೋಡದಲ್ಲಿ ಮರೆಯಾಗು ತ್ತವೆ. ಮತ್ತೆ ಸಂದರ್ಭ ನೋಡಿಕೊಂಡು ಕಣ್ಣು ಮಿಟುಕಿಸುತ್ತ ಜೀವ ತಿನ್ನುತ್ತವೆ.

ಯೋಚಿಸುತ್ತ ಹೋದಂತೆ ಮಾಧವನ ಮನಸ್ಸು ಕ್ರಮಕ್ರಮವಾಗಿ ಸಡಿಲುಗೊಳ್ಳತೊಡಗಿತು. ಸ್ಥಿರವಾದ ಆಧಾರಗಳೆಂದು ತಾನು ನಂಬಿ ನಿಂತಿದ್ದ ನಂಬಿಕೆಗಳೆಲ್ಲ, ಬಂಡೆ ಕಲ್ಲುಗಳಂತೆ ಅಚಲವಾಗಿ ತೋರುತ್ತಿದ್ದ ವಿಶ್ವಾಸಗಳೆಲ್ಲ ಕೇವಲ ಮರಳರಾಶಿಗಳಾಗಿ ಕಂಡವು. ಬಂದು ಹಾಯುತ್ತಿದ್ದ ಪ್ರವಾಹದಲ್ಲಿ ಕಣಕಣವಾಗಿ ಕ್ಷಣಕ್ಷಣಕ್ಕೂ ಅವು ಕರಗಿ ಹೋದುವು. ಇನ್ನು ಪ್ರವಾಹದಲ್ಲಿ ಬೀಳುವುದು – ಅಷ್ಟೆ. ಅದು ಎತ್ತ ಕೊಚ್ಚಿಕೊಂಡು ಹೋದರೆ ಅತ್ತ ಪಯಣ.

ಪ್ರವಾಹದ ಗತಿಯನ್ನು ನಿರೋಧಿಸಿ ಎಷ್ಟು ಹೊತ್ತು ನಿಲ್ಲಬಹುದು? ಆ ಪ್ರಯತ್ನ ವ್ಯರ್ಥವಲ್ಲವೆ?

ಒಂದು ಕಾಲದಲ್ಲಿ ದೇವರಲ್ಲಿ ಅವನಿಗಿದ್ದ ಅಗಾಧ ವಿಶ್ವಾಸ ಕ್ರಮಕ್ರಮ ವಾಗಿ ಬತ್ತಿ ಹೋಯಿತು. ಅವನು ದೇವರ ಕಡೆಗೆ ಕಳುಹಿಸುತ್ತಿದ್ದ ಅಹವಾಲು ಒಂದೆರಡೆ? ದೇವಸ್ಥಾನಕ್ಕೆ ಹೋದರೆ ಅಲ್ಲಿನ ವಿಗ್ರಹದ ಶಾಂತಗಂಭೀರ ಮೂರ್ತಿ ಅವನ ಮುಗ್ಧ ಮನಸ್ಸಿನ ಮಾತನ್ನೆಲ್ಲ ಅರಿಯುವಂತೆ ತೋರುತ್ತಿತ್ತು. ಭಯದಿಂದ, ಭಕ್ತಿಯಿಂದ ಸಾಷ್ಟಾಂಗ ಎರಗುತ್ತಿದ್ದ. ಒಂದೊಂದು ತಪ್ಪು ಮಾಡಿದಾಗಲೂ ಮನಸ್ಸು ಕ್ಷಮೆಗಾಗಿ ದೇವರನ್ನು ನೆನಸುತ್ತಿತ್ತು. ಪಶ್ಚಾತ್ತಾಪದ ಕಂಬನಿ ಧಾರೆಧಾರೆಯಾಗಿ ಇಳಿದು ಮನಸ್ಸು ಇಬ್ಬನಿಯಲ್ಲಿ ಮಿಂದು ಎಳತಳಿರಿನಂತೆ ಹೊಳೆಯುತ್ತಿತ್ತು. ಆಗ ತಂಗಾಳಿ ಆಡುವುದು, ತುಂಬಿ ಝೇಂಕರಿಸುವುದು; ಆಕಾಶದ ಘಂಟೆ ಮೊಳಗುವುದು. ಮನಸ್ಸಿನಲ್ಲಿ ಧೂಪ ಹಚ್ಚಿಟ್ಟಂತೆ ಜೀವನವೆಲ್ಲ ಪರಿಶುದ್ಧವಾಗಿ ಗಮಗಮಿಸುವುದು. ಆದರೆ ಮತ್ತೆ ಸುಂಟರಗಾಳಿಯ ಹಾಗೆ ಮನಸ್ಸು ಒಲ್ಲದ ಆಶೆ ಮನಸ್ಸಿನಲ್ಲಿ ಮೊರೆಯುವುದು; ಧೂಳು ಕವಿಯುವುದು, ಎಲ್ಲ ಮಬ್ಬುಮಬ್ಬಾಗುವುದು. ಆಗ ದೇವರು ಎಲ್ಲಿ? ಗರ್ಭಗುಡಿಯೊಳಗೆ- ಕತ್ತಲಲ್ಲಿ, ಬಾವಲಿಗಳ ಕೂಡ.

ಅದು ವರೆಗೂ ಮಾಧವನ ಮನಸ್ಸಿನಲ್ಲಿ ತನ್ನ ಮನೆಯ ಧಾರ್ಮಿಕ ವಾತಾವರಣ ದಟ್ಟವಾಗಿತ್ತು. ಅದರ ಸಂಕೇತವಾಗಿ ತಲೆಯ ಮೇಲೆ ಜುಟ್ಟು ಇನ್ನೂ ಇತ್ತು. ಪ್ರತಿದಿನವೂ ತಪ್ಪದೆ ಎರಡು ಬಾರಿ ಸಂಧ್ಯಾವಂದನೆ ಮಾಡುತ್ತಿದ್ದ — ಅನೂಲಾಗ್ರವಾಗಿ. ಈಗೀಗ ಆ ಸಂಧ್ಯಾವಂದನೆ ಸರಿಯಾಗಿ ನಡೆಯುವುದಿಲ್ಲ. ಅದು ಶಾಸ್ತ್ರಪೂರ್ತ. ಅದರಲ್ಲಿ ನಂಬಿಕೆ ತಪ್ಪಿತು. ಯಾವುದನ್ನು ತಾನೇ ಏಕೆ ನಂಬಬೇಕು?

ಪರೀಕ್ಷೆ ಮುಗಿದ ಕೂಡಲೇ ಹಜಾಮನ ಅಂಗಡಿಗೆ ಹೋಗಿ 'ಕ್ರಾಪು ಮಾಡು' ಎಂದ. ತಲೆ ತುಂಬ ಕೂದಲು ದಟ್ಟವಾಗಿ ಬೆಳೆದಿತ್ತು. ಎಣ್ಣೆ ಹಚ್ಚಿ ಬಾಚಿದರೆ ಸೊಗಸಾಗಿ ಜಡೆ ಹಾಕಬಹುದು - ಅಷ್ಟು. ಕೂದಲು ಸಿಕ್ಕು ಸಿಕ್ಕಾಗಿ ಹೊರೆ ಹೊರೆಯಾಗಿ ಇತ್ತು. ತನ್ನ ಆ ವರೆಗಿನ ಜೀವನದ ಪ್ರತಿನಿಧಿಯಂತೆ ಅದು ಗಂಟುಗಂಟಾಗಿತ್ತು. ಕ್ರಾಪು ಬಿಡಿಸುವುದು ತನ್ನ ತಂದೆಯ ಇಷ್ಟಕ್ಕೆ ವಿರೋಧ ಎಂದು ಮನಸ್ಸು ಒಂದು ಕ್ಷಣ ಹೆದರಿತು. ಆದರೆ ಹೆದರು

ವುದು ಎಲ್ಲಿಯ ತನಕ? ಏಕೆ? ಅವನಿಗೂ ಒಂದು ಮನಸ್ಸು ಇಲ್ಲವೆ? ಆ ಮನಸ್ಸು ಹೇಳಿತು: "ಈ ಜುಟ್ಟು ನಿನಗೆ ಇನ್ನು ಬೇಡ!" ಸರಿ, ಅದು ಹೋಗಬೇಕು.

ಹಜಾಮನ ಕತ್ತರಿ ಕರಕರ ಎಂದಿತು. ಕೂದಲು ರಾಶಿರಾಶಿಯಾಗಿ ಕೆಳಗೆ ಬಿತ್ತು. ನೀಳವಾದ ಆ ಕೂದಲುಗಳನ್ನು ನೋಡಿ ಮಾಧವನಿಗೆ ಒಂದು ಕ್ಷಣ ಅಯ್ಯೋ ಎನ್ನಿಸಿತು. ಎಷ್ಟು ನಯವಾಗಿ, ಎಷ್ಟು ನೀಳವಾಗಿ, ಎಷ್ಟು ಅಚ್ಚ ಕಪ್ಪಾಗಿ ಇದೆ ಕೂದಲ ರಾಶಿ. ತಲೆ ಹಗುರವಾಯಿತು. ಆದರೆ ಮನಸ್ಸು ಹಗುರವಾಗಲಿಲ್ಲ.

ವಾಸ್ತವಲೋಕದ ಬಿಸಿ ಹೆಚ್ಚು ಹೆಚ್ಚು ತಟ್ಟುತ್ತ ಬಂದ ಹಾಗೆ ಮಾಧವನ ಮನಸ್ಸು ಹೆಚ್ಚು ಹೆಚ್ಚಾಗಿ ತನ್ನ ಒಳಗುಹೆಯಲ್ಲೇ ಮಲಗತೊಡ ಗಿತು. ಹೊರಗಿನ ಬೆಳಕಿಗಿಂತ ಆ ಕತ್ತಲೇ ಹೆಚ್ಚು ಸುಖ. ಆ ಕತ್ತಲಲ್ಲಿ ಮತ್ತೆ ದೀಪ ಹಚ್ಚಬೇಕು. ಆ ಕತ್ತಲಲ್ಲಿ ಬೆಳಕು ತರುವುದೇ ಮುಖ್ಯವಾದ ಕೆಲಸ. ಆಕಾಶ ದೀಪ ಆ ಒಳಗಿನ ಆಕಾಶದಲ್ಲೇ ಮೊದಲು ಅರಳಬೇಕು. ಆ ಮೇಲೆ ಹೊರಗೆ ಬರಬೇಕು. ಮೊದಲು ಕಳೆಯ ಬೇಕಾದ್ದು ಒಳಗಿನ ಕತ್ತಲು, ಆ ಮೇಲೆ ಹೊರಗಿನದು.

ಈ ಎರಡು ಲೋಕಗಳನ್ನು ಹೊಂದಿಸುವುದು ಹೇಗೆ? ಹೊರಲೋಕ, ಒಳಲೋಕ. ಈ ಎರಡೂ ಬೇರೆ ಬೇರೆಯೆ? ಒಂದಕ್ಕೊಂದಕ್ಕೆ ಏನೂ ಸಂಬಂಧವಿಲ್ಲವೆ? ಆಗಾಗ ಒಂದಕ್ಕೊಂದು ಹಾಯುತ್ತದೆ. ಇಲ್ಲಿನ ದನಿ ಅಲ್ಲಿ ಮಾರ್ದನಿ ಕೊಡುತ್ತದೆ. ಇಲ್ಲಿನ ಗಾಯಕ್ಕೆ ಅಲ್ಲಿ ನೋವು. ಇಲ್ಲಿನ ನಡುಕಕ್ಕೆ ಅಲ್ಲಿ ಮರುಕ. ಸರಿ. ಆದರೆ ಅವುಗಳನ್ನು ಸಮನ್ವಯಗೊಳಿಸುವುದು ಹೇಗೆ?

ಒಂದು ನಂಬಿಕೆ ಬೇಕು — ಅದೇ ಆಧಾರ; ಅದೇ ಈ ಎರಡು ಜಗತ್ತು ಗಳನ್ನು ಹೊಂದಿಸುವ, ಒಂದುಗೂಡಿಸುವ ಸೇತುವೆ. ಆದರೆ ಅದು ಎಲ್ಲಿಂದ ಬರಬೇಕು? ಇನ್ನೊಬ್ಬರ ನಂಬಿಕೆ ತನ್ನದಾದೀತೆ? ಇನ್ನೊಬ್ಬರ ಕಾಲ ಮೇಲೆ ತಾನು ಹೇಗೆ ನಿಲ್ಲಲು ಸಾಧ್ಯ? ತನ್ನ ಮನಸ್ಸಿಗೂ ಕಾಲು ಬೇಕು. ಆ ಕಾಲು ಮೊಳೆಯದೆ ಗತ್ಯಂತರವಿಲ್ಲ. ಈ ರೀತಿ ತೆವಳುವುದು ಎಷ್ಟು ಕಾಲ?

ಈ ಹಳೆಯ ನಂಬಿಕೆಗಳೆಲ್ಲ ಮನಸ್ಸಿನಲ್ಲಿ ಕಸದಂತೆ ತುಂಬಿವೆ ಎಂದು

ತೋರಿತು. ಅವನ ವಿಜ್ಞಾನದ ಅಧ್ಯಾಪಕರು - ಸ್ವತಂತ್ರವಿಚಾರದ ಧೀರ ಚಿತ್ತರಾದ ಆ ಲಕ್ಷ್ಮಣರಾಯರು — ಇದೇ ಮಾತನ್ನೇ ತಮ್ಮ ಪ್ರತಿ ಕ್ಲಾಸಿನಲ್ಲೂ ಒತ್ತಿಒತ್ತಿ ಹೇಳುತ್ತಿದ್ದರು. "ನಿಮ್ಮ ಮನಸ್ಸು ಕೆಲಸ ಮಾಡಲಿ. ಸುಮ್ಮನೆ ವಿಚಾರವಿಲ್ಲದೆ ಏನನ್ನೂ ನಂಬಬೇಡಿ. ನೀವು ಮನುಷ್ಯರು, ಕುರಿಗಳಲ್ಲ." ಅಂಧಶ್ರದ್ಧೆಯ ನೆಲೆಬೀಡಾಗಿದ್ದ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಅವರು ಹೊಸ ವಿಚಾರದ ಕಿಡಿಗಳನ್ನು ಬಿತ್ತಿದ್ದರು. ಮಾತಾಡುವಾಗ ಅವರ ಆ ಯಥಾರ್ಥವಾದಿತ್ವ ಪ್ರತಿ ಶಬ್ದದಲ್ಲೂ ಧ್ವನಿಸುತ್ತಿತ್ತು. ಅನ್ಯಾಯವನ್ನು ಅವರು ಖಂಡಿಸುತ್ತಿದ್ದಾಗ ಮಾಧವನ ಮನಸ್ಸು ಮಹಾಸೈನ್ಯದಂತೆ ತನ್ನ ರಣಕಹಳೆಯನ್ನು ಊದುತ್ತಿತ್ತು.

ಅವರ ಜೀವನವೂ ಹಾಗೆಯೇ. ಅವರ ನ್ಯಾಯನಿಷ್ಠುರಸ್ವಭಾವಕ್ಕೆ ಎಲ್ಲರೂ ಅಂಜುತ್ತಿದ್ದರು. ಸುಳ್ಳು, ತಟವಟ, ಮೋಸ — ಇವನ್ನು ಕಂಡರೆ ಅವರು ಜ್ವಾಲಾಮುಖಿಯಂತೆ ಬೆಂಕಿಯನ್ನೇ, ಕಾದ ಕಬ್ಬಿಣದ ರಸವನ್ನೇ ಉಗುಳುತ್ತಿದ್ದರು. ಆ ಕಾಲದಲ್ಲೂ ಅವರು ಖಾದಿ ತೊಟ್ಟೇ, ತಲೆಗೆ ಗಾಂಧಿ ಟೋಪಿ ಕೂಡಾ ಹಾಕಿಕೊಂಡು ಸ್ಕೂಲಿಗೆ ಬರುತ್ತಿದ್ದರು. ಇಂಗ್ಲಿಷರ ದುರ್ನಯವನ್ನು, ದಬ್ಬಾಳಿಕೆಯನ್ನು ಅವರು ಖಂಡಿಸುವ ರೀತಿ ಮಾಧವನಿಗೆ ಜುಮ್ಮದಟ್ಟಿಸುತ್ತಿತ್ತು.

ಮಾಧವ ಅವರ ಪ್ರೀತಿಗೆ ಪಾತ್ರನಾದ ವಿದ್ಯಾರ್ಥಿ. ವಿಜ್ಞಾನದಲ್ಲಿ ಈತನಿಗೆ ಅಷ್ಟೇನೂ ಆಸಕ್ತಿ ಇಲ್ಲದಿದ್ದರೂ ಅದರಲ್ಲೂ ಚೆನ್ನಾಗಿ ಓದುತ್ತಿದ್ದ. ಆಗಾಗ ಅವರು ಮಾಧವನಿಗೆ ಅನೇಕ ಪುಸ್ತಕಗಳನ್ನು ಕೊಟ್ಟು ಓದಿಸುತ್ತಿದ್ದರು. ಅವನ ಮನಸ್ಸಿನಲ್ಲಿ ಅಚ್ಚಳಿಯದೆ ಮುದ್ರೆಯೊತ್ತಿದ್ದ ಪುಸ್ತಕ ಎಂದರೆ ವಿಕ್ಟರ್ ಹ್ಯೂಗೋವಿನ 'Les Miserables.' ಆ ಕಾದಂಬರಿ ಅವನಿಗೆ ಒಂದು ಹೊಸ ಪ್ರಪಂಚವನ್ನೇ ತೆರೆದು ತೋರಿತು. ಅವನ ಮನಸ್ಸಿನ ಮಹಾದ್ವಾರ ತೆರೆದು ಕೋಟಿ ಸೂರ್ಯರ ಪ್ರಭೆ ಒಳಹೊಕ್ಕು ಆ ಒಳಗಿನ ಗುಹೆಯ ಕತ್ತಲನ್ನೆಲ್ಲ ತೊಳೆದಂತೆ ಎನಿಸಿತು. ಜಾ ವಾಲ್ಜಾನ ಆ ದುರಂತ ಜೀವನ, ಶುಭವನ್ನು ಬಯಸಿ ಹೊರಟ ಆ ಜೀವ ಪಟ್ಟ ಪಾಡು, ಅದು ಬೆಂದು ಪರಿಪಾಕಗೊಂಡ ಬಗೆ ಅವನಿಗೆ ಹೊಸ ಕಣ್ಣನ್ನು ಕೊಟ್ಟ ಹಾಗೆ ಆಯಿತು. ಗಾಂಧಿಜಿಯ ಆತ್ಮಕಥೆ ಓದಿದಾಗ ಶುಭದ ದಾರಿ ಎಷ್ಟು ಕಂಟಕಮಯ ಎಂಬುದು ತಿಳಿಯಿತು

ತನ್ನ ಮನಸ್ಸಿನಲ್ಲಿ ಹುಟ್ಟುತ್ತಿದ್ದ ನೂರಾರು ಆಶೆಗಳು, ಕಾಮನೆಗಳು ಸಹಜ ವಾದದ್ದೇ ಎಂಬ ಒಂದು ಹೊಸ ತಿಳಿವು ಮೂಡಿದಾಗ ಮನಸ್ಸಿಂದ ದೊಡ್ಡ ದೊಂದು ಭಾರವೇ ಕೆಳಗಿಳಿದಂತೆ ತೋರಿತು. ಆದರೆ ಆ ಆಶೆಗಳಿಗೆ, ಆ ಕಾಮನೆ ಗಳಿಗೆ ಗುಲಾಮನಾಗಿ ಇರಲು ಸಲ್ಲದು ಎಂಬ ಭಾವವೂ ದೃಢಪಟ್ಟಿತು. ಗೆಲ್ಲ ಬೇಕು, ಮನಸ್ಸನ್ನು ಗೆಲ್ಲಬೇಕು. ಆ ಕೆಲಸ ಅವನು ಮಾಡುತ್ತಲೇ ಬಂದಿ ದ್ದಾನೆ — ಆದರೆ ಅದರಲ್ಲಿ ಸೋಲಲ್ಲದೆ ಜಯ ಅವನಿಗೆ ಲಭಿಸಿರಲಿಲ್ಲ. ಆದರೆ ಇದು ನಿಧಾನವಾಗಿ ಆಗುವ ಕೆಲಸ. ಸೋತೆನೆಂದು ಕೈ ಕಟ್ಟಿ ಕುಳಿತುಕೊಳ್ಳ ಕೂಡದು. ಇಲ್ಲವಾದರೆ ತನ್ನ ಜೀವನಕ್ಕೂ ಇತರ ಕೋಟ್ಯಾಂತರ ಜನದ ಜೀವನಕ್ಕೂ ಏನು ವ್ಯತ್ಯಾಸ ? ಹುಟ್ಟು ನಿರರ್ಥಕವಾಗಲು ಬಿಡಬಹುದೇ ? ಕೂಡದು. ಎಂಥೆಂಥ ಮಹಾತ್ಮರ ಜ್ವಲಂತ ಉದಾಹರಣೆಗಳು ಕಣ್ಣ ಮುಂದೆ ಇಲ್ಲ !

ಪ್ರತಿಯೊಂದು ಪುಸ್ತಕವೂ ಒಂದೊಂದು ಹೊಸ ಅನುಭವ. ಎಷ್ಟೋಸಲ ಪುಸ್ತಕದಲ್ಲಿ ಓದುವುದು ತಾನು ಎಲ್ಲೋ ಕೇಳಿದ ಮಾತಿನಂತೆ, ಕಂಡ ದೃಶ್ಯ- ದಂತೆ ಅನಿಸಿ ದೇಹ ರೋಮಾಂಚಗೊಳ್ಳುವುದು. ಶಿವಾಜಿಯ ಆ ಕಥೆಗಳು :— ಈಶ್ವರೀ ಸೂತ್ರ, ಮರಾಠರ ಅಭ್ಯುದಯ, ಛತ್ರಪತಿ, ಗೃಹ ಕಲಹ, ಶಿವಪ್ರಭು ವಿನಪುಣ್ಯ : ಎಂಥ ಲೋಕ ಅಲ್ಲಿ ತೆರೆಯುತ್ತಿದೆ. ಆ ದೇಶಭಕ್ತಿ, ಆ ವೀರಾವೇಶ! ಆ ದೇವಾಲಯಗಳು, ಗುಹೆಗಳು ದುರ್ಗಗಳು. ಬಂಕಿಮಚಂದ್ರರ ' ಆನಂದ ಮಠ '— ಆ ವೀರ ಸನ್ಯಾಸಿಗಳ ಹೃದಯದ್ರಾವಕ ಕಥೆ, ಪದ್ಯಗಳು :— ಹೊಚ್ಚ ಹೊಸ ಪದ್ಯಗಳು :- ಕಡೆಂಗೊಡ್ಲು ಶಂಕರಭಟ್ಟರ ' ಗಂಭೀರ ಕವನಗಳು; ' ' ಜಯ ಕರ್ನಾಟಕ ' ದಲ್ಲಿ ಬರುತ್ತಿದ್ದ ಗೆಳೆಯರ ಗುಂಪಿನವರ ಪದ್ಯಗಳು— 'ಅಂಬಿಕಾತನಯ ದತ್ತ" ರ ಸ್ಫೂರ್ತಿಯ ಕಾರಂಜಿಗಳು— ಇವುಗಳಲ್ಲೆಲ್ಲ ತಲ್ಲೀನನಾಗಲು ಕಲಿತಿದ್ದ; ತಲ್ಲೀನವಾಗುವ ಬಗೆ ತನಗೆ ತಾನೆ ಸಿದ್ಧಿಸಿದ್ದ ಮಾಧವನ ಮನಸ್ಸು ಹದಿನೇಳರಲ್ಲೇ ಹದಮೀರಿ ಬೆಳೆದಿತ್ತು. ಭಾವಗಳ ಸಂತೆಯಾಗಿತ್ತು ಮನಸ್ಸು. ಆ ಸಂತೆಯ ಸರಕುಗಳ ಮಧ್ಯೆ ನಿಂತು ದಾರಿಗಾಣದೆ ತೊಳಲುತ್ತಿದ್ದ ಅವನು.

ಕೃಷ್ಣನ ಸಾವಿನ ದುಃಖದ ಬಿಸಿ ತಗ್ಗಿದರೂ ಮನಸ್ಸಿನ ಆಳದಲ್ಲಿ ಆ ನಷ್ಟದ ಅರಿವು ನೆಲೆಯೂರಿ ನಿಂತಿತು. ಈಗ ಮಾಧವನ ಮನಸ್ಸಿನಲ್ಲಿ

ಹುಟ್ಟುವ ಭಾವಗಳ ಹಿನ್ನೆಲೆಯಲ್ಲಿ ಅದರ ಕರಿ ನೆಳಲು ಸದಾ ಬಿದ್ದಿರುತ್ತದೆ. ಮಾಧವನೂ ಆಗಲೇ ಒಂದೆರಡು ಸಾವು ಕಂಡಿದ್ದರೂ, ಅದು ಅವನ ಮನಸ್ಸಿನ ಮೇಲೆ ಹೆಚ್ಚು ಪರಿಣಾಮ ಮಾಡಿರಲಿಲ್ಲ — ಹಾಗೆ ಸತ್ತವರಲ್ಲಿ ಅವನಿಗೆ ಆತ್ಮೀಯತೆ ಇರಲಿಲ್ಲ. ಆದರೆ ಕೃಷ್ಣ ಹೀಗೆ ಇದ್ದಕಿದ್ದ ಹಾಗೆ ಅದೃಶ್ಯವಾದದ್ದು ಮಾತ್ರ ಅವನ ಮರ್ಮವನ್ನೇ ಭೇದಿಸಿತ್ತು. ಕೃಷ್ಣನ ವಿಧಿಯಲ್ಲಿ ತನ್ನ ವಿಧಿಯನ್ನೂ ಕಂಡು ತಲ್ಲಣಿಸಿದ ಅವನ ಮನಸ್ಸು ಮೊದಮೊದಲು ಮೂಢವಾದದ್ದು ಕ್ರಮೇಣ ಸ್ವೈರವಾಗತೊಡಗಿತು. ಯಾವ ಕಟ್ಟೂ ಅಹಿತವೆನಿಸತೊಡಗಿತು. ಪರೀಕ್ಷೆ ಮುಗಿದ ತಕ್ಷಣ ಬೆಳಗ್ಗೆ ಬೇಗಏಳುವುದು ಮುಗಿಯಿತು. ಸೂರ್ಯ ನಮಸ್ಕಾರ ಮುಂತಾದ ವ್ಯಾಯಾಮಗಳು ಗತಕಾಲದ ಮಾತಾದುವು. ಧ್ಯಾನವನ್ನು ಕೈ ಬಿಟ್ಟುಬಿಟ್ಟ. ಕಾವ್ಯವನ್ನೋ ಕಥೆಯನ್ನೋ ಓದುವುದಲ್ಲದೆ ಇನ್ನೇನನ್ನೂ ಮಾಡಲಾರೆನೆಂದು ಮನಸ್ಸು ಖಡಾಖಂಡಿತವಾಗಿ ಹೇಳಿಬಿಟ್ಟಿತು.

ಅಷ್ಟು ದಿನ ಕುಂದಾಪುರದಲ್ಲಿದ್ದರೂ ಒಂದು ದಿನ ಕೂಡಾ ಅವನು ಹೋಟಲಿಗೆ ಹೋಗುತ್ತಿರಲಿಲ್ಲ. ಅದರ ವಿರುದ್ಧವಾಗಿ ಭಾಷಣಗಳನ್ನೂ ಕೊಡುತ್ತಿದ್ದ. ಅವನ ಗೆಳೆಯರೆಲ್ಲರೂ ಆಗಾಗ ಹೋಟಲಿಗೆ ಹೋಗುವವರೇ. ಎಷ್ಟೋ ಸಲ ಮಾಧವ ಬಹಳ ಬಲವಂತಕ್ಕೂ ಸಿಕ್ಕಿದ್ದ. ಆದರೆ ಜಗ್ಗಲಿಲ್ಲ. ಎಷ್ಟು ದೊಡ್ಡದೊಡ್ಡ ಮಾತು ಆಡಿದರೂ ಮಾಧವ ಹುಡುಗನೇ. ಎಷ್ಟೋ ಸಲ ಹೋಟಲಿಗೆ ಏಕೆ ಹೋಗಬಾರದು ಎಂದು ಮನಸ್ಸು ಹೇಳುತ್ತಿತ್ತು. ಆದರೆ ಹೋಗಬಾರದು ಎಂದು ಎಲ್ಲರಿಗೂ ಹೇಳುತ್ತಿದ್ದ ತಾನೇ ಹೋಗುವುದು ಹೇಗೆ? ಮನಸ್ಸಿನ ಒಳತಳದಲ್ಲಿ ಗುಪ್ತವಾಗಿ ಹೊಗೆಯುತ್ತಿದ್ದ ಆ ಆಶೆಯನ್ನು ಅವನ ಅಹಂಕಾರ ಮೆಟ್ಟಿ ತುಳಿಯುತ್ತಿತ್ತು.

ಆದರೆ ಈಗ ಅಂಥ ಅಹಂಕಾರದಿಂದ ಪ್ರಯೋಜನವಿಲ್ಲ ಎಂದು ತೋರಿತು. ಪರೀಕ್ಷೆ ಮುಗಿದ ದಿನವೇ ಅವನು ಶಿವ್ವೆತಾಳನನ್ನು ಕುರಿತು ಹೇಳಿದ:

" ಬಾರೋ ಹೋಟಲಿಗೆ ಹೋಗೋಣ " ಎಂದ. ಕೇಳಿ ಶಿವ್ವೆತಾಳನಿಗೆ ಆಶ್ಚರ್ಯವಾಯಿತು.

" ಇದೇನೋ — ನೀನು — ಹೋಟಲಿಗೆ ಹೋಗುವುದು ! " ಎಂದ.

" ಯಾಕೆ ಹೋಗಬಾರದಯ್ಯಾ ? ನನಗೆ ಬಾಯಿ ಇಲ್ಲವೇ ?

" ಇದೆಯಪ್ಪಾ, ಇದೆ. ಆದರೆ ಹೋಗಬಾರದು ಎಂದು ಹೇಳುತ್ತಿದ್ದ ನೇನು — "

" ಹೇಳುತ್ತಿದ್ದೆ - ಸರಿ. ಈಗ ಹೋಟಲಿಗೆ ಹೋಗಬೇಕು ಎಂದು ಹೇಳುತ್ತೇನಲ್ಲ ! "

ಇಬ್ಬರೂ ಹೋಟಲಿಗೆ ಹೋದರು. ಅಷ್ಟು ದಿನ ತಿನ್ನದೆ ಇದ್ದ ಆಶೆಯನ್ನೆಲ್ಲ ಈ ದಿನ ಮಾಧವ ಪೂರಯಿಸಿಕೊಂಡ. ಮನಸ್ಸು ಅಪೂರ್ವ ತೃಪ್ತಿಯನ್ನು ಕಂಡಿತು. ಅಬ್ಬಾ, ಎಂಥೆಂಥ ತಿಂಡಿಗಳು; ಬಟಾಟೆ ಬಾಜಿ, ಪೂರಿ, ಶಿರಾ, ರವೆ ಉಂಡೆ; ದೋಸೆ - ಕಾಫಿ. ಎಷ್ಟು ರುಚಿಯಿದೆ ಈ ತಿಂಡಿಗಳಲ್ಲಿ. ಇಷ್ಟು ದಿನ ಇವನ್ನೆಲ್ಲ ತಿನ್ನದೆ ತಾನು ಸಾಧಿಸಿದ್ದೇನು ಎಂದು ಮಾಧವ ತನಗೆ ತಾನೇ ಪ್ರಶ್ನೆ ಹಾಕಿಕೊಂಡ. ಇದೂ ಒಂದು ಸುಖ ಅಲ್ಲವೆ ? ಇವನ್ನು ಬಿಟ್ಟೇ ಬಿಡುವೆನೆಂಬ ಛಲ ಏತಕ್ಕೆ ? ಥಟ್ಟನೆ ಅವನಿಗೆ ವಿಜ್ಞಾನದ ಅಧ್ಯಾಪಕರು ಹೇಳುತ್ತಿದ್ದ ಮಾತು ಜ್ಞಾಪಕ ಬಂತು: " ಜೀವನದ ಯಾವ ಸುಖವನ್ನೂ ಬಿಟ್ಟು ಬಿಡತಕ್ಕದ್ದಲ್ಲ. ಮನುಷ್ಯ ಸಂಪೂರ್ಣವಾಗಿ, ಸಮಗ್ರವಾಗಿ ಬೆಳೆಯಬೇಕಾದರೆ ಅವನಿಗೆ ಈ ಎಲ್ಲ ಸುಖದ ಅನುಭವವೂ ಬೇಕು. ಆದರೆ ಯಾವುದೂ ಅತಿಯಾಗಬಾರದು; ಯಾವುದಕ್ಕೂ ತಾನು ದಾಸನಾಗಬಾರದು. "

ಸರಿ, ಸರಿ - ಎಂದಿತು ಮನಸ್ಸು. ಹತ್ತು ಜನದ ಹಾಗೆ ತಾನು ಇಲ್ಲದೆ ಇದ್ದದ್ದು, ಅವರೊಡನೆ ಒಂದಾಗಿ ಬೆರೆತು ತನ್ನ ಅಹಂಕಾರವನ್ನು ಮರಸದಿದ್ದದ್ದು ಹಿತನಾಗಲಿಲ್ಲವೆಂದು ಅವನಿಗೆ ಈಗ ತೋರಿತು. ಆದರೆ ಈ ಸಮಾಜ ಸಾಮರಸ್ಯವನ್ನು ಸಾಧಿಸುವುದು ಹೇಗೆ ? ತನಗೂ ಉಳಿದವರಿಗೂ ಮಧ್ಯೆ ಇರುವ ಆ ಕಂದರಕ್ಕೆ ಸೇತುವೆ ಕಟ್ಟುವುದು ಹೇಗೆ ?

ಊರಿಗೆ ಹೋಗದೆ ಆಗಲೇ ಮೂರು ತಿಂಗಳು ಕಳೆದಿತ್ತು. ತಂದೆ ತಾಯಿ, ತಮ್ಮ, ಅವರನ್ನು ಅಷ್ಟು ಕಾಲ ಅವನು ನೋಡದೆ ಇದ್ದದ್ದು ಅದೇ ಮೊದಲು. ಪರೀಕ್ಷೆಯ ಭರಾಟೆಯಲ್ಲಿ, ರಾಮಕೃಷ್ಣರಾಯನ ಸ್ನೇಹಸಂಭಾಷಣೆಗಳಲ್ಲಿ, ಕೃಷ್ಣನ ದುರಂತದಲ್ಲಿ ಮನೆಯ ಯೋಚನೆ ಕೊಂಚ ಮಾಸಿದಂತಾಗಿತ್ತು. ಈಗ ಪರೀಕ್ಷೆ ಮುಗಿದ ಕೂಡಲೇ ಮನೆಯ ಸೆಳೆತ ಬಲವಾಯಿತು. ತನ್ನ ಆ ಮನೆ, ಮನೆಯಂಗಳ, ಆ ಬಾವಿಕಟ್ಟೆ, ಹಿತ್ತಲು, ಹಿತ್ತಲ ಪೇರಳೆಗಿಡ,

ಮಾವಿನಮರ, ಗೋವೆಮರ — ಮನೆ ಮುಂದಿನ ಗದ್ದೆ, ಕೆರೆ, ಕೆರೆಯೊತ್ತಿನ ತೆಂಗಿನ ಮರಗಳು - ಮನೆ ಹತ್ತಿರದ ಆ ಮಹಾಬಲೇಶ್ವರನ ದೇವಸ್ಥಾನ, ದೇವಸ್ಥಾನದ ಪೌಳಿ, ಹೆಬ್ಬಾಗಿಲು; ಸುತ್ತಲ ಹಾಡಿ — ಅಹಹಾ, ಒಂದೊಂದೂ ದೂರದಿಂದ ಕೈಯಾಡಿಸಿ ಕೊರಳೆತ್ತಿ ಕೂಗಿತು.

ಪರೀಕ್ಷೆ ಮುಗಿದ ಮರುದಿನವೇ ಊರಿಗೆ ಹೊರಟ. ಹೊರಡುವಾಗ ಒಮ್ಮೆ ಎದೆ ಧಸಕ್ಕೆಂದಿತು. ಯಾವಾಗಲೂ ಮಾಧವ ಕೃಷ್ಣ ಇಬ್ಬರೂ ಜೊತೆಯಾಗಿಯೇ ಊರಿಗೆ ಹೊರಡುವವರು ಆದರೆ ಈಗ? ಕೃಷ್ಣನಿಲ್ಲ. ಮಾಧವನೊಬ್ಬನೇ. ಒಬ್ಬನೇ ಅಲ್ಲ, ಶಿವ ಇದ್ದಾನೆ ತ್ರಾಸಿಯ ತನಕ; ವಿಶ್ವೇಶ್ವರಯ್ಯ ಬರುತ್ತಾನೆ ಮರವಂತೆಯ ತನಕ; ವಾಸುದೇವ ಕಾರಂತ ನಾಗೂರಿನ ತನಕ ಜೊತೆಯಲ್ಲೇ ಬರುತ್ತಾನೆ. ನಿಜ. ಆದರೆ ಕೃಷ್ಣನ ಕೂಡ ನಡೆವ ಸೊಗಸು ಈಗ ಮತ್ತೆ ದೊರೆಯದು. ಯೋಚಿಸಿದಾಗ ಮಾಧವನ ಕಣ್ಣು ಮಂಜಾಯಿತು

ಹೊರಡುವ ದಿನ ಬಹಳ ಬೇಗ ಎದ್ದರು. ಹನ್ನೆರಡು ಮೈಲಿಗಳ ದೂರದ ಊರಿಗೆ ನಡೆದುಕೊಂಡು ಹೋಗುವುದೇ ಹುಡುಗರೆಲ್ಲರ ರೂಢಿ. ಆಗೀಗ ಬಸ್ಸನ್ನೇರುವುದೂ ಉಂಟು. ಆದರೆ ಅದು ಕೇವಲ ಅಪವಾದ ರೂಪವಾಗಿ ಮಾತ್ರ. ದುಡ್ಡಿಗೆ ಅಷ್ಟು ಬೆಲೆಯಿತ್ತು ಆಗ. ಒಂದು ಪಾವಾಣೆ ನೂರು ರೂಪಾಯಿಗಳಿಗೆ ಸರಿತೂಗುತ್ತಿತ್ತು. ತಂದೆಯಿಂದ ಒಂದು ಪಾವಾಣೆ ಕೇಳಿ ಅದು ಸಿಕ್ಕಿದ ಹುಡುಗನಿಗೆ ದೊಡ್ಡ ನಿಧಿ ಸಿಕ್ಕಿದಷ್ಟೇ ಸಂತೋಷ. ಬಡವರ ರಾಜ್ಯದಲ್ಲಿ ಹಣವೇ ದೇವರು. ಒಂದು ಮೂರು ಕಾಸು ನೋಡದೆ ಇರುವ ಜನವೇ ಅಲ್ಲಿ ಹೆಚ್ಚು. ಅಂಥ ಕಡೆ ಕೊಂಚ ಅನುಕೂಲವಿದ್ದವರೂ ಕೂಡಾ, ಅವರ ಸಂಖ್ಯೆ ತೀರ ಕಡಿಮೆಯಾದುದರಿಂದ ಬಡತನದಲ್ಲೇ ಬಾಳುತ್ತಾನೆ. ದೊಡ್ಡ ರೀತಿಯಲ್ಲಿ ಬಾಳುವ ಬಗೆಯೇ ಅವರಿಗೆ ತಿಳಿಯದು. ಒಬ್ಬ ಶ್ರೀಮಂತ ಅಲ್ಲಿ ಇದ್ದರೆ ಅವನು ಸಮುದ್ರಮಧ್ಯದ ಮರಳ ದಿಣ್ಣೆಯಲ್ಲಿ ನಿಂತವನ ಹಾಗೆ. ಯಾವ ಹೊತ್ತಿಗೆ ಸುತ್ತಮುತ್ತಲ ಬಡತನದ ಹೆದ್ದೆರೆ ತನ್ನನ್ನು ಕಬಳಿಸುವುದೋ ಎಂಬ ಭಯ ಅವನಿಗೆ. ಆದಕಾರಣ ಕಾರ್ಪಣ್ಯವಿಲ್ಲದ ಶ್ರೀಮಂತನನ್ನು ಅಲ್ಲಿ ಕಾಣುವುದು ಅಪರೂಪ.

ಬೆಳಿಗ್ಗೆ ಆರು ಗಂಟೆಗೆ ಸರಿಯಾಗಿ ಅವರು ಕುಂದಾಪುರವನ್ನು ಬಿಟ್ಟು ಹೊರಟರು. ನಾಲ್ಕು ಜನ ಇದ್ದುದರಿಂದ ಮಾತುಕತೆಗಾಗಲೀ, ಹಾಸ್ಯ

ವಿನೋದ ವಿವಾದಕ್ಕಾಗಲೀ ಕೊರತೆ ಬರಲಿಲ್ಲ. ಹೊಳೆಯನ್ನು ದಾಟುತ್ತಿದ್ದಾಗ ಮಾಧವನ ಮನಸ್ಸು ಕೃಷ್ಣನ ದುರಂತವನ್ನು ನೆನೆದು ನಡುಗಿತು. ಹೊಳೆ ಶಾಂತವಾಗಿ, ನಿಧಾನವಾಗಿ ಹರಿದಿತ್ತು. ಅದನ್ನು ಕಂಡು ಇಂಥ ಈ ಹೊಳೆ ಏಕೆ ಅಷ್ಟು ಭೀಕರವಾಗಬೇಕಿತ್ತು ಎಂದು ಇನ್ನೊಂದು ಪ್ರಶ್ನೆ ಮನಸ್ಸಿನಲ್ಲಿ ಸುಳಿಯಿತು. ಆರು ಗಂಟೆಗೆ ಕುಂದಾಪುರವನ್ನು ಬಿಟ್ಟ ಮಾಧವ ಹತ್ತೂವರೆ ಗಂಟೆ ಹೊತ್ತಿಗೆ ತನ್ನ ಊರಿನ ಹತ್ತಿರ ಬಂದ.

ಊರು ಹತ್ತಿರವಾದ ಹಾಗೆ ಎದೆಯ ವೇಗ ಹೆಚ್ಚಿತು. ದಾರಿಯಲ್ಲಿನ ಪ್ರತಿಯೊಂದು ಕಲ್ಲೂ, ಚಿರಪರಿಚಿತವಾದ ಪ್ರತಿಯೊಂದು ಗಿಡವೂ ‘ ಬಂದೆಯಾ ಮಗು ! ’ ಎಂದಿತು. ಏರಿದ ಬಿಸಿಲು ಕೂಡಾ ‘ ಬಾ ಮಗು ’ ಎಂದು ಉರಿಯಿತು. ಅದೋ ಇದೇ ಮಹಾಬಲೇಶ್ವರದ ತೋಡು. ಈಗ ಪಾದ ಮುಳುಗುವಷ್ಟು ಮಾತ್ರ ನೀರಿದೆ. ಮಳೆಗಾಲದಲ್ಲೋ ಅದರ ರಭಸ, ಶೇಂಕಾರ ಹೇಳತೀರದು. ಆ ಹೊನ್ನೆ ಮರ; ಯಥಾವತ್ತಾಗಿ ಮೊದಲು ಹೇಗಿತ್ತೊ ಹಾಗೇ ಇದೆ. ಆ ಹಾಳು ಓಣಿ ಬಂತು. ಓಣಿಯ ಪಕ್ಕದಲ್ಲೇ ಬೆಟ್ಟಿನ ಮೇಲೆ ಹೊಸ ಮನೆ ಕಂಡಿತು. ಇದು ಯಾರದ್ದಿರಬಹುದಪ್ಪಾ ಮನೆ? ಆಹಾ ಊರ ದೇವಸ್ಥಾನ ಬಂತು. ಕೆರೆ ಕಂಡಿತು. ಇನ್ನೇನು ಅದೇ ಮನೆ. ಬಂದ, ಮಾಧವ ಬಂದ, ಬಂದೇ ಬಿಟ್ಟ — ಎನ್ನುವ ಹಾಗೆ ತೆಂಗಿನ ಮರ ಮರ್ಮರಿಸಿತು. ಮಾವಿನ ಮರ ಸೊಂಡಿಲಾಡಿಸಿತು. ಹನೆಮರ ತಲೆಯೊಲೆಯಿತು.

“ ಬಂದೆಯಾ ಮಗು, ಬಾ ” ಎಂದರು ತಾಯಿ. “ ಅಯ್ಯೋ ಮಾಧವ ಎಷ್ಟು ಬಡವಾಗಿದ್ದಾನೆ ! ”

“ ಆ ಹಾಳು ಹೋಟೆಲ ಕೂಳು ! ” ಎಂದರು ತಂದೆ ವಾಸುದೇವಯ್ಯನವರು.

“ ಪರೀಕ್ಷೆಗೆ ಓದಿದ್ದೂ ಸ್ವಲ್ಪ ಅದಕ್ಕೆ ಕಾರಣ” ಎಂದ ಮಾಧವ.

“ ಪರೀಕ್ಷೆಯಲ್ಲಿ ಹೇಗೆ ? ” ಎಂದರು ತಂದೆ.

“ ಏನೋ ಸುಮಾರಾಗಿ ಮಾಡಿದ್ದೇನೆ. ನೋಡಬೇಕು ” ಎಂದ ಮಾಧವ.

“ ಅಣ್ಣಾ, ಕವಿಲೆದನ ಕರು ಹಾಕಿದೆ — ಗಂಡು ಕರು ” ಎಂದ ಶಿವ.

“ ಎಲ್ಲಿ ನೋಡೋಣ, ಬಾ ” ಎಂದು ಮಾಧವ ಕೊಟ್ಟಿಗೆಗೆ ಓಡಿದ.

# ೧೦

ಊರು. ಅದೇ ಊರು. ಹೊಸಕೋಟೆ. ಹತ್ತಿರದ ಗುಡ್ಡದ ಮೇಲೆ ಒಂದಾನೊಂದುಕಾಲದಲ್ಲಿ ಒಂದು ಕೋಟೆ, ಇತ್ತೊ ಏನೋ, ಈಗ ಅಲ್ಲಿ ಹಳೇ ಕೋಟೆ ಕೂಡಾ ಇಲ್ಲ. ಹೆಸರು ಕೂಡಾ ಅಲ್ಲಿ ಏನೂ ಕಾಣಿಸದು. ಆ ಮನೆ, ಗದ್ದೆ, ಆ ಮರ ಗಿಡ, ಇವೆಲ್ಲ ಮಾನವ ಕುಲದ ಆದಿಯಿಂದಲೂ ಇದೇ ರೀತಿ ಇದ್ದಂತೆ ಕಾಣಬೇಕು. ಒಂದು ಮನೆ ಅಳಿದು ಇನ್ನೊಂದು ಮನೆ ಬೆಳೆಯಬಹುದು. ಒಂದು ಮರ ಸತ್ತು ಇನ್ನೊಂದು ಹುಟ್ಟಬಹುದು. ಆದರೆ ತಲತಲಾಂತರದಿಂದಲೂ ಆ ಊರಿನ ಆ ಮುಖ್ಯ ಊರದೇವಾಲಯದ ಆ ಕರಿ ವಿಗ್ರಹದಂತೆಯೇ ಸ್ಥಿರವಾದದ್ದು. ಒಂದೆರಡು ಮೈಲಿ ದೂರದ ರಾಜಬೀದಿಯಲ್ಲಿ ಮೋಟಾರು ಫೋ ಫೋ ಎಂದೀತು. ಆಗೀಗ ಪೋಲೀಸನ ಕೆಂಪು ' ಪಗಡೆಯ ' ರಾಕ್ಷಸಚ್ಛಾಯೆ ಊರ ಮೇಲೆ ಬಿದ್ದೀತು. ಆದರೆ ಅದು ಹೊರಗಿನ ಯಾವ ಬದಲಾವಣೆಗೂ ಸಗ್ಗದೆ ತನ್ನತನವನ್ನು ಕಾಪಾಡಿಕೊಂಡು ಬಂದಿತ್ತು. ಬಹಳ ಕಾಲದಿಂದ ನಡೆದು ಬಂದ ಪದ್ಧತಿಗಳು ಇನ್ನೂ ನಡೆಯುತ್ತವೆ. ಯುಗಾದಿಯ ದಿನ ಊರವರೆಲ್ಲ ದೇವಸ್ಥಾನದಲ್ಲಿ ನೆರೆಯುತ್ತಾರೆ. ಪೂಜೆ ನಡೆಯುತ್ತದೆ. ಜೋಯಿಸರು ಪಂಚಾಂಗ ಶ್ರವಣ ಮಾಡಿಸುತ್ತಾರೆ. ಪಾನಕ ಪಣ್ಯಾರ ವಿನಿಯೋಗವಾಗುತ್ತದೆ. ಎಲ್ಲರೂ ಮನೆಗೆ ಹೋಗುತ್ತಾರೆ. ಕಾಹಿಲೆ ಬರುತ್ತದೆ. ಅದಕ್ಕೆ ಊರ ಜೋಯಿಸರ ವಿಭೂತಿಯೋ, ಮಂತ್ರವೋ, ದೈವದ ಪಾತ್ರಿಯ ಆವೇಶವೋ ಚಿಕಿತ್ಸೆಯಾಗಿ ನಡೆಯುತ್ತದೆ.

ತಿರುಪತಿಯ ವೆಂಕಟರಮಣನಿಗೋ, ಧರ್ಮಸ್ಥಳದ ಮಂಜುನಾಥನಿಗೋ ಹರಕೆಯ ಅಹವಾಲು ಸಲ್ಲುತ್ತದೆ. ಕೆಲವರು ಬದುಕುತ್ತಾರೆ. ಕೆಲವರು ಸಾಯುತ್ತಾರೆ. ನಾಲ್ಕು ಮೈಲಿ ದೂರದ ಆಸ್ಪತ್ರೆಗೆ ಯಾರೂ ಹೋಗಲಾರರು, ಹೋಗಬೇಕಿಲ್ಲ. ಇಲ್ಲ, ಔಷಧಿ ಕೊಡಿಸಲೇಬೇಕೆಂತಿದ್ದರೆ ಊರ ಪಂಡಿತ, ವಾಸುದೇವ ಉಡುಪರು ಇದ್ದಾರೆ. ಬೇರೋ ನಾರೋ ಚಕ್ಕೆಯೋ ಎಲೆಯೋ ಸೇರಿಸಿ ಗುಳಿಗೆಯನ್ನೋ, ಕಷಾಯವನ್ನೋ, ಲೇಹ್ಯವನ್ನೋ, ಅರಿಷ್ಟವನ್ನೋ, ಕೊಡುತ್ತಾರೆ. ವಾಸಿಯಾಗುವವರಿಗೆ ಆಗುತ್ತೆ. ಇಲ್ಲದವರಿಗೆ ಇಲ್ಲ. ವೈದ್ಯನೂ

ಬ್ರಹ್ಮನಲ್ಲ, ಮಂತ್ರವಾದಿಯೂ ಬ್ರಹ್ಮನಲ್ಲ; ಅವರವರ ಹಣೆಯಲ್ಲಿ ಬರೆದದ್ದು ಅವರವರಿಗೆ. ತಪ್ಪಿಸಲು ಯಾರಿಗೆ ಸಾಧ್ಯ ? ಇದೇ ಪದ್ಧತಿ, ಇದೇ ತತ್ವ ಎಲ್ಲ ಜನರನ್ನೂ ಬೆಸೆದು ಒಂದು ಮಾಡಿತ್ತು.

ಅದೇ ಜನ. ಅದೇ ಮುಗ್ಧ ಅಜ್ಞ ಬಡಜನ. ಅದೇ ತಿಮ್ಮ, ಸುಬ್ಬ, ಈರ, ಗೋವಿಂದ, ಚಿಕ್ಕ. ಒಂದು ಮೊಳದ ಹರಕು ಪಂಚೆ ಸೊಂಟಕ್ಕೆ ಸುತ್ತಿ ಬೆವರು ಸುರಿಸುತ್ತಾ ಕೆಲಸಮಾಡುತ್ತಾರೆ- ಬೆಳಗಿನಿಂದ ಸಂಜೆಯವರೆಗೆ. ಅನ್ನದ ಅಗುಳು ತಳದಲ್ಲಿ ಮುಳುಗಿರುವ ಬಿಸಿ ನೀರು ಕುಡಿದು ಹೊಟ್ಟೆ ತುಂಬಿಸಿಕೊಳ್ಳು ತ್ತಾರೆ. ‘ ಒಡೆಯಾ, ಒಂದು ಚೂರು ಎಲೆ ಅಡಿಕೆ ಹೊಗೆಸೊಪ್ಪು ಕೊಡಿ ’ ಎಂದು ಕೈ ನೀಡುತ್ತಾರೆ. ಆಗಾಗ ಬೆಲ್ಲ ಕೇಳಿ ನೀರು ಕುಡಿದು ಹಸಿವೆಯನ್ನೋ ಬಾಯಾರಿಕೆಯನ್ನೋ ಆರಿಸಿಕೊಳ್ಳುತ್ತಾರೆ. ಆದರೂ ನಗುತ್ತಾರೆ, ವಿನೋದ ಮಾಡುತ್ತಾರೆ, ಪಟ್ಟಾಂಗ ಹೊಡೆಯುತ್ತಾರೆ. ಪ್ರೀತಿಸುತ್ತಾರೆ, ಮದುವೆಯಾಗು ತ್ತಾರೆ. ಜಗಳಾಡುತ್ತಾರೆ, ಬಯ್ದಾಡುತ್ತಾರೆ, ಬದುಕುತ್ತಾರೆ.

ಈ ಜನರೆಲ್ಲರನ್ನೂ ಈಗ ಮಾಧವ ಹೊಸ ದೃಷ್ಟಿಯಿಂದ ನೋಡಬಲ್ಲ, ನೋಡುತ್ತಾನೆ. ಅವರ ಅಜ್ಞಾನ, ದಾರಿದ್ರ್ಯಗಳನ್ನು ಕಂಡು ಅವನ ಎದೆ ನಡುಗುತ್ತದೆ. ಇದೂ ಮನುಷ್ಯ ಜೀವನವೇ ? ಎಂದು ಆಶ್ಚರ್ಯಪಡುತ್ತಾನೆ. ಎಂಥ ಅಗಾಧ ಕಂದರದಲ್ಲಿ ಬಿದ್ದಿದ್ದಾರೆ ಈ ಜನ ! ಬೆಟ್ಟದ ನೆತ್ತಿಯನ್ನೇರಿ ಸೂರ್ಯ ಚಂದ್ರ ನಕ್ಷತ್ರಗಳ ಬೆಳಕಿಗೆ, ಎಂಟು ದಿಕ್ಕಿನ ಗಾಳಿಗೆ ಮೈಯೊಡ್ಡಿ ನಿಲ್ಲಬೇಕಾದ, ಅರಳುವ ಹೂವಿನ ಚೆಲುವಿಗೆ, ಹಾಡುವ ಹಕ್ಕಿಯ ಕೊರಳಿನ ಇಂಪಿಗೆ ಮನಸೋಲಬೇಕಾದ ತಾವು ಕೆಸರ ಕೊಳ್ಳದಲ್ಲಿ ಬಿದ್ದು ಕಾಲು ಹೂತು ಕೊಳೆಯುತ್ತಿರುವೆವಲ್ಲ ಎಂಬುದು ಕೂಡಾ, ಅಯ್ಯೋ, ಈ ಜನಕ್ಕೆ ತಿಳಿಯದು. ಅವರನ್ನು ನೋಡುತ್ತಿದ್ದಹಾಗೆ ಮಾಧವನ ಕರುಳು ಕಿವಿಚಿದಂತಾಗುವುದು. ಈ ಜನದ ಈ ದುರ್ದೆಶೆ ಕಳೆಯುವುದು ಹೇಗೆ ಎಂದು ಮನಸ್ಸು ಬೇಯುವುದು. ಈ ಜನವನ್ನೆಲ್ಲ ಕೃಷ್ಣ ಗೋವರ್ಧನಗಿರಿಯನ್ನೆತ್ತಿ ನಿಂತಂತೆ ಒಂದೇ ಸಲಕ್ಕೆ ಒಂದೇ ಕ್ಷಣಕ್ಕೆ ಮೇಲಕ್ಕೆತ್ತಲು ಸಾಧ್ಯವಾಗಿದ್ದರೆ ! ಮನಸ್ಸು ಕರಗಿ ಕರುಣೆಯ ಪ್ರವಾಹ ಅಂಗಾಂಗಗಳಲ್ಲಿ ಮೊರೆಯುವುದು.

ಆದರೆ ಈ ಜನದ ಬದುಕಿನೊಡನೆ ಒಂದಾಗುವ ಸೂತ್ರ ಮಾತ್ರ ಮಾಧವನಿಗೆ ಇನ್ನೂ ತಿಳಿಯದು. ಆ ಜನದ ಅಳಲು ಅಜ್ಞಾನ ತನ್ನದೂ

ಹೌದು ಎಂದು ಅವನಿಗೆ ತಿಳಿದಿರಲಿಲ್ಲ. ಆ ಜನ ಮೇಲಕ್ಕೇಳದೆ ತಾನೂ ಏಳಲಾರೆ; ಅವರ ಭಾವೋನ್ನತಿ ಆಗದೆ ತನ್ನ ಭಾವೋನ್ಮಾದ ಅರ್ಥಶೂನ್ಯ ಎಂಬುದು ಮಾಧವನ ಕಿಶೋರಮನಸ್ಸಿಗೆ ಇನ್ನೂ ಅರ್ಥವಾಗಿಲ್ಲ. ಆದಕಾರಣ ಅವನಿಗೂ ಅವರಿಗೂ ನಡುವೆ ಒಂದು ಉತ್ತರಿಸಲಾರದ ಕಂದರ ಕ್ಷಣ ಕ್ಷಣವೂ ಬಾಯಿ ತೆರೆಯುತ್ತಿತ್ತು. ಮಾಧವ ಇಂಗ್ಲೀಷ್ ಕಲಿತವ, ಪುಸ್ತಕಗಳನ್ನು ಓದಿದವ, ಉದಾತ್ತ ವಿಚಾರಗಳ, ಉತ್ತಮ ಜೀವನದ, ರಸದ, ರಸಿಕತೆಯ ಸಂಪರ್ಕವುಳ್ಳವ. ಇವನ ಆಸಕ್ತಿಗಳು, ವಿಚಾರಗಳು, ಭಾವನೆಗಳು ಒಂದು ಧ್ರುವ; ಆ ಜನದ್ದು ಇನ್ನೊಂದು ಧ್ರುವ. ಆದಕಾರಣ ವಿಚಾರ ಹೆಚ್ಚಿದಂತೆ, ಭಾವದ ಬಿಸಿ ಏರಿದಂತೆ ಮಾಧವನ ಒರಟುತನವೂ ಹೆಚ್ಚುತ್ತಿತ್ತು. ತಾನು ಏಕಾಂಗಿ ಎಂಬ ಭಾವನೆ ಮನಸ್ಸಿನಲ್ಲಿ ಆಳವಾಗಿ ಬೇರು ಬಿಡತೊಡಗಿತು. ತನ್ನ ವಿಚಾರ ಯೋಚನೆಗಳಿಗೆ ಇಲ್ಲಿ ಈ ಜಗತ್ತಿನಲ್ಲಿ ಸಹಾನುಭೂತಿ ದೊರೆಯದು ಎಂದು ಅವನಿಗೆ ತೋರುತ್ತಿತ್ತು. ಆ ಭಾವನೆ ಮನಸ್ಸನ್ನೆಲ್ಲ ವ್ಯಾಪಿಸಿ ಅವನ ಜೀವನದ ಮೇಲೆಲ್ಲ ವಿಷಾದದ ಮಂಜಿನ ತೆರೆ ಕವಿಯಿತು.

ಮನೆಯಲ್ಲೂ ಅಷ್ಟೇ. ತಂದೆ ವಾಸುದೇವಯ್ಯನವರು ಎಂದಿನಂತೆಯೇ ಅಂತಃಕರಣದ ಮಾತುಗಳನ್ನಾಡುತ್ತಾರೆ. ಪ್ರೀತಿ ತೋರಿಸುತ್ತಾರೆ. ಆದರೆ ಅವರಿಗೂ ತನಗೂ ನಡುವೆ ಏನೋ ಗೋಡೆ ಎದ್ದು ನಿಂತ ಹಾಗೆ ಮಾಧವನಿಗೆ ಅನ್ನಿಸುತ್ತದೆ. ಅವರ ದೇವರ ಪೂಜೆಗಳಲ್ಲಿ, ಆಚಾರ ವಿಚಾರಗಳಲ್ಲಿ, ಸ್ನಾನ ಸಂಧ್ಯಾವಂದನೆಗಳಲ್ಲಿ, ಮಡಿ ಮೈಲಿಗೆಗಳಲ್ಲಿ ಮಾಧವನಿಗೆ ಈಗ ಆದರವಿಲ್ಲ. ಕ್ರಾಪು ಬಿಡಿಸಿಕೊಂಡ ತಾನು ತನ್ನ ಸುತ್ತಮುತ್ತಲ ಜನದಿಂದ ಕತ್ತರಿಸಿ ಹೋದ ಹಾಗೆ ಅವನಿಗೆ ತೋರಿತು. ಅವರ ಪ್ರಪಂಚವೇ ಬೇರೆ ತನ್ನ ಪ್ರಪಂಚವೇ ಬೇರೆ. ಈ ಪ್ರಪಂಚದ ರೀತಿ ನೀತಿ ಆ ಪ್ರಪಂಚಕ್ಕೆ ಹೊಸತು, ವಿಕಟ, ವಿಚಿತ್ರ. ಅವನ ಕ್ರಾಪನ್ನು ನೋಡಿ ವಾಸುದೇವಯ್ಯ 'ಏನು ಈ ವೇಷ ಅತ್ಯಗತ್ಯವಾಗಿತ್ತೋ?' ಎಂದರು ಅಷ್ಟೆ. ಆದರೆ ಆ ಮಾತಿನ ಹಿಂದೆ ಅಡಗಿದ ಅತೃಪ್ತಿಯನ್ನು ಅಸಂತೋಷವನ್ನು ಅರಿತ ಮಾಧವ ಏನೂ ಹೇಳಲಿಲ್ಲ. ಏನು ಹೇಳಬೇಕು? ಅದು ಅಗತ್ಯ ಎಂದು ಯಾವ ಕಾರಣ ಕೊಟ್ಟು ಸಿದ್ಧಾಂತ ಪಡಿಸಬಹುದು?

ಆದಕಾರಣ ಊರಲ್ಲಿದ್ದರೂ ಊರಲ್ಲಿಲ್ಲದ ಹಾಗೆ, ಮನೆಯಲ್ಲಿದ್ದರೂ ಮನೆಯಲ್ಲಿಲ್ಲದ ಹಾಗೆ ಅವನು ದಿನ ಕಳೆಯತೊಡಗಿದ. ಜನ ಹೇಗೇ ಇರಲಿ,

ಆದರೆ ಮರಗಿಡಬಳ್ಳಿಗಳ ನಡುವೆ, ಓಣಿಯ ಈಚೆಗಿನ ದಿಣ್ಣೆಯ ಮೇಲೆ, ಊರ ದೇವಾಲಯದ ತಂಪು ನೆಲದ ಚಾವಡಿಯ ಮೇಲೆ, ಕೆರೆಯ ಅಂಚಿನ ಮೇಲೆ, ಆಕಾಶದ ಕೆಳಗೆ, ಅಂಥ ಆ ಯಾವ ಸಂಕೋಚವೂ ಮಾಧವನನ್ನು ಬಾಧಿಸುತ್ತಿರಲಿಲ್ಲ. ಪುಸ್ತಕವೊಂದನ್ನು ಕಂಕುಳಿಗೆ ಸಿಕ್ಕಿಸಿಕೊಂಡು ಅವನು ಮನೆಯ ಹೊರಗೇ ಕಾಲ ಕಳೆಯತೊಡಗಿದ.

ಊರ ದೇವಾಲಯದ ಚಾವಡಿಯೇ ಈಗ ಅವನ ಮುಖ್ಯ ಠಾಣೆ. ಅಲ್ಲಿಗೆ ಹೋದಾಗ ಮೊದಲಿನಂತೆ ಈಗ ದೇವರಿಗೆ ಅವನು ತಲೆಬಾಗುವುದಿಲ್ಲ. ಮನಸ್ಸಿನಲ್ಲಿ ಬಂದು ಹಾಯ್ದು ಹೋಗುವ ನೂರು ಆಶೆಗಳಿಗಾಗಿ ಅವನು ಪಶ್ಚಾತ್ತಾಪ ಪಟ್ಟರೂ ದೇವರ ಮುಂದೆ ದೀನನಾಗಿ ಗೋಳಿಡುವುದಿಲ್ಲ. ಕ್ಷಮಿಸೆಂದು ಸಾಷ್ಟಾಂಗ ಪ್ರಣಾಮ ಮಾಡುವುದಿಲ್ಲ. ಅಲ್ಲಿ ಹೋಗಿ ಕುಳಿತರೆ ಸುತ್ತ ಮುತ್ತಲ ಮೌನ ಅವನನ್ನು ಜೋಗುಳ ಹಾಡಿ ತಟ್ಟುತ್ತದೆ. ಝೇಂಕರಿಸುವ ತುಂಬಿ ಅವನ ಸುತ್ತಲೂ ಸುಳಿದು ಮರೆತು ಹೋದ ಮಾತುಗಳನ್ನು, ಗತ ಕಾಲದ ಸ್ಮೃತಿಗಳನ್ನು ಕೆರಳಿಸುತ್ತದೆ. ಹಾಳು ಬಾವಿಯೊಳಕ್ಕೆ ಬಿದ್ದು ಮೇಲೇಳಲಾರದೆ ಹೊರಗಿನದನ್ನೆಲ್ಲ ಜ್ಞಾಪಿಸಿಕೊಳ್ಳುತ್ತಿರುವ ಹತಭಾಗ್ಯನಂತೆ ಅಲ್ಲಿ ಕುಳಿತು ಮಾಧವ ವಿಶಾಲ ಪ್ರಪಂಚದ ನೂರು ರೂಪಗಳನ್ನು ಮನಸ್ಸಿನಲ್ಲಿ ಸೃಷ್ಟಿಸಿಕೊಳ್ಳುತ್ತಾನೆ. ಅಲ್ಲೇ ಮೇಲೆ ತೊಲೆಗೆ ಕಟ್ಟಿದ ಜೇನುಗೂಡಿನ ಸುತ್ತ ಜೇನುನೊಣ ಗುಯ್ಯೆಂದು ಸದಾ ಕಾಲ ಹಾರುತ್ತವೆ, ಸುಳಿದಾಡುತ್ತವೆ. ದೇವಾಲಯದ ಒಳಗಿನಿಂದ ಬಾವಲಿಗಳ ಹಾರಾಟದ ಪಟ ಪಟ ಸದ್ದು ಕೇಳಿಸುತ್ತದೆ.

ಬೇಸಗೆ. ಬಿಸಿಲು ತಡೆಯಲು ಸಾಧ್ಯವಿಲ್ಲ. ಸುತ್ತಮುತ್ತಲೂ ಬೆಂಕಿಯ ಮಳೆ. ಮರಗಿಡಗಳೆಲ್ಲ ಆ ಬೆಂಕಿಯ ಪ್ರವಾಹದಲ್ಲಿ ಈಜುವಂತೆ ತೋರುತ್ತವೆ. ಮೈ ಮೇಲೆ ಒಂದು ಬಟ್ಟೆಯನ್ನು ಕೂಡಾ ಹಾಕಿಕೊಳ್ಳುವಂತಿಲ್ಲ. ದೇವಾಲಯದ ಚಾವಡಿಯಲ್ಲಿ ಮಾತ್ರ ತಂಪು ದಟ್ಟಯಿಸಿದೆ. ಅದರ ಕೆಮ್ಮಣ್ಣಿನ ನೆಲ ನುಣ್ಣಗೆ ಥಳಥಳ ಹೊಳೆಯುತ್ತದೆ. ತಣ್ಣನೆಯ ನೆಲಕ್ಕೆ ಮೈ ಸೋಕಿದರೆ ತಂಪುತಂಪಾಗುತ್ತದೆ. ಆ ನೆಲದ ಮೇಲೆ ಹಾಗೆ ಹಾಯಾಗಿ ಒರಗಿಕೊಂಡು ಆಗಾಗ ಬಂದು ಬೀಸುತ್ತಿರುವ ತಂಗಾಳಿಯ ಅಲೆಗೆ ಮೈಯೊಡ್ಡಿದರೆ ದೇಹ ವ್ಯಾಪಾರ ಮರೆಯಾಗುತ್ತದೆ. ಮನಸ್ಸಿನ ಬಾಗಿಲು ಕಿಟಕಿಗಳೆಲ್ಲ ತೆರೆಯುತ್ತವೆ.

ಎಲ್ಲೆಲ್ಲಿಂದಲೋ ಗಾಳಿ ಬಂದು ಒಳಗೆ ನುಗ್ಗುತ್ತದೆ. ಗಾಳಿ ಬಿರುಗಾಳಿಯಾಗುತ್ತದೆ. ಮೋಡ ಸಾಂದ್ರವಾಗುತ್ತದೆ. ಗುಡುಗು ಗುಡುಗುತ್ತದೆ; ಸಿಡಿಲು ಸಿಡಿಯುತ್ತದೆ; ಮಿಂಚಿಗೆ ಕಣ್ಣು ಕೋರಯ್ಸುತ್ತದೆ. ತಂಗಾಳಿ ಬೀಸುತ್ತದೆ. ಮೋಡ ಹನಿದು ಮಳೆ ಸುರಿಯುತ್ತದೆ. ಕಂಬನಿಯು ಕೊಳ್ಳ ತುಂಬಿ ಬರುತ್ತದೆ.

ಜೋಡು ಬೀಗ ಹಾಕಿ ಭದ್ರಪಡಿಸಿದ್ದ ಆ ಬಾಗಿಲು ಈಗ ಸದಾ ಕಾಲ ತೆರೆದೇ ಇರುತ್ತದೆ. ಮನಸ್ಸು ಅತ್ತಿತ್ತ ಸುತ್ತಿ ಮತ್ತೆ ಮತ್ತೆ ಅಲ್ಲಿಗೆ ಹೋಗಿ ಹೊಸ್ತಿಲ ಬಳಿ ನಿಂತು ನೋಡುತ್ತ ಮೈ ಮರೆಯುತ್ತದೆ. ತನ್ನಲ್ಲಿ ಈ ಆಶೆ ಇಷ್ಟು ತೀವ್ರವಾಯಿತೇಕೆ ಎಂದು ಮಾಧವ ವಿಹ್ವಲನಾಗುತ್ತಾನೆ. ದಿನ ದಿನಕ್ಕೆ ಆ ಕಿರುಗೋಣೆಯ ಆಕರ್ಷಣೆ ಹೆಚ್ಚುತ್ತದೆ. ಆ ವಿಚಾರ ಹೇಯವಾದದ್ದು, ಕೆಟ್ಟದ್ದು, ಸಂಭಾವಿತರು ಆಡತಕ್ಕದ್ದಲ್ಲ ಎಂಬ ಭಾವನೆ ಸುತ್ತಮುತ್ತಲ ಜನದ್ದು. ಕಾಮವ್ಯಾಪಾರ ಅಲ್ಲಿ ಸದಾ ಕಾಲ ನಡೆಯುತ್ತದೆ. ಈರನ ಹೆಂಡತಿಯ ಹತ್ತಿರ ತಿಮ್ಮ ಹೋಗುತ್ತಾನೆ ಎಂದು ಪುಕಾರು ಹಬ್ಬುತ್ತದೆ. ಗೌರಿಗಾಗಿ ಹಳೆಪೈಕರ ನಾರಾಯಣ ಮೊಗವೀರರ ಐತ ಕಾದಾಡಿದ ಸುದ್ದಿ ಕ್ಷಣಾರ್ಧದಲ್ಲಿ ಊರಲ್ಲೆಲ್ಲ ಹಬ್ಬುತ್ತದೆ. ನಾಲ್ಕು ಜನ ಸೇರಿದಾಗ ಐದನೆಯವರ ಕಾಮವ್ಯಾಪಾರದ ಕುತ್ಸಿತ ಟೀಕೆಯೂ ನಡೆಯುತ್ತದೆ. ಆದರೆ ಹೆಣ್ಣು ಗಂಡುಗಳ ಆ ಸಂಬಂಧ ತುಚ್ಛವಾದದ್ದೆಂಬ ಅಭಿಪ್ರಾಯ ಮಾತ್ರ ಸಾರ್ವತ್ರಿಕ. ಮಾಧವನ ಜಾತಿಯವರಲ್ಲಂತೂ ಆ ವಿಷಯದ ಸುತ್ತ ದಿಗ್ಬಂಧನ ಮಾಡಿದ ಹಾಗೆ. ಅಶ್ಲೀಲವಾದ ' ಬಂಡು ' ಮಾತು ಆಡುವುದು ಘಟಿಂಗನ ಲಕ್ಷಣ. ಹೆಂಡತಿಯ ಸಂಗಡ ಕೂಡ ಎಲ್ಲರೆದರೂ ನೇರವಾಗಿ ಮಾತಾಡುವ ಹಾಗಿಲ್ಲ; ಹೆಸರು ಹಿಡಿದು ಕೂಗಕೂಡದು. ಹಾಗೆ ಯಾರಾದರೂ ಮಾಡಿದರೆ ಅವರು ಊರಲ್ಲೆಲ್ಲ ಹಾಸ್ಯಕ್ಕೆ ಗುರಿಯಾಗುತ್ತಾರೆ. ' ನೋಡಿ, ಅವನು ಹೆಂಡತಿಯ ಸಂಗಡ ಎಲ್ಲರಿದಿರು ಹೇಗೆ ಮಾತಾಡುತ್ತಾನೆ; ಅವಳು, ನೋಡಿ, ಸ್ವಲ್ಪವಾದರೂ ನಾಚಿಕೆಯಿದೆಯೆ ? ಎಲ್ಲರ ಮುಂದೆ ಹೇಗೆ ಗಂಡನನ್ನು ಕರೆದು ಕರೆದು ಮಾತಾಡಿಸುವ ಆ ಒಯ್ಯಾರವನ್ನು ನೋಡಿ.

ಇಂಥ ಸಮಾಜದಲ್ಲಿ ಬೆಳೆದು ಬಂದ ಮಾಧವನಿಗೆ ಹೆಣ್ಣಿನ ಕುರಿತು ಯೋಚಿಸುವುದು ಮಹಾಪಾಪ ಎಂಬ ಭಾವನೆ ಮನಸ್ಸಿನಲ್ಲಿ ಬೇರು ಬಿಟ್ಟಿತ್ತು. ಆದರೆ ಆ ಯೋಚನೆ ಬಾರದೆ ಇರುತ್ತದೆಯೇ ? ಬೇಡ ಬೇಡ ಎಂದಹಾಗೆ

ಅದು ಬರುವ ರಭಸ ಹೆಚ್ಚುತ್ತದೆ. ಮನಸ್ಸಿನ ಬಾಗಿಲುಗಳನ್ನು ಹಾಕಲು ಹೋದರೆ ಅದು ಬಿರುಗಾಳಿಯಂತೆ ನುಗ್ಗಿ ಬಾಗಿಲನ್ನೇ ಮುರಿದು ಚೆಲ್ಲುತ್ತಿದೆ ಮನಸ್ಸಿನ ಸಮಾಜಭಾಗ ಬೇಡವೆಂದರೆ ವ್ಯಕ್ತಿಭಾಗ ಅದನ್ನು ಕೈ ನೀಡಿ ಕರೆಯುತ್ತದೆ. ಒಂದು ಕಲಿತ ಬುದ್ಧಿಯಾದರೆ ಇನ್ನೊಂದು ಪಡೆದು ಬಂದ ಬುದ್ಧಿ. ಈ ಎರಡರ ದ್ವಂದ್ವದಲ್ಲಿ ಹುಟ್ಟಿನೊಡನೆ ಬಂದ ಸಹಜ ಬುದ್ಧಿಯೇ ಕೊನೆಗೆ ಗೆಲ್ಲುತ್ತದೆ. ಆದರೆ ರಣರಂಗವಾಗಿದ್ದ ಮನಸ್ಸು ಆ ಮೇಲೆ ಹಾಳು ಹಾಳು ಸುರಿಯುತ್ತದೆ.

ಮಾಧವನ ಸಡಿಲುಗೊಂಡಿದ್ದ ಮನಸ್ಸಿನಲ್ಲಿ ಈಗ ಹೆಣ್ಣಿನ ಯೋಚನೆ ಕಟ್ಟೆಯೊಡೆದ ನದಿ ಸುತ್ತಮುತ್ತಲ ಹೊಲಗದ್ದೆಗಳನ್ನೆಲ್ಲ ನುಗ್ಗಿ ಮುಳುಗಿಸು ವಂತೆ ಭೋರ್ಗರೆದು ನರನರವನ್ನೂ ತುಂಬಿ ತುಳುಕುತ್ತದೆ. ಅದು ಬರುವಾಗ ತಂಗಾಳಿಯ ಅಲೆಯಲ್ಲಿ ಹೆಜ್ಜೆಯಿಟ್ಟು ಬರುವ ಕೇದಗೆಯ ಕಂಪಿನಂತೆ, ದೂರದ ಪಂಚವಾದ್ಯದ ಮೊಳಗಿನಂತೆ ಬರುತ್ತದೆ. ಬೇಸಗೆಯ ಕಾದ ನೆಲದ ಮೇಲೆ ಎರಡೇ ಎರಡು ಹನಿ ಬಿದ್ದು ಧೂಳಿನ ಮೋರೆ ಹಸಿಯಾಗುವಂತೆ ಹೃದಯ ತಂಪಿನಿಂದ ಕಂಪಿಸುತ್ತದೆ. ಮರುಕ್ಷಣವೇ ಧಗೆ ಇನ್ನೂ ಹೆಚ್ಚುತ್ತದೆ. ಶಖೆ ಅಸಹನೀಯವಾಗುತ್ತದೆ, ಮೋಡ ದಟ್ಟಯಿಸಿ ಮಳೆಯಾಗದೆ, ಮಳೆ ಪ್ರವಾಹ ವಾಗದೆ ಮತ್ತೆ ತಣಿವಿಲ್ಲ.

ಸಂಜೆ ಹೊತ್ತು ಕೆರೆಯ ದಂಡೆಯ ಮೇಲೆ ತಂಗಾಳಿಗೆ ಮೈ ಚಾಚಿ ಕುಳಿತಾಗ ಕಲ್ಪನೆಗೆ ರೆಕ್ಕೆ ಮೂಡುತ್ತದೆ. ತೆಂಗಿನ ಮರ, ಬಾಗಾಳ ಮರ ತಲೆ ಹಾಕುತ್ತವೆ. ಎಲೆ ಎಲೆಯೂ ಮರ್ಮರದ ಹಿಮ್ಮೇಳ ನುಡಿಸುತ್ತದೆ. ಆರಿ ಹೋದ ಕೆರೆಯ ತಳದ ಪಾಚಿಗಟ್ಟಿದ ನೀರು ಸುಕ್ಕು ಸುಕ್ಕಾಗಿ ಸಂಜೆ ಸೂರ್ಯನ ಭಂಗಾರದ ಕೈ ತಾಗಿ ಕಚಗುಳಿಯಿಟ್ಟ ಹಾಗೆ ಮುಸು ಮುಸು ನಗುತ್ತದೆ. ಮನಸ್ಸು ಮೋಡಗಳ ಕೂಡ ಹಾಯಾಗಿ ತೇಲುತ್ತದೆ. ಹೊತ್ತು ಕಂತಿ ಮಬ್ಬು ಹಬ್ಬಿ ಕತ್ತಲ ನೆರೆ ದಶದಿಕ್ಕುಗಳಿಂದಲೂ ಒಳನುಗ್ಗಿದ್ದಾಗ ನಕ್ಷತ್ರಗಳು ಮೋಡಗಳ ತೆರೆಯಾಚೆಯಿಂದ ಇಣಿಕುತ್ತವೆ. ಆಗ ಮಾಧವನ ಮನಸ್ಸು ನಕ್ಷತ್ರಗಳಲ್ಲಿ ನೆಟ್ಟು ಹೋಗುತ್ತದೆ. ಕಣ್ಣು ಅವುಗಳ ಮಿನುಗು ವಾಟದಲ್ಲಿ ತಲ್ಲೀನವಾಗುತ್ತದೆ.

ಮೋಡಗಳಾಚೆ ಈ ನಕ್ಷತ್ರಗಳ ನಾಡು. ಅವಕ್ಕೆ ಹಗಲೆಲ್ಲ ನಿದ್ದೆ,

ಇರುಳೆಲ್ಲ ಎಚ್ಚರ. ಒಂದೇ ಸ್ಥಳದಲ್ಲಿ ಕುಳಿತರೂ ನೂರು ಲೋಕಗಳನ್ನು ಸುತ್ತಿ ಬರುವ ಮನಸ್ಸಿನ ಚಾಂಚಲ್ಯದಂತೆಯೇ ಅವುಗಳ ನಿರಂತರವಾದ ಮಿನುಗಾಟ. ನೋಡ ನೋಡುತ್ತ ಹೋದಂತೆ ಆ ನಕ್ಷತ್ರಗಳೆಲ್ಲ ಬೆಳಕಿನ ಶುಭ್ರ ಶರೀರಗಳಂತೆ ಕಾಣಿಸುತ್ತವೆ. ಆಗಾಗ ಒಂದೊಂದು ನಕ್ಷತ್ರ ಒಂದೊಂದು ಸ್ತ್ರೀ ರೂಪ ತಳೆದು ನಿಲ್ಲುತ್ತದೆ. ಆಹಾ! ಆ ತಾರೆಯನ್ನು ನೋಡು. ಅದು ಯಾರು? ಓಹೋ! ಮಾಧವನ ತರಗತಿಯಲ್ಲೇ ಓದುತ್ತಿದ್ದ ಆ ಸುಶೀಲೆ ಯಲ್ಲವೆ? ಹೌದು. ಅದೇ ಶಾಂತವಾದ, ಕೊಂಚ ವಿಷಣ್ಣತೆ ಬೆರೆತಂತೆ ತೋರುವ ತುಂಬು ಮುಖ. ಅದೇ ವಿಶಾಲವಾದ ಸದಾ ಸ್ಥಿರವಾದ ಕಣ್ಣು. ನೋಡು, ಬಿಲ್ಲಿನಂತೆ ಬಾಗಿದ ಆ ಕಪ್ಪು ಹುಬ್ಬು ಎಷ್ಟು ಮೋಹಕವಾಗಿದೆ! ಆದರೆ ಅದು ಮೈ ಮರೆಸುವ ರೂಪವಲ್ಲ, ಮನಸ್ಸನ್ನು ಉತ್ತೇಜಿಸುವ ಸೌಂದರ್ಯವಲ್ಲ. ಶುದ್ಧವಾದ ಶುಭ್ರವಾದ ಹಿಮದಂತೆ ಮನಸ್ಸನ್ನು ಗಡ್ಡೆ ಗಟ್ಟಿಸುವ ಚೆಲುವು. ಆಗಾಗ ಮಾಧವ ಕ್ಲಾಸಿನಲ್ಲಿ ಅವಳ ಕಡೆ ಕಣ್ಣು ತಿರುಗಿಸುತ್ತಿದ್ದ. ಆದರೆ ಅವಳ ಕಣ್ಣು ಮಾತ್ರ ನೇರವಾಗಿ ಗೋಡೆಯನ್ನೋ ಕಿಟಕಿಯಾಚೆಗೆ ದೂರದ ದಿಗಂತವನ್ನೋ ನೋಡುತ್ತಿರುವ ಹಾಗೆ ತೋರುತ್ತದೆ. ಅವಳ ಬಾಯಿಯಿಂದ ಒಂದು ಮಾತು ಹೊರಬಿದ್ದದ್ದನ್ನೂ ಯಾರೂ ಕೇಳಿರಲಿಲ್ಲ. ಯಾವಾಗಲೂ ತಲೆತಗ್ಗಿಸಿ ನಡೆಯುತ್ತಿದ್ದಳು. ಆ ಮೌನದ ಹಿಂದೆ ಎಂಥ ಹೃದಯವಿತ್ತೋ. ಆ ತಗ್ಗಿದ ಮುಖದ ಹಿಂದೆ ಎಂಥ ಭಾವಗಳೋ, ಎಂಥ ಕಂಪುಗಳೋ!

ಮೂರು ವರ್ಷಗಳೂ ಇದೇ ರೀತಿ ಕಳೆದುವು. ಬರುತ್ತ ಬರುತ್ತ ಅವಳೊಡನೆ ಒಂದೇ ಒಂದು ಮಾತಾಡಬೇಕೆಂದು ಮಾಧವನ ಮನಸ್ಸು ತುಡಿಯ ತೊಡಗಿತು. ಆದರೆ ಅಂಥ ಸಂದರ್ಭ ಸಿಕ್ಕುವುದು ಹೇಗೆ? ಕೊನೆಗೆ ಎಸ್. ಎಸ್. ಎಲ್. ಸಿ. ತರಗತಿಯ ಸಂತೋಷಕೂಟ ನಡೆದಾಗ ಮಾಧವನಿಗೆ ಅಂಥ ಒಂದು ಅವಕಾಶ ದೊರೆಯಿತು. ಕೂಟಕ್ಕೆ ಕಾರ್ಯದರ್ಶಿಯಾಗಿದ್ದ ಮಾಧವ ವಿದ್ಯಾರ್ಥಿನಿಯರನ್ನು ಆ ವಿಚಾರವಾಗಿ ಸಲಹೆ ಕೇಳಬೇಕಾಗಿತ್ತು. ಅಬ್ಬಾ ಅಂತೂ ಒಂದು ಸಂದರ್ಭ — ಮೂರು ವರ್ಷಗಳು ಮುಗಿವ ಹೊತ್ತಿಗಾದರೂ — ಸಿಕ್ಕಿತಲ್ಲ ಎಂದು ಮನಸ್ಸು ತೃಪ್ತಿಯಿಂದ ಕುಣಿಯಿತು- ನಿಜ, ಆದರೆ ಮಾತಾಡಿಸುವುದು ಹೇಗೆ, ಎಲ್ಲಿ? ಯಾವ ರೀತಿ?

ಸುಶೀಲೆಯನ್ನು ಕೊನೆಗೂ ಮಾತಾಡಿಸುವ ಧೈರ್ಯಮಾಡಿ ಮನಸ್ಸು ಗಟ್ಟಿ-ಯಾಗಬೇಕಾದರೇ ಮೂರು ದಿನಗಳ ಕಾಲ ಹಿಡಿಯಿತು. ಮನಸ್ಸು ಹಾಗೆ ಗಟ್ಟಿಯಾದ ಮೇಲೆ ಮನಸ್ಸಿನ ನಿರ್ಧಾರ ಕಾರ್ಯರೂಪಕ್ಕೆ ಬರಲು ಇನೂ ಎರಡು ದಿನ ಬೇಕಾಯಿತು. ಸಂಧಿಸಿದಾಗ ಏನು ಮಾತಾಡಬೇಕೆಂಬುದನ್ನು ಗಂಟೆಗಟ್ಟಲೆ ಯೋಚಿಸಿ ನಿಶ್ಚಯಿಸಿಕೊಂಡಿದ್ದ. ಆದರೆ ಕೊನೆಗೂ ಭೆಟ್ಟಿ ಯಾದಾಗ ಮಾತೇ ಹೂತು ಹೋಗಬೇಕೇ? ಗಟ್ಟಿಮಾಡಿಕೊಂಡಿದ್ದ ಒಂದು ಮಾತೂ ಬಾಯಿಃಯಿಂದ ಹೊರಡಬೇಡವೇ?

"ಕ್ಲಾಸ್ ಸೋಶಿಯಲ್ಸ್ — ಸಬ್ಸ್‌ಕ್ರಿಪ್ಶನ್" ಎಂಬ ಎರಡೇ ಎರಡು ಮಾತುಗಳು ತನ್ನ ಬಾಯಿಃಯಿಂದ ತೆವಳಿ ಬಂದದ್ದು ಕೇಳಿ ಅದು ತನ್ನ ಧ್ವನಿಯೇ? ಎಂದು ಮಾಧವ ಚಕಿತನಾದ. "ಆಗಲಿ" ಎಂದು ಅವಳು ಹೇಳಿದ ಮಾತಿನಲ್ಲಿದ್ದ ದೃಢತೆಯನ್ನು, ಶಾಂತ ಆತ್ಮವಿಶ್ವಾಸವನ್ನು ಕಂಡು ಮಾಧವನಿಗೆ ನಾಚಿಕೆಯಾಯಿತು.. ಆದರೆ ಮತ್ತೆ ಮಾತು ಹೊರಡಲಿಲ್ಲ. ಅಲ್ಲಿಗೆ ಆ ಘಟನೆ ಮುಗಿಯಿತು. ಆದರೆ ಅದರ ನೆನಪು ಇಂದು ಮಾಧವನ ಹೃದಯದಲ್ಲಿ ಹಸುರುಹಸುರಾಗಿಯೇ ಇದೆ. ಈಗ ಆ ನಕ್ಷತ್ರದಲ್ಲಿ ನಿಂತು ಸುಶೀಲೆ ನಸುನಗೆಯೊಡನೆ ಮಾತಾಡುತ್ತಾಳೆ. ಅದನ್ನು ಕೇಳುತ್ತ ತಲ್ಲೀನನಾಗಿ ಮಾಧವ ಕುಳಿತುಕೊಳ್ಳುತ್ತಾನೆ.

ಆದರೆ ನಕ್ಷತ್ರಲೋಕದಲ್ಲಿ ಮೈ ತಳೆಯುವುದು ಅದೊಂದೇ ರೂಪವಲ್ಲ. ಎಲ್ಲೆಲ್ಲೋ ಕಂಡ, ಯಾವ ಕನಸಿನಲ್ಲೋ ಪ್ರತಿಬಿಂಬಿಸಿದ್ದ ಸುಂದರ ಸ್ತ್ರೀ ಪ್ರತಿಮೆಗಳು ತಾರೆಯ ಮಿನುಗುಬೆಳಕಿನಲ್ಲಿ ಕ್ಷಣಮಾತ್ರ ರೂಪುಗೊಂಡು ಅದೃಶ್ಯವಾಗುತ್ತವೆ.

ಈ ಕನಸಿನ ಲೋಕದಿಂದ ಹೊರಬಂದಾಗ ಮಾತ್ರ ಮನಸ್ಸು ಅಸ್ವಸ್ಥ ವಾಗುತ್ತದೆ. ಯಾವುದರಲ್ಲೂ ಆಸಕ್ತಿ ತೋರದು. ಮನೆಯಲ್ಲಿ ತಂದೆ ಏನೇನೋ ಕೆಲಸದಲ್ಲಿ ತೊಡಗಿರುತ್ತಾರೆ. ಅದರಲ್ಲಿ ಮಾಧವನ ಮನಸ್ಸು ಓಡುವುದಿಲ್ಲ. ಗದ್ದೆಗಳಲ್ಲಿ ರೈತರು ಕೆಲಸ ಮಾಡುತ್ತಾರೆ. ಗದ್ದೆಯ ಕಬ್ಬಿನ ತೋಟಕ್ಕೆ, ಸೌತೆಕಾಯಿ ತೋಟಕ್ಕೆ ನೀರು ಮೊಗೆಯುತ್ತಾರೆ. ಅದರಲ್ಲೂ ಮನಸ್ಸು ಮಗ್ನವಾಗದು. ಪುಸ್ತಕವೂ ಕೂಡಾ ಏಕೋ ಮೊದಲಿನಷ್ಟು ರುಚಿಸುವುದಿಲ್ಲ. ಊರಿಗೆ ಬಂದ ಹೊಸತರಲ್ಲಿ ಬರೆದ ಒಂದು ಪದ್ಯವೆಷ್ಟೋ

ಅಷ್ಟೆ, ಬರೆವಣಿಗೆಯೂ ಕುಂಠಿತವಾಗಿದೆ. ಕುಳಿತರೆ ಬೇಸರ, ನಿಂತರೆ ಬೇಸರ, ಮಲಗಿದರೂ ಅಷ್ಟೇ. ಇದೇಕೆ ಹೀಗಾಗುತ್ತದೆ, ಯಾವ ಪಾಪದ ಫಲವಿದು ? ಯಾವ ದುರಂತದ ಪೂರ್ವ ಸೂಚನೆಯಿದು ? ಎಂದು ಮಾಧವ ಯೋಚಿಸುತ್ತಾನೆ. ಉತ್ತರ ಹೊಳೆಯುವುದಿಲ್ಲ.

೧೧

ಅವಳು ಬಂದಳು. ಅಬ್ಬಾ, ಕೊನೆಗೂ ಬಂದೇ ಬಿಟ್ಟಳಲ್ಲ. ಬಂದಳು: ತನ್ನ ಸಂಗಡ ಸುಗ್ಗಿಯ ಚಿಗುರನ್ನು ತಂದಳು; ಜಾಜಿ, ಮಲ್ಲಿಗೆ, ಸಂಪಗೆ, ತಾವರೆ, ನಂದಬಟ್ಟಲು, ಕಣಗಿಲೆ, ದಾಸವಾಳಗಳ ನೂರು ಕಂಪುಗಳನ್ನು ತಂದಳು. ಮಾವಿನಮರದ ಎಲೆಗಳ ನಡುವೆ ಮರೆಯಾಗಿ ಕುಳಿತ ಕೋಗಿಲೆ ಮೂರು ಬಾರಿ ಕೂಗಿತು, ಎಚ್ಚರಿತು: 'ಕುಹೂ, ಕುಹೂ, ಕುಹೂ,' ದೂರದ ಸಮುದ್ರ 'ಭೋ ಭೋ ಭೋ' ಎಂದು ಅವಳ ಬರವನ್ನು ಹತ್ತು ದಿಕ್ಕುಗಳಿಗೂ ಹರಡಿತು. ಬಯಲ ಮೇಲೆ ಈಸಿ, ಮರ ಗಿಡಗಳ ನಡುವೆ ಉಯ್ಯಾಲೆಯಾಡಿ, ಹಾಡಿ ಕಾಡುಗಳಲ್ಲಿ ನಿಂತು ಬೇಗೆ ಕಳೆದು, ಹಳ್ಳ ಕೊಳ್ಳ ಕೆರೆ ಕಾಲುವೆಗಳಲ್ಲಿ ಮುಳುಗಿ ಮಿಂದು ತಂಪಾಗಿ ಗಾಳಿ ಬೀಸಿತು; ಅದರ ಅಲೆ ಅಲೆಯಲ್ಲೂ ಗಂಧರ್ವ ಲೋಕದ ಅಪೂರ್ವನಾದ ಸೂಸಿತು. ಸುತ್ತಮುತ್ತಲೂ ಹಸುರು ಹಾಸಿತು. ಬಳ್ಳಿಬಳ್ಳಿಗಳ ಸುತ್ತ ದುಂಬಿ ಸುಳಿದು ಸುತ್ತಿ ಝೇಂಕರಿಸಿ ಶೃಂಗಾರ ರಾಗವನ್ನು ಮೊರೆಯಿತು.

ಅವಳು ಬಂದಳು. ಹೊರಗೆ ಹೋಗಿದ್ದ ಮಾಧವ ಮನೆಗೆ ಕಾಲಿಡುವಾಗಲೇ ಅವಳು ಬಂದಿದ್ದಳು. ದೇವಸ್ಥಾನದ ಚಾವಡಿಯಲ್ಲಿ ಕುಳಿತು ಕುಳಿತು ಬೇಸರಾಗಿ ಮನೆಯ ಕಡೆ ಬಂದ ಮಾಧವ ಹೊಸ್ತಿಲ ಬಳಿ ಕಾಲಿಟ್ಟಾಗಲೇ ಅವಳು ಕಂಡಳು. ಮನೆಯ ಚಾವಡಿಯ ಮೇಲೆ ಇಬ್ಬರು ಅಪರಿಚಿತ ಹೆಂಗಸರು ಕುಳಿತಿದ್ದರು. ಒಬ್ಬರು ವೃದ್ಧೆ. ಇನ್ನೊಬ್ಬಳು ಹುಡುಗಿ — ವಯಸ್ಸು ಹದಿನಾಲ್ಕೋ ಹದಿನೈದೋ. ಕಂಡು ಮಾಧವ ಒಂದು ಕ್ಷಣ ಬೆಚ್ಚಿ ನಿಂತ. ಬಾಳೆಮೀನಿನಂತೆ ವಿಶಾಲವಾಗಿದ್ದ ಅವಳ ಆ ಕಣ್ಣುಗಳು ಒಂದು ಸಲ ಕದಲಿ ಒಂದು ಕ್ಷಣ ಮಾಧವನ ಕಡೆ ಉರುಳಿ ಮತ್ತೆ ಎತ್ತಲೋ ಹೊರಳಿದುವು. ಆ ಕಣ್ಣುಗಳಿಂದ ವಿದ್ಯುತ್ತು ತುಂಬಿದ ತಂತಿಗಳು ಬೀಸಿ ಮಾಧವನನ್ನು ಬಂಧಿಸಿದುವು. ಆ ಕಣ್ಣುಗಳಿಂದ ಹೊರಟ ಕೆಂಬಳಕಿನ ಹೊಳೆಯಲ್ಲಿ ಮಾಧವ ನೆಲೆದಪ್ಪಿ ಪ್ರವಾಹದ ಕೂಡ ತೇಲತೊಡಗಿದ. ಅವಳು ಅಲ್ಲಿ ಕೂತಿದ್ದುದರಿಂದಲೋ ಏನೋ ಜಗತ್ತಿನ ಬಣ್ಣವೇ ಬದಲಿಸಿತು. ಹುಲ್ಲು

ಹೊಪೆಸಿದ ಆ ಸಾಮಾನ್ಯವಾದ ಮನೆಗೆ ಅಲಕಾವತಿಯ ಅಸಾಮಾನ್ಯವಾದ ಕಳೆ ಬಂತು. ಬೇಸಗೆಯ ಮಧ್ಯಾಹ್ನದ ಧಗೆ ಕ್ಷಣಮಾತ್ರದಲ್ಲಿ ಕಳೆದು, ಸುತ್ತು ಮುತ್ತಲೂ ಹುಣ್ಣಿಮೆಯ ಬೆಳುದಿಂಗಳ ಕ್ಷೀರಸಾಗರದ ತೆರೆ ಬಂದು ಬಡಿಯಿತು. ಪ್ರತಿಯೊಂದು ವಸ್ತುವೂ ಈಗ ಅಪೂರ್ವ ತೇಜಸ್ಸಿನಿಂದ ಹೊಳೆಯಿತು. ಮನೆ ಮುಂದಿನ ಬೋಳು ಮರ ಹೂವಿನ ತೇರಿನಂತೆ ಸೊಗಸಿತು. ಮನೆ ಮುಂದಿನ ಆ ಕಾಲುದಾರಿ ಎರಡೂ ಕಡೆ ಮನೆ ಮಹಲು ಮಳಿಗೆಗಳಿಂದ ಕೂಡಿದ ರಾಜಮಾರ್ಗದಂತೆ ಶೋಭಿಸಿತು. ನಿಂತ ನೆಲವೇ ನಂದನವಾಗಿ ಅರಳಿ ಅಲ್ಲಿ ಕಲ್ಪವೃಕ್ಷ ಚಿಗಿಯಿತು; ಇಲ್ಲಿ ಅಮೃತದ ಕಾರಂಜಿ ಚಿಮ್ಮಿತು. ಅಲ್ಲಿ ಉಚ್ಚೈಃಶ್ರವಸ್ಸು ಹೇಕರಿಸಿತು. ಇಲ್ಲಿ ಇಂದ್ರನ ಒಡ್ಡೋಲಗಶಾಲೆ ಮೆರೆಯಿತು— ರಂಭೆ, ಊರ್ವಶಿ, ಮೇನಕೆಯರು ಇಲ್ಲಿ ಲಲಿತನೃತ್ಯದಲ್ಲಿ ಹೆಜ್ಜೆಯಿಟ್ಟರು ತಂಬೂರಿಯ ತಂತಿ ಗುಳುಗುಳಿಸಿತು. ವೀಣೆ ಕೊಳಲು ಪಿಟೀಲುಗಳ ನಾದ ಮಂದವಾಗಿ, ಮಂದ್ರವಾಗಿ ಮನೆಹೊರಗೆ ನಿರಂತರವಾಗಿ ಸುರಿಯುವ ಹನಿ ಮಳೆಯಂತೆ ಇಳಿಯಿತು.

ಅವಳು ಬಂದಳು. ಯಾರು ಅವಳು? ಎಲ್ಲಿಂದ ಬಂದಳು? ಏಕೆ? ಹೊಸ್ತಿಲಿಂದ ಕಾಲು ಕಿತ್ತು ಮಾಧವ ಒಳಗೆ ಹೋದ. ಕ್ರಮೇಣ ಎಲ್ಲವೂ ತಿಳಿಯಿತು. ಅವರು ಆ ಊರಿಗೆ ಹನ್ನೆರಡು ಮೈಲಿ ದೂರದ ಭಟ್ಕಳದವರು. ಮಾಧವನ ತಂದೆ ವಾಸುದೇವಯ್ಯನವರ ರೋಗ ಚಿಕಿತ್ಸೆಯ ಕೀರ್ತಿಯನ್ನು ಕೇಳಿ ಅಲ್ಲಿಗೆ ಬಂದಿದ್ದಾರೆ. ಆ ಹುಡುಗಿಗೆ ದಿನ ಬಿಟ್ಟು ದಿನ ಬರುವ ಜ್ವರದ ಪೀಡೆ. ಅದಕ್ಕೆ ಚಿಕಿತ್ಸೆ ಆಗಬೇಕು. ತಾಯಿಯ ಕೂಡ ಅವಳು ಬಂದಿದ್ದಾಳೆ. ಅವರು ಸಾರಸ್ವತರು. ಅವಳ ಹೆಸರು ನೀಲಾ.

ನೀಲಾ!

ಎಷ್ಟು ಸುಂದರವಾದ ಹೆಸರು: ಲಕ್ಷ ಲಕ್ಷ ನಕ್ಷತ್ರಗಳ ರೆಪ್ಪೆ ಮಡಿಸದ ಕಣ್ಣುಗಳನ್ನು ತೆರೆದು ಸದಾ ಜಾಗ್ರತವಾಗಿ ನೋಡುತ್ತಿರುವ ಆ ನೀಲ ಆಕಾಶದ ಹಾಗೆ. ತೆರೆತೆರೆಯಾಗಿ ತೆರೆದು ಉರುಳಿ, ನೊರೆ ಚಿಮ್ಮಿ, ದಡವನ್ನಪ್ಪಳಿಸಿ ಬಡಿದು ಆರ್ಭಟಿಸಿದರೂ ಕೂಡಾ ದಡಕ್ಕೆ ಕೊಂಚ ದೂರದಲ್ಲಿ ನೀಲ ನೀಲವಾಗಿ ಉಬ್ಬಿ ಇಳಿಯುವ ಕಡಲಿನ ಹಾಗೆ.

ನೀಲಾ!

ಎಂಥ ಚೆಲುವು ಇವಳದು ! ಹೇಗೆ ಬಣ್ಣಿಸಬೇಕು ಅದನ್ನು ? ಎಷ್ಟು ಯೋಚಿಸಿದರೂ ಮಾಧವನಿಗೆ ಆ ಚೆಲುವಿಗೆ ತಕ್ಕ ಉಪಮೆ ಸಿಕ್ಕಲಿಲ್ಲ. ಆ ಅವಳ ದೇಹದಲ್ಲಿ ಜಗತ್ತಿನಲ್ಲಿ ಸುಂದರವಾದುದೆಲ್ಲ ಒಂದುಗೂಡಿದಂತೆ ಕಂಡಿತು. ಕವಿಗಳು ಬಣ್ಣನೆಗೆ ಉಪಯೋಗಿಸುವ ಆ ತಾವರೆ, ಚಂದ್ರ, ದುಂಬಿ, ಕಲಹಂಸ, ಗಿಳಿ, ಕೋಗಿಲೆ, ಮೃಗಮದ, ತಳಿರು, ಕಾರ್ಮೋಡ, ಮಿಂಚು — ಇವೆಲ್ಲವೂ ಈ ಇವಳ ಮುಂದೆ ಅತಿ ಸಾಮಾನ್ಯವಾಗಿ ಕಂಡುವು ಅವಳ ಸುತ್ತ ಇಂದ್ರ-ಜಾಲದ ಒಂದು ವೃತ್ತ ಹಬ್ಬಿರುವುದು ಮಾತ್ರ ನಿಜ. ಅವಳು ನಿಂತ ನೆಲವೇ ನಂದನವಾಗುವುದೂ ಅಷ್ಟೇ ಸಹಜ.

ಈ ಸೌಂದರ್ಯ ವರ್ಣನೆಗೆ ನಿಲುಕುವುದಿಲ್ಲ. ಅದು ನೇರವಾಗಿ ಹೃದಯವನ್ನು ಹೊಕ್ಕು ಅಲ್ಲಿ ತರಂಗಗಳನ್ನೆಬ್ಬಿಸುವಂಥ ಅಂತರಂಗದ ಬುನಾದಿಗೇ ತಳಪಾಯವಾಗಿ ನಿಲ್ಲುವಂಥದು. ಮನಸ್ಸಿನ ಪದರು ಪದರು-ಗಳನ್ನೂ, ಮೂಲೆ ಮೂಲೆಗಳನ್ನೂ ಬೆಳಗಿ ನಿಲ್ಲುವ ದೇವದೀಪ ಅದು.

ಅಷ್ಟು ದಿನ ಗಾಳಿ ಹೋಗಿ ಚಪ್ಪಟೆಯಾಗಿದ್ದ ಮಾಧವನ ಮನಸ್ಸು ಗಾಳಿಯೂದಿ ಬಿಟ್ಟ ಚೆಂಡಿನಂತೆ ತುಂಬಿತು. ಅಷ್ಟು ದಿನ ಅವನನ್ನು ಬಾಧಿಸು ತ್ತಿದ್ದ ಏಕಾಂಗಿಭಾವನೆ ಕಳೆದು ಮತ್ತೆ ತಾನು ಈ ಜಗತ್ತಿನ ಒಂದಂಶ ಎಂಬ ಭಾವನೆ ತನಗೆ ತಾನೇ ಮೊಳೆಯಿತು. ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲೂ ಒಂದು ಸಾರ್ಥಕತೆ ಕಂಡಿತು. ಕಾಗೆಯಂಥ ಹಕ್ಕಿಗೆ ಕೂಡಾ ಈಗ ಒಂದು ಹೊಸ ಬೆಡಗು ಬಂತು. ಬರಡು ಕೆರೆಯೇ ಮಾನಸ ಸರೋವರದಂತೆ ತುಂಬಿ ತುಳುಕಿತು. ಆಕಾಶದಲ್ಲೆಲ್ಲ ಪ್ರತಿಯೊಂದು ಮೋಡದ ಮೇಲೂ ಒಂದೊಂದು ಕಾಮನ ಬಿಲ್ಲು ಮೂಡಿತು. ದೇವಸ್ಥಾನದಾಚೆಯ ಬೋಳು ಬೆಟ್ಟ ನಂದನದ ಹಾಗೆ ಹೂವು ಚಿಗುರು ತೊಟ್ಟು ಕುಣಿಯಿತು. ಪ್ರತಿಯೊಂದು ತೆಂಗಿನ ಮರವೂ ಕಲ್ಪವೃಕ್ಷವಾಗಿ " ನಿನಗೇನು ಬೇಕು — ತೆಗೆದುಕೋ " ಎಂದು ಕೈ ಚಾಚಿ ಕರೆಯುವಂತೆ ತೋರಿತು. ಮಾಧವನ ಮನಸ್ಸು ತುಂಬಿತು, ಜಗತ್ತು ತುಂಬಿತು. ಎಲ್ಲವೂ ಈಗ ಪರಿಪೂರ್ಣ. ಯಾವುದರಲ್ಲೂ ಅರಕೆಯಿಲ್ಲ. ನೀಲಾನ ವ್ಯಕ್ತಿತ್ವದಿಂದ ತರಗೆಲೆಗೂ ಹೊಸಚೇತನ ಬಂತು. ಅದು ಹೊಸ ಹುಟ್ಟಿನ ಹರಿಕಾರನಾಗಿ ಗಾಳಿಯಲ್ಲಿ ಸರಸರ ಎಂದಿತು. ಮಾಧವನ ಮನಸ್ಸಿ ನಲ್ಲಿ ತುಂಬಿದ್ದ ಹಳೆ ಕಾಲದ ಯೋಚನೆಗಳೆಲ್ಲ ತರಗೆಲೆಗಳಂತೆ ಹಾರಿ

ಹೋದುವು. ಮನಸ್ಸು ಮೊದಲ ಮಳೆಹನಿಯುಂಡ ನೆಲದಂತೆ ತಣಿಯಿತ್ತು, ಉತ್ತು ಹರಗಿದ ಹಸಿನೆಲದಂತೆ ಕಂಪು ಹರಿಯಿತು. ಅಲ್ಲಿ ನವಿಲುಗಳ ಹಿಂಡು ಬಂದು ನರ್ತಿಸಿತು. ಅಲ್ಲಿ ತಾವರೆಯ ಸುತ್ತ ದುಂಬಿ ಭ್ರಮಿಸಿತು. ದೀಪದ ಸುತ್ತಲೂ ಪತಂಗ ಆಡಿತು. ಹಸುರೆಲೆಗಳ ಮೇಲೆ ನಿಶ್ಯಬ್ದವಾಗಿ ಇಬ್ಬನಿ ಬಂದು ಇಳಿಯಿತು. ಸೊಕ್ಕಿದ ಗೂಳಿ ನೆಲ ಮೂಸಿ ಗುಟುರುಹಾಕಿ ಬಾಲವೆತ್ತಿ ಧೀಂಕಿಟ್ಟಿತು. ಮತ್ತಗಜ ಮರಮರಗಳನ್ನು ಮುರಿಯುತ್ತ ಘೀಳಿಟ್ಟಿತು. ಗುಬ್ಬಚ್ಚಿಗಳೆರಡು ಮರದ ತೊಲೆಯ ಸಂದಿಯಲ್ಲಿ ನಿಂತು ಸರಸವಾಡಿದುವು.

ನೀಲಾ, ನೀಲಾ, ನೀಲಾ : ಮಾಧವನ ಹೃದಯ ಮಂದಮಂದವಾಗಿ ಪಿಸುಗುಟ್ಟಿತು. ಅವನ ಕಾಲು ನೆಲವನ್ನು ಬಿಟ್ಟಿತು. ಪಕ್ಕೆಗಳಲ್ಲಿ ಗರಿ ಮೂಡಿದುವು. ನಿಧಾನವಾಗಿ ಬೂರುಗದ ಹತ್ತಿಯಂತೆ ಅವನು ಮೇಲಕ್ಕೆದ್ದ. ಗಾಳಿ ಸುಯ್ಯನೆ ಬೀಸಿತು. ತಲೆಯ ಮೇಲೆ ಬೆಳ್ಳಿ ಮೋಡ ಛತ್ರಿ ಬಿಚ್ಚಿತು. ಬಿಚ್ಚಿದ ಛತ್ರಿಯ ಮೇಲೇ ಕುಳಿತು ಮಾಧವ ಏರಿದ, ತೇಲಿದ, ಹಾರಾಡಿದ, ಅಲ್ಲಿ ಅವನ ಹತ್ತಿರ ಹತ್ತಿರವೇ ನೀಲಾನೂ ಇನ್ನೊಂದು ಬೆಳ್ಳಿಮೋಡದ ಮೇಲೆ ಕುಳಿತು ಹಾರಿದಳು. ಎರಡು ಮೋಡಗಳ ನಾವೆಗಳೂ ನೀಲಸಾಗರದಲ್ಲಿ ಲಂಗರುಬಿಚ್ಚಿ ಅಲೆದುವು. ಒಂದಕ್ಕೊಂದು ತೀರ ತೀರ ಹತ್ತಿರ ಬರುತ್ತವೆ. ಒಂದರ ಹಾಯಿ ಇನ್ನೊಂದರ ಹಾಯಿಯನ್ನು ನಸುವೆ ಸೋಂಕುತ್ತದೆ. ಒಂದರ ಕೂವೆಮರ ಇನ್ನೊಂದನ್ನು ಮೆಲ್ಲನೆ ತಾಗುತ್ತದೆ. ಮರುಕ್ಷಣವೇ ಬೇರೆ-ಯಾಗುತ್ತವೆ. ಆಹಾ, ಈ ಆಕಾಶಯಾನ ಎಷ್ಟು ಆನಂದ. ಜಗತ್ತಿನ ಪರಿವೆ ಇಲ್ಲ. ಮರಗಿಡಬಳ್ಳಿ ಗುಡ್ಡ ಬೆಟ್ಟ ಕಾಡು ತೋಪುಗಳ ಅರಿವು ಇಲ್ಲ. ಭೂತಕಾಲದ ಮತ್ತು ಭವಿಷ್ಯತ್ತಿನ ಎರಡು ಕತ್ತಲ ಖಂಡಗಳ ನಡುವೆ ವರ್ತಮಾನ ಕಿಡಿಯಂತೆ ಮಿನುಗುತ್ತದೆ. ಜೀವವೆಲ್ಲ ಅಲ್ಲಿ ಆ ಒಂದು ಬಿಂದುವಿನಲ್ಲಿ ಕೇಂದ್ರೀಕೃತವಾಗುತ್ತದೆ. ಇಲ್ಲಿ ಯಾವ ಅಂಜಿಕೆಯೂ ಇಲ್ಲ. ಮನಸ್ಸು ಸ್ವತಂತ್ರ, ಭಾವ ಸ್ವತಂತ್ರ, ಗತಿ ಸ್ವಚ್ಛಂದ.

ಈ ಹೊಸಭಾವನೆ, ಮನಸ್ಸನ್ನೆಲ್ಲ ತುಂಬಿ, ಜೀವನವನ್ನೆಲ್ಲ ತುಂಬಿ, ಜಗತ್ತನ್ನೆಲ್ಲ ತುಂಬುತ್ತಿರುವ ಈ ಅದಮ್ಯಭಾವನೆ ಪ್ರೀತಿಯೇ ಇರಬೇಕು ಎಂದು ಮಾಧವ ತೀರ್ಮಾನಿಸಿದ. ಉಳಿದ ಹುಡುಗಿಯರನ್ನು ಕಂಡಾಗಲೂ ಏನೋ ಒಂದು ತರಹ ಆಗುತ್ತಿತ್ತು: ಎದೆ ಕೊಂಚ ಜೋರಾಗಿ ಬಡಿದ ಹಾಗೆ,

ದೇಹವೆಲ್ಲ ಕೊಂಚ ಅದುರಿದ ಹಾಗೆ, ಮನಸ್ಸು ತುದಿಗಾಲ ಮೇಲೆ ನಿಂತ ಹಾಗೆ, ಆದರೆ ಇದು ಅಂಥ ಭಾವನೆಯಲ್ಲ. ಇದು ತನ್ನ ವ್ಯಕ್ತಿತ್ವವನ್ನೇ ಮುಳುಗಿಸುವ, ಮರೆಸುವ, ಬಿರುಗಾಳಿಯಂತೆ ಬೀಸಿ ಮನಸ್ಸನ್ನು ಗಿರಗಿರನೆ ತಿರುಗಿಸುವಂಥ ಭಾವನೆ. ತನ್ನನ್ನು ತಾನು ಮರೆವಂತೆ ಮಾಡಿ ಸದಾ ಆ ಇನ್ನೊಂದು ಹೃದಯಕ್ಕಾಗಿ ಎಂಥ ಗಂಡಾಂತರವನ್ನೆಲ್ಲ ಆದರೂ ಎದುರಿಸ ಬಲ್ಲನೆಂಬ ಕೆಚ್ಚನ್ನು ಕುದುರಿಸುವ ಹೊಸ ಆವೇಶ ಇದು.

ಅವಳನ್ನು ನೋಡಬೇಕು — ಸರಿ. ಮಾತಾಡಲೂ ಬೇಕು ಅವಳೊಡನೆ ಎಂದು ಮಾಧವನ ಹೃದಯ ಹಾತೊರೆಯಿತು. ಅವನ ಹೃದಯವಲ್ಲಿ ಮಲಗಿದ್ದ ನೂರಾರು ಮಾತುಗಳೆಲ್ಲ ಎದ್ದು ಕುತ್ತಿಗೆಯಬಳಿ ನಿಂತು ದುಮು-ದುಮಿಸಿದುವು. ಒಂದೊಂದಾಗಿ ಬಂದು ನಾಲಿಗೆಯ ತುದಿಯನ್ನೇರಿ ಕುಣಿದುವು, ರೆಕ್ಕೆ ಬಡಿದುವು. ಅವುಗಳ ಕಿಚಿ-ಪಿಚಿ, ಚಿಲಿ-ಪಿಲಿ ಮಾಧವನ ಅಂತರಂಗ ವನ್ನೆಲ್ಲ ತುಂಬಿತು.

ಒಂದೆರಡು ಗಂಟೆಗಳಲ್ಲೇ ಮಾಧವ ಮತ್ತು ನೀಲಾ ಪರಿಚಿತರಾದರು. ಈಗ ಈ ಇವಳ ಕೂಡ ಮಾತಾಡಲು ಮಾಧವನಿಗೆ ಸಂಕೋಚ ಹುಟ್ಟಲಿಲ್ಲ. ನೀಲಾ ತನ್ನ ನೀಲವಾದ ಅಗಲಗಣ್ಣುಗಳನ್ನು ತೆರೆದು, ಚೆರಗು ನೋಟವನ್ನು ಬೀರಿ ಆತ್ಮೀಯಭಾವನೆಯಿಂದ ಮಾತಾಡಿದಳು. ಇಬ್ಬರಿಗೂ ತಾವು ಚಿರ ಪರಿಚಿತರೆನ್ನುವಂತೆಯೇ ಅನ್ನಿಸಿತು. ಮಾಧವ ತಾನು ಇವಳನ್ನು ಎಲ್ಲೋ ಕಂಡಿರಬೇಕಲ್ಲ, ಎಲ್ಲಿ ಎಂದು ಬಹಳ ಯೋಚಿಸಿದ. ಎಲ್ಲೋ ಅಂತೂ ಅವ-ರಿಬ್ಬರೂ ಒಬ್ಬರನ್ನೊಬ್ಬರು ಕಂಡಿದ್ದರು, ಮಾತಾಡಿದ್ದರು. ಎಲ್ಲೋ ಯಾವ ಕಾಲದಲ್ಲೋ -— ಅದು ಕಾಳಿದಾಸನ ಶಾಕುಂತಲದ ಕಾಲವಿರಬಹುದು, ವಿಜಯನಗರದ ವೈಭವದ ಕಾಲವಿರಬಹುದು— ಇಬ್ಬರೂ ಜೊತೆಜೊತೆಯಾಗಿ ಆಟವಾಡಿದ್ದಿರಬೇಕು; ಹೂವುಗಳ ಪರಿಮಳವನ್ನು ಮೂಸುತ್ತ, ಸಂಜೆಯ ತಂಗಾಳಿಗೆ ಮೈಯೊಡ್ಡುತ್ತ ಲತಾಮಂಟಪಗಳಲ್ಲಿ ಕುಳಿತಿದ್ದಿರಬೇಕು. ಬೆಳು ದಿಂಗಳ ಮಾಟಕ್ಕೆ ಸಿಕ್ಕಿ ಅಪೂರ್ವ ಶೋಭೆಯನ್ನು ಪಡೆದ ಬೀದಿಯ ಸಾಲು ಮರಗಳ ನೆರಳ ಮೇಲೆ ಇಬ್ಬರೂ ಕೈಗೆ ಕೈ ಹಚ್ಚಿ ವಿಹರಿಸಿರಬೇಕು. ಇಲ್ಲ ವಾದರೆ ಈಗ ಇಲ್ಲಿ ಮೊದಲ ಸಲ ನೋಡಿದ ಕೂಡಲೇ ಒಬ್ಬರನ್ನೊಬ್ಬರು ಅರಿಯುವುದು ಹೇಗೆ? ಈ ಕಣ್ಣು ಆ ಕಣ್ಣಿನ ಇಂಗಿತವನ್ನು ತಿಳಿಯುವುದು

ಹೇಗೆ? ಈ ಹೃದಯ ಆ ಹೃದಯದ ತಾಳಕ್ಕನುಸಾರವಾಗಿ ಲಾಸ್ಯಗೈಯುವುದು ಹೇಗೆ?

ಇಬ್ಬರು ಮಾತಾಡಿದರು. ಉಳಿದೆಲ್ಲರನ್ನು ಮರೆತು ಒಬ್ಬರು ಇನ್ನೊಬ್ಬರ ಧ್ವನಿಯಲ್ಲಿ ಮುಳುಗಿದರು. ಅವಳ ಕಂಠ ವೀಣೆಯಂತೆಯೇ ಉಲಿಯಿತು

"ನೀವು ಏನು ಓದುತ್ತಿದ್ದೀರಿ, ಯಾವ ಕ್ಲಾಸಿನಲ್ಲಿ?" ಅವಳು ಕೇಳಿದಳು.

"ಎಸ್. ಎಸ್. ಎಲ್. ಸಿ. ಪರೀಕ್ಷೆ ಮುಗಿಯಿತು. ಇನ್ನೇನು ಸ್ವಲ್ಪ ದಿನಗಳಲ್ಲೇ ಫಲಿತಾಂಶ ತಿಳಿಯುತ್ತದೆ."

"ಆ ಮೇಲೆ"

"ಆ ಮೇಲೆ ಏನಾಗುವುದೋ— ಯಾರು ಬಲ್ಲರು? ಮುಂದೆಯೂ ಕಲಿಯಬೇಕೆಂಬ ಆಶೆ ಇದೆ. ಆದರೆ—"

"ಆದರೆ ಏನು? ಓದದೆ ಉಂಟೆ— ನಿಮ್ಮಂಥವರು?"

ಓದದೆ ಉಂಟೆ? ನಿಜ. ಇವಳಿಗೆ ತನ್ನ ಮನಸ್ಸಿನ ಮಾತು ಹೇಗೆ ತಿಳಿಯಿತು ಎಂದುಕೊಂಡ ಮಾಧವ.

"ನೀವು ಏನು ಓದುತ್ತಿದ್ದೀರಿ?" ಮಾಧವ ಕೇಳಿದ.

"ನಾನು ಕೂಡಾ ಪರೀಕ್ಷೆಗೆ ಹೋಗಿದ್ದೇನೆ— ಥರ್ಡ್ ಫಾರ್ಮ್; ಮಿಡ್ಲ್‌ಸ್ಕೂಲ್ ಈ ವರ್ಷಕ್ಕೆ ಮುಗಿಯುತ್ತದೆ. ಮುಂದೆ ಹೈಸ್ಕೂಲಿಗೂ ಹೋಗಬೇಕೆಂಬ ಆಶೆ."

ಅವಳಿಗೂ ಪುಸ್ತಕಗಳೆಂದರೆ ಪ್ರಾಣ. ಅವಳೂ ಅನೇಕ ಕಥೆ ಕಾದಂಬರಿಗಳನ್ನು ಓದಿ ಮುಗಿಸಿದ್ದಳು. ಮಾಧವನೂ ತನ್ನ ಪುಸ್ತಕಗಳ ಜ್ಞಾನವನ್ನು ತೋರಿದ. ತಾನು ಓದಿದ ಉತ್ತಮ ಪುಸ್ತಕಗಳನ್ನು ಹೊಗಳಿದ. "ಅದನ್ನು ನೀವೂ ಓದಬೇಕು. ಆ ಪುಸ್ತಕ ಓದದೆ ಜೀವನವೇ ಸಾರ್ಥಕವಲ್ಲ" ಎಂದ. ಎಂದೂ ಯಾರಿಗೂ ತಾನಾಗಿ ತೋರಿಸದೆ ಇದ್ದ ತನ್ನ ಕಥೆ ಕವಿತೆಗಳನ್ನು ಅವಳಿಗೆ ಓದಿ ತೋರಿಸಬೇಕೆಂಬ ಆಶೆ ಮಾಧವನಿಗೆ ತಡೆಯಲಾಗಲಿಲ್ಲ. ಮಂಗಳೂರಿನ ಒಂದೆರಡು ಪತ್ರಿಕೆಗಳಲ್ಲಿ ಆಗಾಗ ಪ್ರಕಟವಾಗಿದ್ದ ತನ್ನ ಹತ್ತಾರು ಕವನಗಳನ್ನೂ ಮೂರು ನಾಲ್ಕು ಕಥೆಗಳನ್ನೂ ಅವಳಿಗೆ ಓದಿ ತೋರಿಸಿದ.

ತಾನು ಬರೆದಿದ್ದನ್ನು ಓದಬೇಕು, ಓದಿ ಚೆನ್ನಾಗಿದೆ ಎನ್ನಬೇಕು. ಅಷ್ಟು

ಸಾಕು, ತನಗೆ ಇನ್ನಾವ ಪ್ರಶಸ್ತಿಯೂ ಬೇಡ, ಇನ್ನಾರ ಗೌರವವೂ ಬೇಡ ಎನ್ನಿಸಿತು. ನೀಲಾ ಅವನ ಬರೆಹಗಳನ್ನೆಲ್ಲ ಓದಿ,

" ನೀವು ಎಷ್ಟು ಚೆನ್ನಾಗಿ ಬರೆಯುತ್ತೀರಿ ! ನೀವು ದೊಡ್ಡ ಸಾಹಿತಿಗಳೇ ಆಗುತ್ತೀರಿ, ಖಂಡಿತ. ಆಗ ಮಾತ್ರ ನಮ್ಮಂಥವರನ್ನು ಮರೆಯ ಬೇಡಿ " ಎಂದಳು.

" ಅಯ್ಯೋ, ಮರೆಯುವುದುಂಟೆ ? ಹತ್ತು ಜನ್ಮ ಕಳೆದರೂ ನೀಲಾ ನಿನ್ನನ್ನು ಮರೆಯುವುದುಂಟೆ ? ನಿನ್ನನ್ನು ಮರೆತೂ ಬಾಳುವುದೇ ? ಇದೇಕೆ ಇಂಥ ಮಾತುಕೇಳುವೆ ?" ಎಂದು ಮಾಧವನು ಮನಸ್ಸಿನಲ್ಲೇ ಅಂದುಕೊಂಡ. ಅವಳು ಹಾಗೆ ಅಂದಾಗ ತಾನು ದೊಡ್ಡ ಸಾಹಿತಿಯಾದಷ್ಟೇ ಸಂತೋಷ-ವಾಯಿತು ಅವನಿಗೆ. , ಆ ಸಂತೋಷ ಕಣ್ಣಲ್ಲಿ ಸೂಸಿತು ಅಷ್ಟೆ. ಬಾಯಿಯಲ್ಲಿ ಮಾತಾಗಿ ಹೊರಡಲಿಲ್ಲ.

ನೀಲಾ ಸಂಗೀತವನ್ನು ಅಭ್ಯಾಸಮಾಡುತ್ತಿದ್ದಳು. ಆ ದಿನ ರಾತ್ರಿ ಮಾಧವನ ತಾಯಿ ಬಲವಂತ ಮಾಡಿದರು : " ಒಂದು ಪದ ಹೇಳು ಮಗೂ " ಎಂದರು. ನೀಲಾ ಇನ್ನೂ ಹೆಚ್ಚು ಬಲವಂತಕ್ಕೆ ಒಳಗಾಗದೆ " ಆಗಲಿ, ಹೇಳುತ್ತೇನೆ. ಇನ್ನೂ ಅಭ್ಯಾಸ ಸಾಲದು; ಕೇಳಿ ನಗಬೇಡಿ " ಎಂದಳು.

ಅಯ್ಯೋ ನಿನ್ನ ಹಾಡು ಕೇಳಿ ನಗುವುದುಂಟೇ ಎಂದು ಮಾಧವ ತನ್ನಷ್ಟಕ್ಕೆ ಹೇಳಿಕೊಂಡ. ಸುತ್ತಲೂ ಕತ್ತಲು ಹಬ್ಬಿತ್ತು. ಊಟವೆಲ್ಲ ಮುಗಿದು ಮಾಧವನ ತಾಯಿ ಪಾರ್ವತಮ್ಮನವರಿಗೆ ಪುರಸೊತ್ತಾದಾಗ ಹತ್ತು ಗಂಟೆಯೇ ಆಯಿತು. ಮನೆಜಾವಡಿಯಲ್ಲಿ ಲಾಟೀನಿನ ಮಿಣುಕುದೀಪ ಉರಿಯುತ್ತಿತ್ತು. ಆ ದೀಪದ ಹತ್ತಿರವೇ ನೀಲಾ ಕುಳಿತಿದ್ದಳು. ದೀಪದ ಬೆಳಕು ಅವಳ ಮುಖದ ಮೇಲೆ ಬಿದ್ದು ಬೆಳಗುತ್ತಿತ್ತು. ಅವಳ ಪಕ್ಕದಲ್ಲೇ ಅವರ ತಾಯಿ ಕುಳಿತಿದ್ದರು. ವಾಸುದೇವಯ್ಯನವರು ಮಂಚದ ಮೇಲೆ ಕುಳಿತು ಎಲೆಅಡಿಕೆ ಸಂಚಿ ಬಿಚ್ಚಿ ಹಸಿ ಅಡಿಕೆಯನ್ನು ಕತ್ತರಿಸುತ್ತಿದ್ದರು. ಸುತ್ತಲೂ ನಿಶ್ಶಬ್ದ ನೆಲಸಿತ್ತು. ಮಾಧವನ ತಮ್ಮ ಶಿವ ಆಗಲೇ ಹಾಸಿಗೆಯನ್ನು ಬಿಚ್ಚಿ ಮಲಗಿಬಿಟ್ಟಿದ್ದ. ಮಾಧವ ಕೊಂಚ ದೂರವಾಗಿ ಗೋಡೆಗೆ ಒರಗಿ ಕುಳಿತುಕೊಂಡಿದ್ದ. ಅವನು ಕುಳಿತಿದ್ದ ಕಡೆ ಕತ್ತಲು ಕವಿದಿತ್ತು. ಆ ಕತ್ತಲ ಹೊಟ್ಟೆಯಲ್ಲಿ ಕುಳಿತು ಅವನು ನೀಲಾಳ ಮುಖದ ಮೇಲೆ ಬೆಳಕು ಲಾಸ್ಯ-

ಹಾಡುತ್ತಿದ್ದುದನ್ನು ನೋಡುತ್ತಿದ್ದ. ಆ ಮುಖ. ಎಂಥ ಬಣ್ಣ ಅದು. ಜೇನಿನ ಬಣ್ಣ: ರೇಸಿಮೆಯ ನಯ; ಬೆಳುದಿಂಗಳ ಕಾಂತಿ. ದೀರ್ಘ ವರ್ತುಲಾಕಾರದ ಮಾಟವಾದ ಮುಖದಲ್ಲಿ ಆ ಮೂಗು ಸಂಪಗೆಯ ಎಸಳು; ತೀಡಿ ತಿದ್ದಿ ಒಂದಿಷ್ಟೂ ಊನವಿಲ್ಲದಂತೆ ರಚಿಸಿದ್ದು ಅದು. ಆ ಹುಬ್ಬು. ಎಷ್ಟು ಕಪ್ಪು! ಕೈವಾರವಿಟ್ಟೇ ಚಿತ್ರಿಸಿದಷ್ಟು ಅಚ್ಚುಕಟ್ಟು. ಆ ಮುಖದಿಂದ ಎದೆಯನ್ನು ಬೆಚ್ಚಗಾಗಿಸುವ ಒಂದು ತೇಜಸ್ಸು ಹೊರಚಿಮ್ಮುತ್ತಿರುವಂತೆ ಮಾಧವನಿಗೆ ತೋರಿತು. ಅಷ್ಟು ದೂರ ಕುಳಿತಿದ್ದರೂ ಕ್ಷಣಕ್ಷಣಕ್ಕೂ ಅವನ ದೇಹ ಕಾವು ಗೊಳ್ಳುತ್ತಿತ್ತು: ಮನಸ್ಸು ಬಿಸಿಯೇರುತ್ತಿತ್ತು. ಆ ತುಟಿಗಳು ಅದೆಷ್ಟು ಕೆಂಪು, ರಕ್ತವುಕ್ಕುತ್ತಿರುವ ಹಾಗೆ. ತುಟಿದಳ ಕೊಂಚ ತೆರೆದರೆ ಆ ಹಲ್ಲು ಎಂಥ ಮಲ್ಲಿಗೆ ಮೊಗ್ಗುಗಳು — ಎಷ್ಟು ಚಿಕ್ಕಚಿಕ್ಕ, ಸಮಾನಾಕೃತಿಯ ಹಲ್ಲುಸಾಲು; ಬೆಳಕಿಗೆ ಅಕ್ಕಿಯ ಕಾಳುಗಳನ್ನು ಸಾಲಾಗಿ ಜೋಡಿಸಿಟ್ಟಿದ್ದಾರೋ ಹೇಗೆ?

ಅವಳು ಕೊರಳೆತ್ತಿ ಹಾಡಿದಳು: ಮೌನದ ಚಿಪ್ಪನ್ನೊಡೆದು ಮುತ್ತು ಸುರಿಯಿತು. ಮುಂಜಾವಿನಲ್ಲಿ ಎಲೆ ಎಲೆಗಳ ಮೇಲೆ ಇಬ್ಬನಿ ತಣ್ಣನೆ ಬಂದು ಇಳಿಯಿತು. ಸಂಜೆಯ ತಂಗಾಳಿ ಕೊಂಚವೇ ಆಡಿ ಮಲ್ಲಿಗೆಯ ಬಳ್ಳಿಯಿಂದ ಹೂವುಗಳು ನುಣ್ಣನೆ ಜಾರಿದುವು. ಬತ್ತಿಸಿದ ಬಾವಿಯಲ್ಲಿ ಸುತ್ತಲೂ ಚಿಲುಮೆ ಗಳಿಂದ ಚುಳ್ಳೆಂದು ನೀರು ನುಗ್ಗಿತು. ಸಂಪಗೆ ಅರಳಿ, ಮಲ್ಲಿಗೆ ಅರಳಿ, ತಾವರೆ ದಳ ತೆರೆದು, ಸುರಗಿ ಸುಯ್ದು ಕಂಪಿನ ಅಲೆ ಅಲೆ ಹರಿಯಿತು.

ಅವಳ ಧ್ವನಿ ಏರಿ ಇಳಿದು ಉಯ್ಯಾಲೆಯಂತೆ ಜೀಕಿ, ಪಾತಾಳ ಗರುಡಿ ಯಂತೆ ಕೇಳುವವರ ಮನಸ್ಸಿನ ತಳವನ್ನೇ ಮುಟ್ಟಿ ಪುಷ್ಪಕದಂತೆ ಮುಗಿಲಲ್ಲಿ ತೇಲಿ ನಕ್ಷತ್ರಗಳನ್ನು ಸೋಂಕಿತು: ಬಣ್ಣಬಣ್ಣದ ಕಾಮನಬಿಲ್ಲು ಮೂಡಿ ಆಡಿತು. ದುಂಬಿಗಳು ಝೇಂಕರಿಸಿದುವು. ದೂರದ ಕೊಳಲ ದನಿ ಬಂದು ಹಾಯಿತು. ಕೊಟ್ಟಿಗೆಯ ಪುಟ್ಟ ಕರುವಿನ ಕೊರಳಗಂಟೆ ಗಣಗಣ ಎಂದಿತು.

ಅವಳ ಧ್ವನಿ ಗಂಭೀರವಾಗಿ ಮೊಳಗಿತು.

ಮುಂಗಾರಿನ ಬೆಂಗಾವಲ ಕಾರ್ಮೋಡದ ಆನೆ ಹಿಂಡು ನುಗ್ಗಿ ಘೀಳಿ-ಟ್ಟಿತು. ಬಾನೆಲ್ಲ ಬಿರಿಯುವಂತೆ ಗುಡುಗು ಗುಡುಗುಟ್ಟಿತು. ಮಿಂಚು ಮಿಂಚಿತು. ಸಿಡಿಲು ಛಟಾರನೆ ಸಿಡಿಯಿತು. ತಂಗಾಳಿ ಬಂದು ಬೀಸಿತು. ಮೋಡ ಹನಿ ಯೊಡೆಯಿತು. ಮಳೆ ಧಾರೆಧಾರೆಯಾಗಿ ಸುರಿಯಿತು. ಜಲಪ್ರಳಯದಂತೆ

ಸುತ್ತಮುತ್ತಲೂ ನೀರು ನುಗ್ಗಿತು. ಹೊಳೆ ತುಂಬಿ ದಡವನ್ನು ದುಡುಕಿತು. ಸಮುದ್ರ ಭೋ-ಭೋ-ಭೋ ಎಂದು ಮೊರೆದು ಹೂಂಕರಿಸಿತು. ತರಂಗಗಳು ಬಂದು ದಡವನ್ನು ಬಡಿದುವು. ತೆಂಗಿನಮರ ಬುಗುರಿಯಂತೆ ಆಡಿತು. ಬಾಳೆ ತಲೆಬಾಗಿತು.

ಅವಳ ಧ್ವನಿ ಅವರೋಹಣದಲ್ಲಿ ಸೊಗಸಿತು.

ಸುಯ್ಯೆಂದು ಗಾಳಿಯನ್ನು ಬಗೆಯುತ್ತ ಗಿಡುಗ ನಿಧಾನವಾಗಿ ಕೆಳಗಿಳಿಯಿತು. ದಾರತಪ್ಪಿ ಆಕಾಶದಲ್ಲಿ ತುಯ್ಯುತ್ತಿದ್ದ ಗಾಳಿಪಟ ಮೆಟ್ಟಿಲು ಮೆಟ್ಟಿಲಾಗಿ ಕೆಳಮೊಗ ಹಾಕುತ್ತ ಬಂತು. ರಪರಪನೆ ಬಡಿಯುತ್ತಿದ್ದ ಮಳೆ ನಿಧಾನವಾಗಿ ಕುಗ್ಗುತ್ತ ಬಂದು ಸೂರಿನ ಅಂಚಿನಲ್ಲಿ ನೀರು ತೊಟ್ಟಿಕ್ಕತೊಡಗಿತು. ಘಂಟಾನಾದ ನಿಂತು ಅದರ ಪಡಿದನಿ ಝುಂಯ್ಯೆಂದಿತು. ಅರುಣೋದಯದ ರಕ್ತರಾಗ ಹಗಲಿನ ಬಿಳಿ ಬೆಳಕಿನ ತೊರೆಯಲ್ಲಿ ಕರಗುತ್ತ ಬಂತು. ಬೀಸಿದ ಗಾಳಿಯೊಡನೆ ಬಂದ ಮಾವಿನ ಹೂವಿನ ಗಂಧ ದಟ್ಟಯಿಸಿದ್ದು ದಿಕ್ಕು ದಿಕ್ಕಿಗೂ ಹಬ್ಬಿ ತೆಳ್ಳಗಾಯಿತು.

ಅವಳ ಹಾಡು ನಿಂತಿತು.

ಆ ಹಾಡು ನಿಂತಿತು. ಅದು ಯಾವುದೋ ದಾಸರ ಪದ: 'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ' ಅವಳ ಕಂಠದಲ್ಲಿ ಬಂದ ಆ ಹಾಡು ಅನಂತ ಅರ್ಥವನ್ನು ಸೂಚಿಸಿತು. ಪ್ರತಿಯೊಂದು ಶಬ್ದವೂ ಒಂದೊಂದು ಅಲೆಯಾಗಿ ಬಂದು ಮನಸ್ಸನ್ನೆಲ್ಲ ತುಂಬಿತು. ಅಂಥ ಅಪೂರ್ವಗಾನ ಹಿಂದೆ ಎಲ್ಲೂ ತಾನು ಕೇಳಿಲ್ಲ ಎಂದು ಮಾಧವನಿಗೆ ಅನಿಸಿತು. ಬಹುಶಃ ಮುಂದೆಯೂ ಕೂಡಾ ಅಂಥದನ್ನು ಮತ್ತೆ ತಾನು ಕೇಳಲಾರೆ ಎಂದುಕೊಂಡ. ಅದರ ಪ್ರತಿಯೊಂದು ನುಡಿಯೂ ಅವನ ಮನಸ್ಸಿನಲ್ಲಿ ಕೆತ್ತಿ ನಿಂತಿತು. ಹಾಡು ನಿಂತ ಮೇಲೂ ಕೂಡಾ ಅದರ ನಾದ ಸುತ್ತಮುತ್ತಲೂ ಬಂದು ಬಡಿಯುತ್ತಿತ್ತು.

ಬೆಳಗಾಯಿತು. ಮಾಧವನ ಮನಸ್ಸು ಅಪೂರ್ವ ಉತ್ಸಾಹದಿಂದ ತುಂಬಿತು. ತಾನು ಏಕಾಂಗಿ ಎಂಬ ಆ ಭಾವನೆಯ ಹೇಳ ಹೆಸರಿಲ್ಲ ಈಗ. ತಾಯಿಯೊಡನೆ, ತಮ್ಮನೊಡನೆ ಮನ ಬಿಚ್ಚಿ ಮತ್ತೆ ಬಾಲ್ಯದಲ್ಲಿ ಹೇಗೋ ಹಾಗೆ ಮಾತಾಡಿದ. ಅಡಿಗೆ ಮನೆಯೊಳಕ್ಕೆ ನುಗ್ಗಿ ಊರ ಸುದ್ದಿಯನ್ನು

ತಾಯಿಯಿಂದ ತಿಳಿದುಕೊಂಡ. ತಮ್ಮನ ಸಂಗಡ ಹಿತ್ತಿಲ ಮಾವಿನಮರ, ಗೋವೇಮರಗಳ ಪರಿಶೋಧನೆ ನಡಸಿದ. ತಂದೆಯವರ ಬಳಿ ಕುಳಿತು ಅವರ ಕೆಲಸದಲ್ಲೂ ಮನಸ್ಸು ಹಾಕಿದ. ಜಗತ್ತೆಲ್ಲವೂ ಈಗ ತನ್ನದಾಗಿರುವ ಹಾಗೆ ಕಂಡಿತು. ಎಲ್ಲರೂ ತನ್ನವರು, ಎಲ್ಲವೂ ತನ್ನದೇ. ಜಗತ್ತಿಗೇ ಒಂದು ಹೊಸ ಕಳೆ ಬಂತು. ನೀಲಾ ಬಂದು ನಿಂತ ಆ ಪ್ರಪಂಚ ಬಾಲ್ಯದ ಆ ಕನಸಿನ ಪ್ರಪಂಚದಂತೆ, ಮನಸ್ಸಿನ ಇಚ್ಛೆಗಳನ್ನೆಲ್ಲ ಪೂರಯಿಸಿ ಕೊಡುವ ಕಲ್ಪತರುವಿನಂತೆ ಕಂಡಿತು.

ಆ ದಿನವೆಲ್ಲ ಮಾಧವ ಗಾಳಿಯ ಹಾಗೆ ಹಗುರವಾಗಿ ಸಂಚರಿಸಿದ. ನಡೆದರೆ ಕಾಲು ನೆಲವನ್ನೇ ಸೋಂಕದು. ಮನೆಯ ಪ್ರತಿಯೊಂದು ಮೂಲೆಯೂ ಈಗ ಒಂದೊಂದು ಹೊಸಲೋಕದಂತಾಯಿತು. ಹಳ್ಳಿಯ ದಿಣ್ಣೆ, ಓಣಿ, ಹಾಡಿ, ಹಿತ್ತಲು, ಗದ್ದೆ, ಮರ, ಗಿಡವೆಲ್ಲ ಅದ್ಭುತದ ಆಗರ ಗಳಾದುವು. ನೀಲಾನನ್ನು ಜೊತೆಗೆ ಸೇರಿಸಿಕೊಂಡು ಹಳ್ಳಿಯನ್ನೆಲ್ಲ ಸುತ್ತಿದ. ಗೋವೆಮರಗಳನ್ನೇರಿ ಹಣ್ಣುಗಳನ್ನು ಕಿತ್ತ ಸಂಪಗೆಯ ಮರದಿಂದ ಸಂಪಗೆ ಹೂವುಗಳನ್ನು ಕೊಯ್ದ. ತನ್ನ ಅಚ್ಚುಮೆಚ್ಚಿನ ಕೆರೆಯ ದಂಡೆಯ ಮೇಲೆ ನಿಂತು ಕೆರೆಯ ನೀರಲ್ಲಿ ಅರಳುತ್ತಿದ್ದ ತಾವರೆಗಳನ್ನು ಅವಳಿಗೆ ತೋರಿಸಿದ. ಅಲ್ಲಿನ ಬಾಗಾಳ ಮರದ ಹೂವುಗಳನ್ನು ಇಬ್ಬರೂ ಕೂಡಿ ಆರಿಸಿದರು. ದಿಣ್ಣೆಯ ಮೇಲೆ ಬೆಳೆದಿದ್ದ ಚೂಪುಕಾರೆ ಹಣ್ಣನ್ನು ಕಿತ್ತು ಇಬ್ಬರೂ ತಿಂದರು. ಇಬ್ಬರೂ ಕೂಡಿಯೇ ದೇವಾಲಯಕ್ಕೆ ಹೋದರು. ಅಲ್ಲಿನ ಜಂತಿಗೆ ಕಟ್ಟಿದ್ದ ಭಾರಿ ಜೇನುಗೂಡನ್ನು ಕಂಡು ನೀಲಾ ತಬ್ಬಿಬ್ಬಾಗಿ ನಿಂತಳು. ಗೂಡಿನ ಸುತ್ತಲೂ ಜೇನುನೊಣಗಳು ಝೇಂಕರಿಸಿದವು. ದೇವರ ವಿಗ್ರಹವನ್ನು ಕಂಡು ಇಬ್ಬರೂ ಕೈ ಮುಗಿದರು. ದೇವಸ್ಥಾನದ ಪೌಳಿಯಲ್ಲಿದ್ದ ದೈವದ ಮನೆಗೆ ಹೋದರು. ಅಲ್ಲಿ ನಿಂತಿದ್ದ ನಾನಾ ರೂಪದ ದೆವ್ವಗಳನ್ನು ಕಂಡು ಬೆರಗಾದರು: ಜಟ್ಟಿಗ, ಬೊಬ್ಬರ್ಯ, ಹಾಯಿಗೂಳಿ, ಮರುಳಚಿಕ್ಕು........ "ಅಬ್ಬಾ ಎಂಥ ದೈವಗಳಿವು" ಎಂದಳು ನೀಲಾ.

ಆ ದಿನ ಹೇಗೆ ಕಳೆಯಿತೋ ಮಾಧವನಿಗೆ ತಿಳಿಯದು. ಅದು ಒಂದು ನಿಮಿಷದಂತೆ ಜಾರಿ ಹೋಯಿತು. ಸಂಜೆಯಾಯಿತು. ಆಕಾಶದಲ್ಲಿ ಮೋಡ ತುಂಬಿತು. ಗಾಳಿ ತಣ್ಣಗೆ ಬೀಸಿತು. ಹೊತ್ತು ಮುಳುಗಿತು, ಮಬ್ಬು

ಮಬ್ಬಾಯಿತು. ಆಗ ಇದ್ದಕ್ಕಿದ್ದಂತೆ ಮಾಧವನಿಗೆ ನೆನಪು ಬಂತು: ನಾಳೆ ಬೆಳಗ್ಗೆ ನೀಲಾ ಹೊರಟು ಹೋಗುವಳು. ಹೊರಟೇ ಹೋಗುವಳು. ಆ ಯೋಚನೆಯಿಂದ ಕರುಳು ಕಿವುಚಿದಂತಾಯಿತು. ನೀಲಾ ಹೊರಟು ಹೋದ ಮೇಲೆ ಬದುಕುವುದು ಹೇಗೆ? ಆ ಮೇಲೆ ತನ್ನ ಈ ಜೀವನಕ್ಕೆ ಏನು ಬೆಲೆ? ಅಷ್ಟು ಹೊತ್ತಿಗೆ ಇಬ್ಬರೂ ದೇವಾಲಯದಿಂದ ಮನೆಯ ಕಡೆ ಬರುತ್ತಿದ್ದರು.

"ನೀಲಾ" ಎಂದ ಮಾಧವ. ಅವನ ಮನಸ್ಸು ತುಂಬಿತ್ತು. ಕಂಠದಲ್ಲಿ ಮಾತು ಸಿಕ್ಕಿಕೊಂಡಿತು. ಮುಂದೆ ಮಾತು ಹೊರಡಲಿಲ್ಲ.

"ಏನು?" ಎಂದಳು ನೀಲಾ. ಅವನ ಮನಸ್ಸಿನ ಶೋಕವನ್ನು ಅವಳು ಅರಿತಳೋ ಎನ್ನುವ ಹಾಗೆ ಅವಳ ಕಣ್ಣು ಚಂಚಲವಾಯಿತು.

"ನೀನು ನಾಳೆ ಹೋಗುತ್ತಿ— ಅಲ್ಲವೇ?"

"ಹೌದು, ಹೋಗಲೇಬೇಕಲ್ಲ."

"ನನಗೆ ಅದರಿಂದ ಎಷ್ಟು ದುಃಖವಾಗುತ್ತದೆ, ಬಲ್ಲೆಯಾ?"

"ನನಗೂ ದುಃಖವಾಗುತ್ತಿಲ್ಲ ಎಂತ ತಿಳಿದಿರಾ?"

ಅವಳಿಗೂ ದುಃಖವಾಗುತ್ತದೆ: ಮಾಧವನ ಮನಸ್ಸು ಕೊಂಚ ತೃಪ್ತವಾಯಿತು.

"ಮತ್ತೆ ಭೇಟಿ ಯಾವಾಗಲೋ?" ಎಂದು ಮಾಧವ ನಿಟ್ಟುಸಿರು ಬಿಟ್ಟ. ನೀಲಾ ಮಾತಾಡಲಿಲ್ಲ. ಅವಳ ಆ ವಿಶಾಲವಾದ ಕಣ್ಣುಗಳ ಕೊನೆಯಲ್ಲಿ ಒಂದು ಹನಿ ಸಾಂದ್ರವಾಯಿತು. ಒಂದು ಕ್ಷಣ ಇಬ್ಬರೂ ಮೌನವಾಗಿದ್ದರು. ಇಷ್ಟು ಹೊತ್ತಿಗೆ ಮನೆ ಹತ್ತಿರವಾಗಿತ್ತು.

‘, ನೀಲಾ, ಕಾಗದ ಬರೆದರೆ ಉತ್ತರ ಬರೆಯುತ್ತೀಯಾ?"

"ಖಂಡಿತ ಬರೆಯುತ್ತೇನೆ. ನೀವೇ ಮೊದಲು ಬರೆಯಬೇಕು— ಹಾ"

"ಬರೆಯದೇ ಇರಲು ಹೇಗೆ ಸಾಧ್ಯ ನೀಲಾ, ನೀಲಾ"

ಅಲ್ಲಿಗೆ ಅವರ ಮಾತು ನಿಂತಿತು. ಹೇಳಬೇಕಾದ್ದು ರಾಮಾಯಣದಷ್ಟಿತ್ತು. ಆದರೆ ಮಾಧವನ ಬಾಯಿಯಿಂದ ಮಾತು ಹೊರಡಲಿಲ್ಲ. ಹೃದಯ ಮಾತ್ರ ತುಂಬಿ ಹೋಗಿತ್ತು. ಎಷ್ಟು ವಿಚಾರಗಳನ್ನು ಅವಳಿಗೆ ಅವನು ಹೇಳಬೇಕಾಗಿತ್ತು! ಅವಳು ಅವನ ಹೃದಯದ ದೇವತೆ. ಅವಳ ಪದತಳದಲ್ಲಿ ಅವನ ಜೀವನವೇ ಸಮರ್ಪಣಗೊಂಡಿದೆ. ಅವಳ ನೆನಪೊಂದಲ್ಲದೇ ಇನ್ನಾವ

ನೆನಪೂ ಅವನ ಮನಸ್ಸನ್ನು ಆಳದು. ಅಲ್ಲಿ ಅವಳದೇ ರಾಜ್ಯಭಾರ. ಅವಳು ಹೇಗೆ ಹೇಳಿದರೆ ಹಾಗೆ ಮಾಡಲು ಮಾಧವ ಸದಾ ಸಿದ್ಧ. ಅವಳ ಪ್ರತಿಯೊಂದು ಇಚ್ಛೆಯೂ ಅವನ ಜೀವನದ ಉಚ್ಚ ಧ್ಯೇಯ. ಅವಳು ಬಾ ಎಂದರೆ ಅವನು ಅವಳಕೂಡ ಎಲ್ಲಿಗೆ ಬೇಕಾದರೆ ಅಲ್ಲಿಗೆ ಹೋಗಬಲ್ಲ. ಗೌರೀಶಂಕರದ ತುದಿಗೆ? ಸಮುದ್ರತಳದ ವರುಣಲೋಕಕ್ಕೆ? ರೋಹಿಣಿ ನಕ್ಷತ್ರದ ಪರಿಧಿಯೊಳಗೆ? ಗಹನವಾದ ಅರಣ್ಯಕ್ಕೆ? ಕಾಳ್ಕಿಚ್ಚಿನ ಮಧ್ಯಕ್ಕೆ? ಎಲ್ಲಿಗೆ ಬೇಕಾದರೆ ಅಲ್ಲಿಗೆ. ಅವಳು ಅವನಿಗೆ ಯಾವ ಕೆಲಸ ಬೇಕಾದರೆ ಹೇಳಬಹುದು. ಅದನ್ನು ಅವನು ಚಾಚೂ ತಪ್ಪದೆ ಮಾಡಿಯೇ ತೀರುತ್ತಾನೆ. ಹುಲಿಯ ಹಾಲು ತರಬೇಕೆ? ಮೊಲದ ಕೊಂಬು ಬೇಕೆ? “ನೀಲಾ, ನೀಲಾ, ಓ ನನ್ನ ನೀಲಾ, ನನ್ನನ್ನು ಬಿಟ್ಟು ಹೋಗಬೇಡವೆ; ನೀನು ಎಲ್ಲಿಗೆ ಬಾ ಎಂದರೆ ನಾನು ಬರುತ್ತೇನೆ. ದೂರ ದೂರ ದೂರ ಹೋಗೋಣ. ಇಬ್ಬರೂ ಸದಾ ಹೀಗೇ ಜೊತೆ ಜೊತೆಯಾಗಿ ಆಡೋಣ, ಓಡಾಡೋಣ — ಹೇಳು, ಹೇಳು, ಹೇಳು ಒಂದೇ ಒಂದು ಸಲ ಹೂ ಅನ್ನು.” ಆದರೆ ಈ ಎಲ್ಲ ಮಾತೂ ಮಾಧವನ ಮನಸ್ಸಿನಲ್ಲಿಯೇ ಉಳಿಯಿತು.

ಕತ್ತಲಾಯಿತು. ನಕ್ಷತ್ರಗಳು ಮೂಡಿದುವು. ಮಾಧವನ ಮನಸ್ಸಿನ ಕತ್ತಲು ಮಾತ್ರ ಹೆಚ್ಚುತ್ತ ಬಂದಿತು. ಚಂದ್ರೋದಯವಾಯಿತು. ಈ ಲೋಕಕ್ಕೆ ಸ್ವಪ್ನಲೋಕದ ಮೆರುಗು ಬಂತು. ಆದರೆ ಮಾಧವನ ಲೋಕ ಮಾತ್ರ ಶೂನ್ಯಜೀವನದ ಮಹಾಕಂದರದ ಅಂಚಿನಲ್ಲಿ ನಿಂತು ಅದುರಿತು.

## ೧೨

ನೀಲಾ ಹೊರಟು ಹೋದಳು. ಅಯ್ಯೋ, ಹೊರಟೇ ಹೋದಳು. ಮಿಂಚಿನಂತೆ ಬಂದು ಕಾರ್ಮೋಡದ ಅಂಚನ್ನು ಬೆಳಗಿ ಹೋದಳು. ಬೇಸಗೆಯ ಉರಿಬಿಸಲಲ್ಲಿ ತಂಗಾಳಿಯ ಸುಳಿಯಂತೆ ತೇಲಿ ಬಂದು, ತೇಲಿ ಹೋದಳು. ಮಾಧವನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ಕೈಗೆ ಸಿಕ್ಕಿದ್ದ ಚಿಂತಾ ರತ್ನ ಪಾತಾಳದೊಳಕ್ಕೆ ಬಿದ್ದು ಹೋಯಿತು.

ಅವಳು ಹೊರಟು ಹೋದಳು. ಜೀವನದ ನದಿಯಿಂದ ನೀರೆಲ್ಲ ಹೊರಟು ಹೋಗಿ ತಳದ ಮಣ್ಣು ಬಿರುಕು ಬಿಟ್ಟಿತು. ಜಗತ್ತನ್ನು ಅಷ್ಟು ಸುಂದರವಾಗಿ ಮಾರ್ಪಡಿಸಿದ್ದ ಆ ಮಂತ್ರದಂಡ ಈಗ ಮರೆಯಾಯಿತು. ದಡ ವನ್ನು ದುಡುಕಿ ಬಂದಿದ್ದ ಕಡಲ ತರಂಗಮಾಲೆ ಹಿಮ್ಮೆಟ್ಟಿ ಉರಿ ಮರಳು ಮಾತ್ರ ಉಳಿಯಿತು.

ಮಾಧವನ ಮುಗ್ಧ ಹೃದಯ ಈಗ ಅವನ ದೇಹದಲ್ಲಿ ಇಲ್ಲ. ಅದು ನೀಲಾನನ್ನು ಬೆಂಬತ್ತಿ ಹೊರಟು ಹೋಯಿತು. ತಾನು ಈಗ ಕೇವಲ ನಡೆದಾಡುವ ಹೆಣ ಎಂದು ಅವನಿಗೆ ತೋರಿತು: ಮನೆ ಮುಂದಿನ ಬೋಳು ಮರ ಮತ್ತೆ ಬೋಳಾಯಿತು. ಆರಿಹೋದ ಕೆರೆ ಮತ್ತೆ ಬರಡಾಯಿತು. ಹೂ ಬಿಟ್ಟ ಬಳ್ಳಿ ಮತ್ತೆ ಬರಿದಾಗಿ ನಿಂತಿತು.

ಹಿಂದೆಂದೂ ಕಾಣದ ನಿರಾಶೆ ಮಾಧವನ ಜೀವನವನ್ನು ಕವಿಯಿತು. ನಡುಬೇಸಗೆಯಲ್ಲೇ ಅವನಿಗೆ ತನ್ನ ಬಾಳ ದುರ್ದಿನ ಬಂತು ಎನಿಸಿತು. ತಲೆಯ ಮೇಲೆ ಒಂದು ದೊಡ್ಡ ಬಡಿಗೆಯಿಂದ ಬಡಿದ ಹಾಗೆ ಆಯಿತು. ಇಂದ್ರಿಯಗಳೆಲ್ಲ ಜಡವಾದುವು, ಮನಸ್ಸು ಜಡವಾಯಿತು; ದೇಹವೂ ಜಡ ವಾಯಿತು. ಈಗ ಯಾವುದೂ ಸೊಗಸದು. ಊಟ ಸೇರದು. ನಿದ್ದೆ ಬಾರದು. " ನೀಲಾ — ನೀಲಾ — ನೀಲಾ — ಹೊರಟೇ ಹೋದೆಯಲ್ಲ — ನನ್ನ ದೇವಿ ! " ತಲೆ ಗಿರಗಿರನೆ ಸುತ್ತಿತು. ಪೂರ್ಣವಾದಂತೆ ಕಂಡಿದ್ದ ಬಾಳು ಮತ್ತೆ ಅರ್ಧವಾಯಿತು. ಅವನನ್ನು ಲೋಕಕ್ಕೆ ಬಂಧಿಸಿದ್ದ ಆ ಕುಸುಮಸೂತ್ರ ಕತ್ತರಿಸಿತು. ಏಕಾಂಗಿ, ಅಯ್ಯೋ, ನಾನು ಏಕಾಂಗಿ ಎಂದು ಅವನ ಮುಗ್ಧ

ಮನಸ್ಸು ಚೀರಿತು. ಕೈಕಾಲು ಬಡಿಯಿತು. ವಿವಶವಾಯಿತು. ಆ ಬೋಳು ಬೆಟ್ಟದ ಮೇಲೆ ನಿಂತಿರುವ ಒಂದೇ ಒಂದಾದ ಆ ಹನೆಮರದಂತೆ ಅವನು ಈಗ ಏಕಾಂಗಿ. ಆಕಾಶದ ಆ ವಾಯುವ್ಯ ಮೂಲೆಯಲ್ಲಿ ನೀಲದ ತೆರೆಗಳ ಮಧ್ಯೆ ನೆಲೆಯಿಲ್ಲದೆ ಅಲೆಯುತ್ತಿದೆಯಲ್ಲ, ಆ ತುಂಡು ಮೋಡ- ಅದರಂತೆ ಈಗ ಅವನು ಏಕಾಂಗಿ. ಸುತ್ತಮುತ್ತಲೂ ಕಾತರವಾಗಿ ಮೈ ಚಾಚಿ, ಕುಡಿ ಚಾಚಿಯೂ ಯಾವ ಆಧಾರವೂ ದೊರೆಯದೆ ಬಳಲುತ್ತಿರುವ ಆ ಬಳ್ಳಿಯಂತೆ ಅವನೀಗ ಹತಾಶ, ಅಸಹಾಯ.

ಮತ್ತೆ ಮನೆಯ ಬಂಧ ಕಡಿಯಿತು. ಆ ತಂದೆ, ತಾಯಿ, ತಮ್ಮ, ಚಾವಡಿ, ಪಡಸಾಲೆ, ಕೊಟ್ಟಿಗೆ, ಬಾವಿ, ಕೆರೆ, ಮರ ಎಲ್ಲವೂ ಮರೆಯಿತು, ದೇವಾಲಯದ ಚಾವಡಿಯಲ್ಲೇ ದಿನವೆಲ್ಲ ಕಳೆಯಿತು. ಅಲ್ಲಿ ಮೊರೆಯುವ ದುಂಬಿಯ ಝೇಂಕಾರದಲ್ಲಿ ಈಗ ಮೊದಲಿನ ಸಮ್ಮೋಹನವಿಲ್ಲ. ತಂಗಾಳಿಗೆ ಮೊದಲ ತಂಪಿಲ್ಲ. ಹೂವಿನಲ್ಲಿ ಮೊದಲಿನ ಪರಿಮಳವಿಲ್ಲ, ಅಂದವಿಲ್ಲ. ಕೆರೆಯ ದಡವೂ ಈಗ ಬೇಸರ. ಆಕಾಶದಲ್ಲಿ ಮೂಡುವ ನಕ್ಷತ್ರಗಳೆಲ್ಲ ಈಗ ಕುರುಡುಗಾಜಿನಂತೆ ಮಾಸಿದುವು. ತೆಂಗಿನ ಮರಗಳು ನಿಸ್ಸಹಾಯವಾಗಿ ಕೈ ಬಡಿದು ಒದ್ದಾಡುವ ಮಲರೋಗಿಗಳಂತೆ ಕಂಡುವು.

ಕಂಬನಿಯ ಕೊಳ್ಳದ ಕಡೆ ಬಾಗಿಲು ಈಗ ವಿಶಾಲವಾಗಿ ತೆರೆಯಿತು. ಅಲ್ಲಿ ಕುಳಿತು ಮಾಧವ ತನ್ನ ಹೃದಯವನ್ನೇ ಕರಗಿಸಿ ಕಂಬನಿಯಾಗಿ ಎರೆಯ ತೊಡಗಿದ. ದುಃಖದ ತೊರೆಯಲ್ಲಿ ಚಿಂತೆಯ ದೋಣಿಯೇರಿ ನೆಲೆಯಿಲ್ಲದೆ ಅಲೆದ. ದಡದ ಹತ್ತಿರ ಬಂದೂ ದೋಣಿ ದಡಕ್ಕೆ ಬಾರದು. ಆ ದಡದಿಂದ ಈ ದಡಕ್ಕೆ, ಈ ದಡದಿಂದ ಆ ದಡಕ್ಕೆ ಎಡತಾಕುವುದೇ ಈಗ ಅವನ ಮನಸ್ಸಿನ ಮುಖ್ಯ ಕೆಲಸವಾಯಿತು.

ಅವಳು ಆಡಿದ ಒಂದೊಂದು ಮಾತೂ ಮತ್ತೆ ಮನಸ್ಸಿನಲ್ಲಿ ಬಂದು ಸದಾ ಕಾಲವೂ ಮೊರೆಯಿತು. ಅವಳ ಪ್ರತಿಯೊಂದು ಅಂಗ ವಿಕ್ಷೇಪವೂ ಕಣ್ಣ ಮುಂದೆ ಮತ್ತೆ ಮತ್ತೆ ಪಡಿಮೂಡಿತು. ಅವಳ ಆ ವಿಶಾಲ ನೀಲ ನೇತ್ರಗಳು ಮತ್ತೆ ಮತ್ತೆ ತಮ್ಮ ಬೆರಗುನೋಟವನ್ನು ಬೀರಿದುವು. ಅವಳು ಹಾಡಿದ ಆ ಗೀತದ ನಾದ ಕಿವಿಯ ಸುತ್ತಲೂ ಬಂದು ಮೊರೆದು ಮಾಧವನಿಗೆ ಹುಚ್ಚೇ ಹಿಡಿದಂತಾಯಿತು.

ನೆಲದಲ್ಲಿ ಬಿದ್ದವನು ಬಿದ್ದೇ ಇರುತ್ತಾನೆ. ತೆರೆದ ಪುಸ್ತಕ ತೆರೆದೇ ಇರುತ್ತದೆ. ಆದರೆ ಕಣ್ಣುಮಾತ್ರ ಎತ್ತಲೋ ಸುತ್ತಿಸುತ್ತಿ ನೀಲಾಳ ಸ್ಪಷ್ಟ ಚಿತ್ರದಸುತ್ತ ಸುಳಿಯುತ್ತದೆ.

ಎರಡನೆಯ ದಿನವೇ ಕುಳಿತು ಒಂದು ಹೃದಯದ್ರಾವಕವಾದ ಕಾಗದ ವನ್ನು ಬರೆದ. ಸಾಧ್ಯವಿದ್ದರೆ ಅದನ್ನು ತನ್ನ ಕಂಬನಿಯಲ್ಲೋ ರಕ್ತದಲ್ಲೋ ಬರೆಯುತ್ತಿದ್ದ. ಹೃದಯದ ನೋವೆಲ್ಲ, ಕಾತುರವೆಲ್ಲ, ಆಶೆಯೆಲ್ಲ, ನಿರಾಶೆಯೆಲ್ಲ, ಅಲ್ಲಿ ಮೂಡಿತು. ನಾಲ್ಕನೆಯ ದಿನವೇ ಅವಳ ಉತ್ತರವೂ ಬಂತು. ಬಹಳ ಸಣ್ಣದಾದ ಕಾಗದ: "ನಿಮ್ಮನ್ನು ಬಿಟ್ಟುಬಂದು ಬಹಳ ದುಃಖವಾಗಿದೆ. ಹೊತ್ತು ಹೋಗುವುದೇ ಕಷ್ಟವಾಗಿದೆ. ಕಾಗದಕ್ಕೆ ಉತ್ತರ ಬರೆಯಿರಿ." — ಅಷ್ಟೆ. ಆದರೆ ಅಷ್ಟೇ ಸಾಕಾಯಿತು. ಜೋಲುತ್ತಿದ್ದ ಮಾಧವನ ಚೇತನ ಮತ್ತೆ ನೆಟ್ಟಗೆ ನಿಂತಿತು. ಕಣ್ಣಿನಲ್ಲಿ ಬೆಳಕು ಆಡಿತು. ಆ ಕಾಗದವನ್ನೇ ಹತ್ತುಸಲ ಓದಿದ. ಓದಿದಷ್ಟೂ ತೃಪ್ತಿಯಿಲ್ಲ. ಮತ್ತೂ ಓದಿದ.

ನೀಲಾನಿಂದ ಎರಡನೆಯ ಕಾಗದವೂ ಬಂತು. ಕೊಂಚ ವಿಸ್ತಾರ ವಾಗಿತ್ತು ಅದು. ತನ್ನ ಬಗ್ಗೆ ಅಷ್ಟು ಯೋಚನೆ ಮಾಡಬಾರದು; ತಾನು ಎಲ್ಲಿದ್ದರೂ ಮಾಧವನ ಗೆಳತಿಯೇ. ಅವನು ಮಾತ್ರ ತನ್ನ ಕೆಲಸವನ್ನು ಮರೆಯಬಾರದು. ವಿದ್ಯೆಯನ್ನು ಪಡೆಯಬೇಕು. ಪ್ರಖ್ಯಾತನಾಗಬೇಕು. ಆ ಕಾಗದ ಓದಿಯಂತೂ ಮಾಧವ ಹಣ್ಣು ಹಣ್ಣಾದ. ಅವಳ ಆ ಹೃದಯದ ಎತ್ತರವನ್ನು ಕಂಡು ಆ ಕಾಗದಕ್ಕೆ ಮಣಿದ. ಅವನಿಗಾಗಿ ಅವಳು ಎಷ್ಟು ಯೋಚಿಸುತ್ತಾಳೆ! ತನ್ನ ದುಃಖವನ್ನು ನುಂಗಿಕೊಂಡು ಅವಳು ಅವನಿಗಾಗಿ ಎಷ್ಟು ಧೈರ್ಯದ ಮಾತು ಬರೆದಿದ್ದಾಳೆ. ಇವಳು ಮನುಷ್ಯಳಲ್ಲ — ದೇವತೆ. ಸಂಶಯವಿಲ್ಲ.

ಆದರೆ ಮಾಧವನ ಮೂರನೆಯ ಕಾಗದಕ್ಕೆ, ಬರೆದು ನಾಲ್ಕು ದಿನ ವಾದರೂ ಉತ್ತರ ಬರಲಿಲ್ಲ. ಕಾದು ಕಾದು ಮಾಧವನಿಗೆ ಸಾಕು ಸಾಕಾಯಿತು. ಪೋಸ್ಟ್‌ಮನ್ನಿಗಾಗಿ ದಿನವೆಲ್ಲ ಕಾದು, ಅವನು ಏನೂ ಇಲ್ಲ ಎಂದಾಗ ರೇಸಿನಲ್ಲಿ, ಇದ್ದ ದುಡ್ಡನ್ನೆಲ್ಲ ಹಾಕಿ ಕಳೆದುಕೊಂಡವನಂತೆ ಮಾಧವ ನೆಲಕ್ಕೆ ಕುಸಿದು ಬೀಳುತ್ತಿದ್ದ. ಆ ಮೇಲೆ ಇನ್ನೊಂದು ಕಾಗದವನ್ನು ರಿಜಿಸ್ಟರ್ ಮಾಡಿ ಕಳುಹಿಸಿದ. ಅದಕ್ಕೂ ಉತ್ತರವಿಲ್ಲ. ಇಲ್ಲವೇ ಇಲ್ಲ. ನೀಲಾನಿಂದ

ಯಾವ ಸಮಾಚಾರವೂ ಇಲ್ಲ.

ಏಕೆ? ಏನಾಗಿರಬಹುದು? ಅಶುಭವನ್ನು ಶಂಕಿಸಿ ಮಾಧವ ವಿಹ್ವಲನಾದ. ಏನು ಮಾಡಬೇಕೆಂಬುದೇ ಅವನಿಗೆ ತೋಚಲಿಲ್ಲ. ನೀಲಾನಿಗೆ ಏನಾದರೂ ವಿಪತ್ತು ಸಂಭವಿಸಿರಬಹುದೆ? ಕಾಗದ ಅವಳ ಮನೆಯವರ ಕೈಗೆ ಸಿಕ್ಕಿ ಅನರ್ಥವಾಗಿರಬಹುದೆ? ಅಥವ ಅವಳು ತನ್ನನ್ನು ಅಷ್ಟರಲ್ಲೇ ಮರೆತು ಬಿಟ್ಟಿರಬಹುದೇ?

ಆದರೆ ಅದು ಹೇಗೆ ತಾನೇ ಸಾಧ್ಯ? ನೀಲಾ ತನ್ನನ್ನು ಮರೆಯುವುದೂ ಉಂಟೆ? ಅವಳೇ ಮರೆತರೆ ಇನ್ನೇನು ಗತಿ ಅವನಿಗೆ? ಇನ್ನಾರ ಆಶ್ರಯ, ಇನ್ನಾವ ಆಧಾರ? ಇಲ್ಲ, ಖಂಡಿತ ಅವಳು ಅವನನ್ನು ಮರೆತಿಲ್ಲ. ಬಂದೀತು, ಇಂದಲ್ಲ ನಾಳೆ ಕಾಗದ ಬಂದೀತು.

ಕಾಗದದ ನಿರೀಕ್ಷಣೆಯಲ್ಲೇ ದಿನ ಕಳೆಯಿತು. ಕಾಗದವಿಲ್ಲ. ದಿನವೆಲ್ಲ ಕಾದರೂ ಕಾಗದವಿಲ್ಲ. ಪೋಸ್ಟ್‌ಮನ್ನನ್ನೇ ಹುಡುಕಿಕೊಂಡು ಹೋದರೂ ಕಾಗದವಿಲ್ಲ. ಎರಡು ಮೈಲಿ ದೂರದ ಪೋಸ್ಟಾಫೀಸಿಗೇ ಹೋಗಿ ಬಂದರೂ ಕಾಗದವಿಲ್ಲ.

ಅಲ್ಲಿಗೆ ಮಾಧವನ ಆಶೆಯ ಕೊಲೆ ಆಯಿತು. ಒಂದೆರಡು ಸಲ ತಾನೇ ನೀಲಾನ ಊರಿಗೆ ಹೋಗಬೇಕೆಂದು ಹೊರಟ. ಹೊರಟು ಬೈಂದೂರಿನ ತನಕ ಹೋದ. ನಡೆದೇ ಹೋಗುವೆನೆಂದು ಒತ್ತಿನ ಅಣೆಯನ್ನು ಏರಿದ. ಆದರೆ ಹೋಗಿ ಏನು ಮಾಡಬೇಕು? ಅವರ ಮನೆಯನ್ನು ಹುಡುಕುವುದು ಹೇಗೆ? ಏನೆಂದು, ಯಾರನ್ನು ವಿಚಾರಿಸಬೇಕು. ಕೇಳಿದ ಜನ ನಕ್ಕಾರೆ? ಅವರ ಮನೆಗೇ ಹೋದರೂ " ಏಕೆ ಬಂದೆ? " ಎಂದು ಕೇಳಿದರೆ ಏನು ಉತ್ತರ ಕೊಡಬೇಕು? " ನೀಲಾನನ್ನು ನೋಡಲು ಬಂದೆ " ಎನ್ನೋಣವೇ? ಆಗ ಎಷ್ಟು ಅವಮಾನ, ಎಷ್ಟು ಮಾನಹಾನಿ! " ಇಲ್ಲ, ಹೋಗಿ ನೋಡಲು ಸಾಧ್ಯ ವಿಲ್ಲ " ಎಂದು ಅಲ್ಲೇ ಅಣೆಯ ಮೇಲಿನ ಬಂಡೆಗಲ್ಲೊಂದರ ಮೇಲೆ ಕುಳಿತ. ಬೈಂದೂರಿನಿಂದ ಶಿರೂರಿಗೆ ಹೋಗುವ ರಸ್ತೆ ಅಲ್ಲಿ ತೀರ ಕಡಿದಾಗಿ ಮೇಲಕ್ಕೇರುತ್ತದೆ. ಆ ರಸ್ತೆಯ ಏರನ್ನು ಹತ್ತಿ ಹೋಗಲು ಗಾಡಿಯೆತ್ತಿನ ಅರ್ಧ ಜೀವವೇ ಹೋಗುತ್ತದೆ. ಮೇಲ್ಗಡೆಯಿಂದ ಇಳಿದಾಗ ಅಲ್ಲಿಂದ ಇಲ್ಲಿವರೆಗೆ ಬಿರಿಕುಂಟೆ ಹುಟ್ಟದೆ ಹೋದರೆ ಗಾಡಿ ತಲೆಕೆಳಗಾಗಿ ಬಿತ್ತೆಂದೇ ಲೆಕ್ಕ. ಅಲ್ಲಿ ಬಂಡೆಯ

ಮೇಲೆ ಕುಳಿತರೆ ಕೆಳಗಡೆ ಗದ್ದೆಗಳು. ಅವುಗಳ ಮಧ್ಯೆ ನುಧ್ಯೆ ದಟ್ಟವಾಗಿ ಬೆಳೆದಿದ್ದ ತೆಂಗಿನ ತೋಟಗಳು. ತೋಟಗಳ ನಡುವೆ ಗುಡಿಸಲುಗಳು. ಅಲ್ಲಿ ನಿಂತರೆ ಪಡುವಲಲ್ಲಿ ಒಂದೆರಡು ಮೈಲಿ ದೂರದಲ್ಲಿದ್ದ ಸಮುದ್ರ ಸ್ಪಷ್ಟವಾಗಿ ಕಾಣುತ್ತದೆ. ಅದರ ನೀಲವಿಸ್ತಾರ ಹಿಗ್ಗಿ ಕುಗ್ಗುವುದೂ ಕಂಡು ಬರುತ್ತದೆ. ದಕ್ಷಿಣಕ್ಕೆ ಕಣ್ಣು ತಿರುಗಿಸಿದರೆ ಬೈಂದೂರಿನ ಹೊಳೆ ಮರಗಳ ಸಂದಿಯಲ್ಲಿ ಹೊಳೆಯುತ್ತದೆ. ಮಾಧವ ಕುಳಿತ ಬಂಡೆಯ ಕೆಳಗೇ ಒಂದು ಧರ್ಮಶಾಲೆ ಇದೆ. ಅಲ್ಲಿ ಹತ್ತಾರು ಬೈರಾಗಿಗಳು ಕುಳಿತು ಏನೇನೋ ಬೇಯಿಸಿಕೊಳ್ಳು ತ್ತಿದ್ದರು. ಒಬ್ಬ ಚಿಲುಮೆಯನ್ನು ಬಾಯಿಗಿಟ್ಟು ಧೂಮಪಾನದಲ್ಲಿ ಮಗ್ನ ನಾಗಿದ್ದ. ಅಲ್ಲೇ ಒಂದು ಗಳಿಗೆ ಕುಳಿತು ಯೋಚನೆ ಮಾಡಿದ. ಭಟಕಳಕ್ಕೆ ಹೋಗಲೋ ಬೇಡವೋ. ಹೋಗಲೇ ಬೇಕೆಂದು ಅವನ ಹೃದಯ ಹೇಳಿತು. ಆದರೆ ಹೃದಯದ ಆ ಕೂಗಿಗಿಂತ ಮನಸ್ಸಿನ ಆ ತೀವ್ರವಾದ ಆಶೆಗಿಂತ ಲೋಕಾಪವಾದ ಭೀತಿಯೇ ಹೆಚ್ಚಾಯಿತು. ಊರಿಗೆ ಹಿಂತಿರುಗಿ ಬಂದ ಇದರಿಂದಂತೂ ಅವನ ಮನಸ್ಸಿನ ಕಾವಳ ಇನ್ನಷ್ಟು ಹೆಚ್ಚಿತು. ತಾನು ಹೇಡಿ, ಹೆಂಬೇಡಿ ಎಂದು ತನ್ನನ್ನು ತಾನೇ ಶಪಿಸಿಕೊಳ್ಳುತ್ತ ಮೈ ಸೊರಗಿ ಮುಖ ಬಾಡಿ ಮನೆಗೆ ಹಿಂತಿರುಗಿದ.

ಹದಿನೈದು ದಿನಗಳಲ್ಲೇ ಮಾಧವ ಸೊರಗಿ ಅರ್ಧವಾದ. ಕೆನ್ನೆಗಳು ಬತ್ತಿ, ಕಣ್ಣು ಆಳಕ್ಕೆ ಇಳಿದು, ಮೈ ಮೂಳೆಗಳೆಲ್ಲ ಎದ್ದು ನಿಂತವು. ಪ್ರಥಮ ವಿರಹದ ಕಿಚ್ಚು ಒಳಗಿನ ಸತ್ವವನ್ನೆಲ್ಲ ನುಂಗಿ ಉರಿಯುತ್ತಿತ್ತು. ಇನ್ನು ಈ ಜೀವನದಿಂದ ಉಪಯೋಗವಿಲ್ಲ, ಇಲ್ಲ ಎಂದು ನೂರು ಸಲ ಹೇಳಿಕೊಳ್ಳತೊಡ ಗಿದ. ಕಣ್ಣಿನಲ್ಲಿ ಪ್ರೇತಕಳೆ ಮೂಡಿತು. ಇದನ್ನು ಕಂಡು ಅವರ ತಾಯಿ ಕೇಳಿದರು:

"ಮಗೂ ಇದೇಕೆ ಹೀಗಾಗಿದ್ದೀ? ಹುಶಾರಿಲ್ಲವೆ?"

"ಇಲ್ಲ ಅಮ್ಮ, ಏನೂ ಆಗಿಲ್ಲ. ಏನಾಗಿದೆ?"

"ಏನಾಗಿದೆ ಅಂತೀಯಲ್ಲ. ಎಷ್ಟು ಸೊರಗಿದ್ದೀಯಪ್ಪಾ. ನಿನಗೆ ಏನೋ ಆಗಿದೆ. ಹೇಳು ಮಗೂ" ಎಂದರು. ತಾಯ ಪ್ರೀತಿಯ ಮಾತು ಕೇಳಿ ಮಾಧವನ ಮನಸ್ಸು ಆರ್ದ್ರವಾಯಿತು. ಅವನ ದುಃಖವನ್ನು ಯಾರೂ ಅರಿಯರು. ಯಾರಿಗಾದರೂ ಹೇಳಿಕೊಂಡಿದ್ದರೆ ಮನಸ್ಸು ಕೊಂಚ ಹಗುರ

ವಾಗುತ್ತಿತ್ತೋ ಏನೋ. ಆದರೆ ಅದನ್ನು ಯಾರಿಗೆ ಹೇಳಿಕೊಳ್ಳಬೇಕು ? ಯಾರಿಗೂ ಹೇಳುವಂತಿಲ್ಲ. ಕೃಷ್ಣನಿದ್ದಿದ್ದರೆ.

ಇಲ್ಲ, ಕೃಷ್ಣನಿಲ್ಲ. ಅವನೂ ಹೊರಟು ಹೋದ. ರಾಮಕೃಷ್ಣರಾಯನಿಗೆ ಹೇಳಬಹುದಿತ್ತು. ಆದರೆ ಅವನು ಎಲ್ಲೋ, ಯಾವ ಜೈಲಿನಲ್ಲೋ. ಈಗ ನೀಲಾ. ಬಂದಳು. ಬಂದು ತನ್ನವಳಾದಳು. ಹೋದಳು. ಹೋಗಿ ಮರೆತೇ ಬಿಟ್ಟಳು. ವಿಧಿ ತನ್ನ ವಿರುದ್ಧ ಗದೆಯೆತ್ತಿ ನಿಂತಿದೆ. ತನ್ನ ಹತ್ತಿರ ಬರುವವರನ್ನೆಲ್ಲ ಕುಟ್ಟಿ ಪುಡಿಮಾಡುತ್ತದೆ. ತನ್ನಂಥ ನಿರ್ಭಾಗ್ಯ ಈ ಜಗತ್ತಿನಲ್ಲಿ ಯಾರೂ ಇಲ್ಲ. ತನಗಿನ್ನು ಮೃತ್ಯುವೊಂದೇ ಆಸರ. ಹೌದು, ಕೃಷ್ಣನನ್ನು ಕೊಂದ ಮೃತ್ಯು ತನಗೂ ಬರಬಾರದೇ ?

ನೇರವಾಗಿ ದೇವಸ್ಥಾನದ ಚಾವಡಿಗೆ ಓಡಿ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತ. ಜಗತ್ತನ್ನೇ ಅಳು ಕವಿಯಿತು. ದೇವಸ್ಥಾನದ ಒಳಗಡೆ ಕೀಚುಗೂಡುತ್ತಿದ್ದ ಬಾವಲಿಗಳೂ ಅಳುವಂತೆ ಕಂಡುವು. ಗೂಡಿನ ಸುತ್ತ ಮುಸುಗುಟ್ಟುತ್ತಿದ್ದ ಜೇನುನೊಣಗಳ ಝೇಂಕಾರವೂ ಒಂದು ಶೋಕಗೀತದಂತೆ ಕಂಡಿತು. ಅದೋ ನೋಡು ಈ ದುಂಬಿ — ಆ ಒಂಟಿ ದುಂಬಿ. ಅದೂ ತನ್ನ ಪ್ರೇಯಸಿಗಾಗಿ ಮರುಗುತ್ತ ತೊಲೆತೊಲೆಯನ್ನೂ ಸುತ್ತುತ್ತಿರುವಂತೆ ಕಂಡಿತು. ಬಳಿಯ ಬಾಗಾಳ ಮರದ ಮೇಲೆ ಕಾಗೆ ಕೂತು ಕಾ ಎಂದಿತು. ಅದರ ಕೂಗಿನಲ್ಲೂ ಆರಲಾರದೊಂದು ದುಃಖ ಕರಗುಟ್ಟಿತು. ದೂರದಲ್ಲಿ ಕರುವೊಂದು ಅಂಬಾ ಎಂದು ಕರುಳು ಕರಗುವಂತೆ ಕೂಗಿತು. ಮಾಧವನೂ ಅತ್ತ. ಅತ್ತು ಅತ್ತು ಕಣ್ಣು ಕೆಂಪಗಾಯಿತು. ಆ ಮೇಲೆ ಮನಸ್ಸು ಕೊಂಚ ಸ್ತಿಮಿತಕ್ಕೆ ಬಂದ ಹಾಗೆ ತೋರಿತು.

ನೇರವಾಗಿ ಮನೆಗೆ ಬಂದು ತಣ್ಣೀರಿನಲ್ಲಿ ಸ್ನಾನ ಮಾಡಿದ. ಬೇಸಗೆಯ ಮಧ್ಯಾಹ್ನದಲ್ಲಿ ಆ ಸ್ನಾನ ಬಹು ಹಿತವಾಗಿ ಕಂಡಿತು. ಅಷ್ಟು ದಿನಗಳ ಹಸಿವೆಯೆಲ್ಲ ಒಂದೇ ಸಲ ಹೊಟ್ಟೆಯಲ್ಲಿ ಧಗಧಗಿಸುತ್ತಿರುವಂತೆ ತೋರಿತು. ಊಟ ಮಾಡಿದ. ಊಟ ಬಹು ಸೊಗಸಾಗಿರುವ ಹಾಗೆ ಕಂಡಿತು. ಅಷ್ಟು ದಿನ ಕಾಣದೆ ಇದ್ದ ರುಚಿಯೊಂದು ಆ ಅನ್ನದಲ್ಲಿ ತೋರಿತು. ಪಟ್ಟಾಗಿ ಪೊಗದಸ್ತಾಗಿ ಅವನು ಊಟಮಾಡುತ್ತಿರುವುದನ್ನು ಕಂಡು ತಾಯಿ ಪಾರ್ವತಮ್ಮನವರಿಗೆ ಬಹಳ ಸಂತೋಷವಾಯಿತು.

" ಅಮ್ಮ, ಇವತ್ತು ಅಡಿಗೆ ಬಹಳ ರುಚಿಯಾಗಿದೆ " ಎಂದ ಮಾಧವ.

" ಬದನೆಕಾಯಿ ನಿನಗೆ ಬಹಳ ಇಷ್ಟವಲ್ಲವೆ? ಅದಕ್ಕೇ ಬಹಳ ರುಚಿಯಾಗಿರಬೇಕು " ಎಂದಳು ತಾಯಿ. ಆದರೆ ಆಕೆಗೆ ಗೊತ್ತು; ಅಡಿಗೆಯಲ್ಲಿ ಏನೂ ಹೆಚ್ಚು ಕಡಿಮೆಯಾಗಿರಲಿಲ್ಲ. ಏನಾದರೂ ಆಗಿದ್ದರೆ ಅದೂ ಮಾಧವನಲ್ಲೇ.

ಊಟವಾಯಿತು. ಬಿಸಿಲಬೇಗೆ ಅಸಾಧ್ಯವಾಗಿತ್ತು. ಹಾಗೇ ಹೋಗಿ ಮನೆಯ ಮುಂದಿನ ಜಗಲಿಯ ಮೇಲೆ ಮಲಗಿಕೊಂಡ. ಗಾಳಿ ಜೋರಾಗಿ ಬೀಸುತ್ತಿತ್ತು. ನೆಲ ತಂಪಾಗಿತ್ತು. ಸುಖವಾಗಿ ನಿದ್ದೆ ಬಂತು. ನಿದ್ದೆ ಬಂದು ಎಚ್ಚರವಾದಾಗ ಮಾಧವನಿಗೆ ಆಶ್ಚರ್ಯವಾಯಿತು. ತನಗೆ ಮತ್ತೆ ನಿದ್ದೆಯಿಲ್ಲ, ವಿರಾಮವಿಲ್ಲ - ಎಂದುಕೊಂಡಿದ್ದ. ಇಷ್ಟು ಸುಖವಾಗಿ ನಿದ್ದೆ ಹೇಗೆ ಬಂತು? ತನ್ನ ಹೃದಯ ಇಷ್ಟು ಅಸ್ಥಿರವೇ? ತನ್ನ ಪ್ರೀತಿ ಇಷ್ಟು ಆಳವಿಲ್ಲದ್ದೇ? ನೀಲಾನನ್ನು ತಾನು ಮರೆಯುತ್ತಿರುವೆನೆ? ಎಂದು ಯೋಚಿಸಿ ನಡುಗಿದ.

ಮನೆಯ ಗಡಿಯಾರದಲ್ಲಿ ನಾಲ್ಕುಗಂಟೆ ಹೊಡೆಯಿತು. ಎದ್ದು ಮುಖ ತೊಳೆದುಕೊಂಡು ದೇವಸ್ಥಾನಕ್ಕೆ ಹೋಗಿ ಕುಳಿತ. ಮನಸ್ಸಿನ ಆಳದಲ್ಲಿ ಕೊಂಚ ನೋವು ಇತ್ತು. ಆದರೆ ಅಳು ಬರಲಿಲ್ಲ. ಸುತ್ತಲ ಧೂಪದ ಮರದ ಎಲೆ ಮೆಲ್ಲನೆ ಅಲುಗುತ್ತಿತ್ತು. ಶಾಂತಿ ಸುತ್ತಲೂ ನೆಲಸಿತ್ತು. ಗುಬ್ಬಚ್ಚಿಯೊಂದು ಮಣ್ಣನ್ನು ಕುಕ್ಕುತ್ತಿತ್ತು.

ಕಾಗದ ಪೆನ್ಸಿಲ್ ತೆಗೆದುಕೊಂಡ. ತನ್ನ ಪ್ರೀತಿಯನ್ನು, ಪ್ರೀತಿಯ ಮೈ ಮರೆವನ್ನು, ವಿರಹವನ್ನು, ವಿರಹಯಾತನೆಯನ್ನು ಶಬ್ದರೂಪದಲ್ಲಿ ಚಿತ್ರಿಸಿದ. ಮಾತು ತಡೆಯಿಲ್ಲದೆ ಹರಿಯಿತು. ಉಪಮೆ ಒಂದಾದಮೇಲೊಂದು ಬಂದು ಕೂಡಿತು. ಸುಂದರವಾದ ಕವನವೊಂದು ರೂಪುಗೊಂಡಿತು : ಒಂಟಿ ಗಂಡು ಹಕ್ಕಿಯ ಬಳಿಗೆ ಹೆಣ್ಣು ಹಕ್ಕಿಯೊಂದು ಎಲ್ಲಿಂದಲೋ ಹಾರಿ ಬರುತ್ತದೆ. ಒಂದು ಗಳಿಗೆ ಎರಡೂ ಕೂಡಿ ಆಡುತ್ತವೆ. ಮರ ಮರಕ್ಕೆ ಹಾರುತ್ತವೆ. ಹೂವು ಹೂವುಗಳನ್ನು ಅರಸುತ್ತವೆ. ಹಣ್ಣು ಹಣ್ಣುಗಳನ್ನು ಕುಕ್ಕುತ್ತವೆ. ಅಲ್ಲಿ ಇಲ್ಲಿ ಕುಪ್ಪಳಿಸುತ್ತವೆ. ಸಂಜೆಯಾಗುತ್ತದೆ. ಒಂದೇ ಮರದ ಕೊಂಬೆಯನ್ನು ಸೇರಿ ನಿದ್ದೆ ಹೋಗುತ್ತವೆ. ಬೆಳಗಾಗುತ್ತದೆ. ಗಂಡು ಹಕ್ಕಿ ಮತ್ತೆ ಏಳುತ್ತದೆ. ಎದ್ದು ನೋಡುತ್ತದೆ, ಬಳಿಯಲ್ಲಿ ಸಖಿಯಿಲ್ಲ. ಅದು ಮತ್ತೆ ಒಂಟಿ. ಗೊತ್ತು

ಗುರಿಯಿಲ್ಲದೆ ಮರದಿಂದ ಮರಕ್ಕೆ ಅಲೆಯುತ್ತದೆ.... ಹೀಗೆ ಕವನ ಸಾಗಿತು ಅಂತರಂಗದ ಅಳಲು ಅಲ್ಲಿ ಮೂಡಿತು. ಕವನವನ್ನು ಮುಗಿಸಿ ಒಂದು ಸಲ ರಾಗವಾಗಿ ಓದಿದ. ಅವನ ಆ ಕವನವಾಚನವನ್ನು ಅಲ್ಲಿ ಮೊರೆಯುತ್ತಿದ್ದ ದುಂಬಿ ಕೇಳಿತು. ಝೇಂಕರಿಸುತ್ತಿದ್ದ ಜೇನುನೊಣ ಆಲಿಸಿತು. ಬಾವಲಿಗಳೂ ನಿಶ್ಶಬ್ದವಾಗಿ ಕೇಳಿದುವು. ಮಾಧವನ ಮನಸ್ಸು ಹಗುರವಾಯಿತು. ಒಡೆದ ಹೃದಯ ಒಂದುಗೂಡಿದಂತೆನಿಸಿತು. ಅಂಗಾಂಗಗಳಲ್ಲೆಲ್ಲ ಮಂದವಾಗಿದ್ದ ರಕ್ತ ಮತ್ತೆ ನೀರುನೀರಾಗಿ ಚುರುಕುಚುರುಕಾಗಿ ಕೈಕಾಲುಗಳ ನರನರಗಳಲ್ಲಿ ಹರಿದು ಧುಮುಧುಮಿಸಿತು.

ಆಗ ಇದ್ದಕಿದ್ದಂತೆ ಅಷ್ಟು ದಿನವೂ ಕೇಳದೆ ಇದ್ದ ಸಮುದ್ರಘೋಷ ಮತ್ತೆ ತೆರೆತೆರೆಯಾಗಿ ಬಂದು ಮಾಧವನ ಹೃದಯದ ದಡಕ್ಕೆ ಬಡಿಯಿತು. ಇಷ್ಟು ದಿನ ಈ ಕಡಲ ಕೂಗು ಅದು ಹೇಗೆ ತನಗೆ ಕೇಳಲಿಲ್ಲ ಎಂದು ಅವನಿಗೆ ಆಶ್ಚರ್ಯವಾಯಿತು. ಕ್ಷಣಕ್ಷಣಕ್ಕೂ ಅದರ ಬೊಬ್ಬೆ ಏರುತ್ತಿತ್ತು. ಅದರ ರಣಚಂಡೆಯ ಮೊಳಗು ತನ್ನ ಕೈ ಚಾಚಿ ಮಾಧವನನ್ನು ಬಾಚಿ ತಬ್ಬಿತು. ಅವನ ಉಳಿದೆಲ್ಲ ಭಾವನೆಗಳನ್ನೂ ಯೋಜನೆಗಳನ್ನೂ ಆ ಸಮುದ್ರದ ರುದ್ರ ಗೀತ ಮೆಟ್ಟಿ ತುಳಿಯಿತು. ಮಾರಿಯ ಡೋಲನಂತೆ ಅದು ತೀವ್ರವಾಗಿ ತೀವ್ರ ತರವಾಗಿ ಬಡಿಯಿತು – " ಬಾ, ಬಾ, ನನ್ನ ಹತ್ತಿರ ಬಾ " ಎಂದು. ಸಮುದ್ರ ತೀರಕ್ಕೆ ಹೋಗಲೇಬೇಕು. ಆ ರಾಕ್ಷಸನ ಕರೆಯನ್ನು ಮನ್ನಿಸದೆ ವಿಧಿಯಿಲ್ಲ.

ಆಗಲೇ ಐದುಗಂಟೆ ಆಗಿ ಹೋಗಿತ್ತು. ಮಾಧವ ಮನೆ ಬಿಟ್ಟು ಹೊರಟ. ಬಿಸಿಲ ಬೇಗೆ ಕುಗ್ಗಿತ್ತು. ಉರಿಗಾಳಿ ಅಡಗಿ ತಂಪುಗಾಳಿ ಪಡುವಲಿಂದ ಬೀಸ ತೊಡಗಿತ್ತು. ಸಮುದ್ರದ ಆರ್ಭಟ ಅವನನ್ನು ಸೆಳೆಯುತ್ತಿತ್ತು. ಅದೇ ಲಕ್ಷ್ಯ ವಾಗಿ ಅವನ ಕಾಲು ಮುಂದೋಡಿತು. ಆ ಘೋರ್ಗರೆತದ ಅಲೆಯಲ್ಲಿ ತೇಲುತ್ತ ಮುನ್ನಡೆದ. ತೋಡು ದಾಟಿದ. ಮಹಾಬಲೇಶ್ವರ ಬಂತು. ರಾಜ ಬೀದಿ ದಾಟಿತು. ಆಚೆ ಗದ್ದೆಗಳ ಮೂಲಕವೇ ದಾರಿ. ಉತ್ತಗದ್ದೆಗಳ ಬಿಳಿ ಮಣ್ಣು ಬೆಳ್ಳಿ ಪುಡಿಯಂತೆ ಥಳಥಳಿಸಿತು. ಒಂದೆರಡು ಬೋಳುಬೆಟ್ಟುಗಳು ದಾಟಿದುವು. ಸಮುದ್ರವೇನೋ ಇದೋ ಹತ್ತಿರದಲ್ಲೇ ಇದೆ. ತೆಂಗಿನ ಮರ ಗಳ ಸಾಲು ತೋಪು ಒತ್ತೊತ್ತಾಯಿತು. ಪ್ರತಿಯೊಂದು ತೆಂಗಿನ ಮರವೂ ತಲೆದೂಗಿತು, ಗರಿಗರಿ ಮರ್ಮರಿಸಿತು. ಕಡಲ ಸಮೀಪ ಹೊಳೆಯ ಕೋಡಿ

ಬಂತು. ಅದನ್ನು ದಾಟಿಯೇ ಹೋಗಬಹುದು. ಮುಂಡಿವರೆಗೆ ಕೂಡಾ ನೀರು ಹತ್ತುವುದಿಲ್ಲ. ಅದರಾಚೆ ಮೊಗವೀರರ ಮನೆ. ತೆಂಗಿನ ಮರಗಳ ದಟ್ಟವಾದ ಹಿತ್ತಲುಗಳ ನಡುವೆ ಮೀನುಗಾರರ ಹುಲ್ಲುಗುಡಿಸಲುಗಳು. ಭೋರೆಂಬ ಕಡಲ ಕೂಗು ಈಗ ತಾರಕಕ್ಕೆ ಏರಿದೆ. ಆದರೂ ಸಮುದ್ರವಿನ್ನೂ ಕಣ್ಣಿಗೆ ಕಾಣಿಸುವುದಿಲ್ಲ. ಅಲ್ಲಿ ನುಸೆಯ ಮುಂದೆ ಒಣಗು ಹಾಕಿದ ಮೀನಿನ ನಾತ ಮಾತ್ರ ಮೂಗು ಮುಚ್ಚಿಸುತ್ತದೆ. ಒಂದೆರಡು ಬೇಲಿಗಳನ್ನು ತೊಡಮೆಗಳ ಮೂಲಕ ದಾಟಿದರೆ ಒಂದು ಓಣಿ ಸಿಕ್ಕುತ್ತದೆ. ಆ ಓಣಿ ಮರಳ ದಿಣ್ಣೆಯಲ್ಲಿ ಕೊನೆಗೊಳ್ಳುತ್ತದೆ. ಅದರ ಕೊನೆಯಲ್ಲಿ ನಿಂತರೆ — ಅಬ್ಬಾ ಅದೇ ಆ ಸಮುದ್ರ, ಅರಬ್ಬಿ ಸಮುದ್ರ.

ಮಾಧವ ದಿಣ್ಣೆಯ ಮೇಲೆ ನಿಂತು ಸಮುದ್ರರಾಜನನ್ನು ನೋಡಿದ. ಗಾಳಿ ಭೋರೆಂದು ಬೀಸುತ್ತಿತ್ತು ತಲೆಯ ಕೂದಲು ಕೆದರಿ ಒಣಹುಲ್ಲಿನಂತಾಯಿತು. ಹಾಕಿದ್ದ ಜುಬ್ಬಾ ಪಟಪಟ ಎಂದಿತು. ಎಷ್ಟು ದೂರ ನೋಡಿದರೂ ಅಷ್ಟು ದೂರ ಆ ದಿಗಂತದವರೆಗೂ ನೀಲ ಜಲರಾಶಿ. ದಿಗಂತದ ಹತ್ತಿರ ನೀಲ ಜಲ ನಿಶ್ಚಲವಾಗಿ ನೀಲರೇಸಿಮೆಯ ಸುರುಳಿಯಂತೆ ಹಾಸಿತ್ತು. ಅಲ್ಲಿ ಒಂದೆರಡು ಹಾಯಿ ದೋಣಿಗಳು ಬಿಳಿ ಚುಕ್ಕೆಯಂತೆ ಸಾಗುತ್ತಿದ್ದುವು. ಅಲ್ಲಿಂದ ತೀರಕ್ಕೆ ಬಹಳ ಹತ್ತಿರದವರೆಗೂ, ತೀರದಿಂದ ಸುಮಾರು ಒಂದು ಫರ್ಲಾಂಗು ದೂರದ ತನಕವೂ ನೀಲ ಜಲ ನೀಲ ಪರ್ವತವಾಗಿ ಉಬ್ಬುತ್ತ ತಗ್ಗುತ್ತ ತೀರದ ಕಡೆಗೆ ಒಲೆಯುತ್ತಿತ್ತು. ಅಲ್ಲಿಂದೀಚೆ ಮಾತ್ರ ಬೆಟ್ಟದಂಥ ತೆರೆಗಳು ಎದ್ದು ಬಿದ್ದು ಒಡೆದು ಸಿಗಿದು ಭಯಂಕರವಾಗಿ ಅರಚಿ ನೊರೆಕಾರಿ ದಡವನ್ನು ಬಂದು ಬಂದು ಬಡಿದು ಭೋರ್ಗರೆಯುತ್ತಿದ್ದುವು. ದಡಕ್ಕೆ ಬಂದು ಝಲ್ಲೆಂದು ಬಡಿದು ನೊರೆನೊರೆಯಾಗಿ ದಡವನ್ನೂ ಮೀರಿ ಅಡಹಾಯ್ದು ಮರುಕ್ಷಣವೇ ಸುಯ್ಯೆಂದು ನೀರು ಹಿಂದೋಡುತ್ತಿತ್ತು. ಮತ್ತೆ ಮತ್ತೆ ಪುನಃ ಪುನಃ ಇದೇ ಆಟ. ಹಗಲಿರುಳೂ ಇದೇ ಆಟ.

ಕಿವಿ ಕಿವುಡಾಗಿಸುವ, ಆಡಿದ ಮಾತು ಬಾಯಿಯಿಂದ ಬಿದ್ದ ಕ್ಷಣವೇ ಗಾಳಿಯಲೆಯಲ್ಲಿ ಕರಗಿ ಹೋಗುವ ಆ ರೌದ್ರನಾದದಲ್ಲೂ ಕೂಡಾ ಮಾಧವನಿಗೆ ಒಂದು ಶಾಂತಿ ಕಂಡಿತು. ತಾಳಲಯಕ್ಕೆ ಅನುಸಾರವಾಗಿ ಗತಿವೈವಿಧ್ಯದೊಡನೆ ಸಾಗುವ ರುದ್ರಕಾವ್ಯದಂತೆ ಅದು ದುಃಖಕರವಾದುದನ್ನು ಹೇಳಿಯೂ

ಶಾಂತಿಯ ಪರಿಣಾಮವನ್ನು ಮೂಡುತ್ತಿತ್ತು. ಮಾಧವನಿಗೆ ಸಮುದ್ರದ ಆ ವಿಕಾರ ನರ್ತನದಲ್ಲೂ ಗಾಂಭೀರ್ಯ ಕಂಡಿತು. ಅದು ಹೆಣದ ಹುರುಳಿಲ್ಲದ ಗಾಂಭೀರ್ಯವಲ್ಲ. ಜೀವಂತ ಮಾನವನ ತೀವ್ರವೇದಿ ಹೃದಯದ ಕೊನೆಯಿಲ್ಲದ ನೋವಿನ, ಅನಂತ ಯಾತನೆಗೆ ಹಿನ್ನೆಲೆಯಾಗಿ ನಿಲ್ಲುವ ಅಪಾರ ಸಹಿಷ್ಣುತೆಯ ಗಾಂಭೀರ್ಯ ಅದು.

ಮಾಧವ ಮರಳ ದಿಣ್ಣೆಯನ್ನು ಇಳಿದು ತೀರದ ಬೆಳ್ಳಿಹಾಸಿನ ಮೇಲೆ ಕಾಲಿಟ್ಟ. ಆ ಬಿಳಿ ಧೂಳಿನಲ್ಲಿ ಅವನ ಕಾಲು ಮೂಡಿತು. ಅಲ್ಲಿಂದ ಮರಳ ಹಾಸಿಗೆ ಇಳಿಜಾರಾಗಿ ಸಮುದ್ರದ ಸೀಮಾರೇಖೆಯವರೆಗೂ ಹರಡಿತ್ತು. ಕಡಲಗೆರೆ ಹತ್ತಿರ ಹತ್ತಿರ ಬಂದಂತೆ ಒದ್ದೆ ಮರಳಲ್ಲಿ ಅವನ ಪಾದವಷ್ಟೂ ಮೂಡಿತು. ಇನ್ನೂ ಕೊಂಚ ದೂರ ನಡೆದಾಗ ಸಮುದ್ರದ ತೆರೆಯ ಕೊನೆಯುಸಿರು ಅವನ ಕಾಲುಗಳನ್ನು ಸೋಕಿತು. ಇನ್ನೂ ಮುಂದೆ. ಪರ್ವತಾಕಾರದ ತೆರೆ ಉರುಳಿ ಉರುಳಿ ಬಂದು ಅಲೆಅಲೆಯಾಗಿ ಮಾಧವನ ಕಾಲನ್ನು ಬಡಿದು ಹಿಂದೋಡಿತು. ತೆರೆ ಹಿಂದೋಡಿದಾಗ ಮಾಧವನು ನಿಂತ ಮರಳು ಕೊರೆದು ಹೋಗಿ ಅವನ ಕಾಲೂ ಹಿಮ್ಮೆಟ್ಟುವ ಅಲೆಯ ಜೊತೆಗೆ ಕಡಲೊಳಕ್ಕೆ ಕೊಂಚ ದೂರ ಸರಿಯಿತು. ಮತ್ತೆ ಅಲೆ. ಮತ್ತೆ ಮರಳ ಕೊರೆತ. ಮತ್ತೆ ಅದೇ ರೀತಿ ಕಾಲುಗಳ ಸರಿತ. ಅಲ್ಲಿನ ಆ ಮೆತ್ತನೆಯ ಒದ್ದೆ ಮರಳಲ್ಲಿ ಮಾಧವ ಅತ್ತಿಂದಿತ್ತ ಸಂಚರಿಸಿದ. ಪಡುವಲಲ್ಲಿ ಸೂರ್ಯ ಅದೇ ಮುಳುಗುತ್ತಿದ್ದ. ಗುಂಡಾದ ಕೆಂಪನೆಯ ಚೆಂಡು ಪಶ್ಚಿಮ ದಿಗಂತದ ಬೆಂಕಿಯ ಹೂವಿನಂತೆ ಕಂಡಿತು. ಮೋಡಗಳೆಲ್ಲ ನೆತ್ತರಲ್ಲಿ ಅದ್ದಿದ್ದಂತೆ ಕಂಡುವು. ದಿಗಂತದ ಹತ್ತಿರದಿಂದ ತೀರದವರೆಗೂ ನೀರು ಮುಳುಗುವ ಸೂರ್ಯನ ಕೊನೆಯ ಮಂದಹಾಸದಲ್ಲಿ ತೊಯ್ದು ಬೆಳಗಿತು. ಉಬ್ಬೇರುವ ಅಲೆಗಳು ಕಾಯಿಸಿದ ಬೆಳ್ಳಿಯ ರಸದಂತೆ ಮಿರುಗಿದುವು. ಅವುಗಳ ಮೇಲೆ ಬಂಗಾರದ ಲೇಪ ಬಳಿದ ಹಾಗೆ ಥಳಥಳಿಸಿದುವು.

ಅಲೆಅಲೆಗಳು ಬಂದು ಕದಕ್ಕದಿಸಿ ನೊರೆ ಕಾರಿದುವು. ತೀರದ ಹತ್ತಿರದಲ್ಲಿ ಅಲ್ಲಲ್ಲಿ ಚೆಲ್ಲಿದ್ದ ಬಂಡೆಗಳಿಗೆ ತೆರೆಗಳು ಬಂದು ಬಡಿದು ಆಳೆತ್ತರ ನೆಗೆದು ಚಿಮ್ಮಿ ನೊರೆ ಚಿಮುಕಿತು. ಗಾಳಿ ತಂಪು ತಂಪಾಗಿ ತಣ್ಣಗಾಗಿ ಬೀಸಿತು; ಉಪ್ಪುನೀರಿನ ಉನ್ಮತ್ತ ಆಹ್ಲಾದವನ್ನು ತಂದು ಮಾಧವನ ಶ್ವಾಸಕೋಶಗಳಿಗೆ

ತುಂಬಿತು. ಆ ಗಾಳಿಯ ಜೊತೆಗೇ ಹೊಸ ಚೇತನವೂ ಬಂದು ಮಾಧವನ ನರನರವೂ ಹಿಗ್ಗಿತು. ಬಾಳಿನ ಹಳೆಯ ಕಸವೆಲ್ಲ ಕಳೆದು ಹೊಸತರ ಸ್ವಸ್ತಿ ವಾಚನವಾಗುತ್ತಿರುವ ಹಾಗೆ ಮಾಧವನಿಗೆ ಅನ್ನಿಸಿತು.

ಕಡಲಗೆರೆಯ ಸಮೀಪದಲ್ಲೇ ಒಣ ಮರಳ ಹಾಸಿನ ಮೇಲೆ ಕುಳಿತು ಸಮುದ್ರದ ರುದ್ರತಾಂಡವವನ್ನೇ ನೋಡುತ್ತ ಮಾಧವ ತಲ್ಲೀನನಾದ. ಆ ಸಮುದ್ರದ ಮುಂದೆ ತಾನು ಎಷ್ಟು ಚಿಕ್ಕವನು ಎಂದು ಮಾಧವನಿಗೆ ಎನಿಸಿತು. ಎಷ್ಟು ಚಿಕ್ಕವನೇ ಆದರೂ ತನಗೂ ಅದಕ್ಕೂ ಸಾಮಾನ್ಯವಾದುದು ಏನೋ ಇದೆ ಎಂದೂ ಅವನಿಗೆ ತೋರಿತು. ತನ್ನ ಅಂತರಂಗವೂ ಆ ಸಮುದ್ರದಂತೆಯೇ ಸದಾ ಚಂಚಲ. ಪ್ರತಿ ಗಾಳಿಯ ಅಲೆಗೂ ಅದು ಹೇಗೆ ತರಂಗ ತರಂಗವಾಗಿ ಮಿಡುಕುವುದೋ ಅದೇ ರೀತಿ ಅವನ ಹೃದಯವೂ ಕೂಡಾ ಜೀವನದ ಸಣ್ಣಪುಟ್ಟ ಸಂಗತಿಗಳಿಂದಲೇ ಅಲ್ಲೋಲಕಲ್ಲೋಲವಾಗುವುದು. ಆದರೆ ಆ ಸಮುದ್ರ 'ಅಸ್ತವ್ಯಸ್ತವಾಗುವುದು ತೀರವನ್ನು, ನೆಲವನ್ನು ಸಂಧಿಸಿದಾಗ ಮಾತ್ರವೇ. ನೆಲಕ್ಕೆ ದೂರ ದೂರ ಹೋದ ಹಾಗೆ ಅದರ ಗಾಂಭೀರ್ಯ ಪ್ರಶಾಂತಿ ಹೆಚ್ಚುತ್ತದೆ. ಸಮುದ್ರ ಮಧ್ಯದಲ್ಲಿ ಯಾವಾಗಲೂ ಅಳೆಯಲಾರದ ಆಳ, ಅರಿಯಲಾರದ ಅಗಮ್ಯ ಗಾಂಭೀರ್ಯ. ಗಾಂಭೀರ್ಯದ, ಸ್ಥಿರತೆಯ ಅಂಥದೊಂದು ಕೇಂದ್ರ ತನ್ನ ಜೀವನದಲ್ಲೂ ಸ್ಥಾಪನೆಯಾಗಬೇಕೆಂದು ಮಾಧವನಿಗೆ ತೋರಿತು. ಆ ಕೇಂದ್ರದಲ್ಲಿ ನೆಲೆನಿಂತು ಆ ಮೇಲೆ ಸುತ್ತಲೂ ತನ್ನ ತರಂಗಗಳನ್ನು ಚಾಚಬೇಕು. ಆಕಾಶದ ಕೆಳಗೆ ನೆಲಕ್ಕೆ ಹತ್ತಿರವಾಗಿ ಮನುಷ್ಯನ ಹೃದಯ ಸದಾ ಹೀಗೆ ತನ್ನ ಭಾವಗಳನ್ನು ಬಿಚ್ಚಬೇಕು. ಇಲ್ಲದೆ ಎಲ್ಲವೂ ಬರೀ ಅಲೆಯೇ ಆದರೆ, ನೊರೆಯೇ ಆದರೆ, ಗಲಾಟೆಯೇ ಆದರೆ ಜೀವನ ನಿರರ್ಥಕವಾಗುವುದು.

ಮನುಷ್ಯ ಲೋಕದ ಜೀವನವೂ ಕೂಡಾ ಒಂದು ಮಹಾ ಸಮುದ್ರದಂತೆಯೇ ಅವನಿಗೆ ತೋರಿತು. ಶತ ಶತಮಾನಗಳ ಕಾಲ ಸಂದರೂ ಮಾನವ ಲೋಕದಲ್ಲಿ ಶಾಂತಿ ಎಂಬುದಿಲ್ಲ. ಅದು ಯಾವಾಗಲೂ ಚಂಚಲ. ಏನೋ ಭೀತಿ, ಏನೋ ನಿರಾಶೆ, ಎಂಥದೋ ವಿಪ್ಲವ, ಅರ್ಥವಿಲ್ಲದ ಗಲಾಟೆ; ಮಾನವ ಜೀವನದ ತರಂಗಮಾಲೆ ಆಕಾಶದತ್ತ ಬಡಿದದ್ದೂ ಬಡಿದದ್ದೇ. ಆದರೆ ಅದರ ಚಾಂಚಲ್ಯ ತೀರದು, ಶಾಂತಿ ಮೊಗದೋರದು. ಆದರೂ ಕೂಡಾ

ಈ ಸಮುದ್ರದಂತೆ ಅದರ ಕೇಂದ್ರದಲ್ಲೂ ಕೂಡಾ ಶಾಂತಿಯ ಒಂದು ಬಿಂದು ಇರಲೇಬೇಕಲ್ಲವೇ ? ಇಲ್ಲದೆ ಹೋದರೆ ಇಷ್ಟು ಸಾವಿರವರ್ಷಗಳ ಕಾಲ ಇಷ್ಟು ಯುದ್ಧಗಳನ್ನು ಮಾಡಿ, ಇಷ್ಟು ಅನ್ಯಾಯ ಮಾಡಿ ಕೂಡಾ ಮಾನವಲೋಕ ಸ್ಥಿರವಾಗಿ ನಿಲ್ಲುತ್ತಿತ್ತೆ ?

ಈ ಯೋಚನೆ ಬಂದಾಗ ಮಾಧವನಿಗೆ ಆ ಸಮುದ್ರ ಮಾರಿಯಂತೆ, ರಾಕ್ಷಸನಂತೆ ಕಾಣಲಿಲ್ಲ. ಅದರ ಮೊರೆತದಲ್ಲಿ ಈ ಜಗತ್ತಿನ ಅನಂತ ಯಾತನೆಯ ಶೋಕದ ಗೀತ ಪಡಿನುಡಿಯುವಂತೆ ತೋರಿತು. ಆ ಸಮುದ್ರದ ಘೋರಯಾತನೆಯ ಮುಂದೆ ತನ್ನ ವೈಯುಕ್ತಿಕ ದುಃಖ, ವಿರಹ, ನಿರಾಶೆ, ಕೇವಲ ಅತ್ಯಲ್ಪವಾಗಿ ಕಂಡುವು. ಜಗತ್ತಿನ ಆದಿಯಿಂದಲೂ ಈ ಸಮುದ್ರಕ್ಕೆ, ಇದೇ ದುರ್ದೈವ. ಅಯ್ಯೋ ಪಾಪ, ಇಂಥ ಈ ದೊಡ್ಡ ಸಮುದ್ರಕ್ಕೇ ಈ ಗತಿಯಾದರೆ ಒಬ್ಬ ಮನುಷ್ಯನ ಪಾಡೇನು ?

ಈ ಸಮುದ್ರಕ್ಕೂ ಉಬ್ಬರ ಇಳಿತವಿದೆ. ಉಬ್ಬುತ್ತದೆ, ಇಳಿಯುತ್ತದೆ. ಭರತ ಇಳಿತದ ಈ ಉಯ್ಯಾಲೆಯಾಟ ಪ್ರತಿದಿನವೂ ನಡೆಯುತ್ತದೆ. ಚಂದ್ರೋದಯವಾದರೆ ಸಾಕು, ಕಡಲ ನೀರು ತನ್ನ ಎದೆಯನ್ನು ಉಬ್ಬಿಸುತ್ತದೆ· ಚಂದ್ರಲೋಕವನ್ನೇ ಮುಟ್ಟುವ ಆಸೆಯೋ ಏನೋ ಅದಕ್ಕೆ. ಆ ಆಶೆ ತನ್ನ ಅಂತರಂಗದಲ್ಲಿ ಒತ್ತಿದಾಗ ಅದು ಏರುತ್ತದೆ. ಆ ಆಶೆಯ ತೀವ್ರತೆ ತಗ್ಗಿದಾಗ ಮತ್ತೆ ಇಳಿಯುತ್ತದೆ. ಇಳಿದೆನೆಂದು ಉಬ್ಬುವುದನ್ನು ನಿಲ್ಲಿಸುವುದಿಲ್ಲವಲ್ಲ ಕಡಲು ! ಈ ವಿಚಾರ ಮಾಧವನ ಮನಸ್ಸಿನಲ್ಲಿ ವಿಚಾರ ತರಂಗವನ್ನೇ ಎಬ್ಬಿಸಿತು.

ಬಾಲ್ಯದಿಂಧಲೂ ತಾನು ತನ್ನ ಮನಸ್ಸಿನಲ್ಲಿ ಕಟ್ಟುತ್ತಿದ್ದ ಹಲವು ಆದರ್ಶಗಳ ಗೋಪುರಗಳು ಒಡೆದೊಡೆದು ಬಿದ್ದರೂ ಅವು ನಿರರ್ಥಕವಲ್ಲ ಎಂದು ತೋರಿತು. ಅಂಥ ಆದರ್ಶದ ಆಶೆ ಇರುವುದೇ ತಾನು ಮನುಷ್ಯನಾಗಿರುವುದರ ಲಕ್ಷಣ. ಅದು ಇಲ್ಲದವನು ಪಶುವೇ ಅಲ್ಲವೆ ? ಆದರ್ಶದೆಡೆಗೆ ಎದೆ ಚಾಚಿ ಎಷ್ಟು ಎತ್ತರ ಏರುವುದು ಸಾಧ್ಯವೋ ಅಷ್ಟು ಎತ್ತರ ಏರಬೇಕು. ಏರಿದ ಎತ್ತರದಲ್ಲೇ ನಿಲ್ಲುವುದು ಸಾಧ್ಯವಾಗಿದ್ದರೆ ಮನುಷ್ಯನ ಬಾಳು ಎಷ್ಟೋ ಉನ್ನತವಾಗುತ್ತಿತ್ತು. ಮನುಷ್ಯ ಲೋಕದಲ್ಲಿ ಎಂಥ ದಿವ್ಯಕಾಂತಿ ಬೆಳಗುತ್ತಿತ್ತು! ಆದರೆ ಏರಿದ ರಭಸದಲ್ಲೇ ಮನುಷ್ಯ ಕೆಳಕ್ಕೂ ಇಳಿಯುತ್ತಾನೆ. ಇಳಿದೆನೆಂದು

ಅತ್ತು ಏನು ಉಪಯೋಗ ? ಆದರೆ ಎಷ್ಟು ಸಲ ಕೆಳಕ್ಕಿಳಿದರೂ ಮತ್ತೆ ಮತ್ತೆ ಏರಿಯೇನೆಂಬ ಉತ್ಸಾಹವನ್ನು ಮಾತ್ರ ಮನುಷ್ಯನ ಮನಸ್ಸು ಎಂದೂ ಕಳೆದುಕೊಳ್ಳಬಾರದು. ಆ ಉತ್ಸಾಹ ನಿರಂತರವಾಗಿರುವುದೇ ಮನುಷ್ಯನ ಹಿರಿಮೆ; ಎಷ್ಟು ಸಲ ಬಿದ್ದರೆ ಅಷ್ಟು ಸಲ ಮೇಲಕ್ಕೆದ್ದು ಏರುವುದೇ ಮನುಷ್ಯತ್ವದ ವಿಶೇಷ. ಏರಿದ ಎತ್ತರದಲ್ಲೇ ನಿಲ್ಲಬಲ್ಲವನು ದೇವನಾಗುತ್ತಾನೆ. ಇಳಿದ ಆಳದಲ್ಲೇ ಕೊಳೆಯುವವನು ಪಶುವಾಗುತ್ತಾನೆ.

ಹಲವು ದಿನಗಳಿಂದ ತನ್ನ ಮನಸ್ಸನ್ನು ಮುಸುಕಿದ್ದ ಮಂಜು ಕರಗಿದಂತಾಯಿತು ಮಾಧವನಿಗೆ. ಕತ್ತಲು ತುಂಬಿದ್ದ ಅಸ್ಪಷ್ಟವಾದ ದಾರಿಯಲ್ಲಿ ಒಂದು ಪಂಜು ಕೈಗೆ ಸಿಕ್ಕಿದಂತಾಯಿತು. ಇನ್ನು ಮುಂದೆ ದಾರಿ ಸಾಗಬಹುದು. ಎಡವಿ ಬೀಳಬಹುದು; ಮುಗ್ಗರಿಸಬಹುದು. ನೆಲಸಮವಾಗಿ ಒರಗಲು ಬಹುದು. ಆದರೆ ಮತ್ತೆ ಎದ್ದು ಸಾವರಿಸಿಕೊಂಡು ಮುಂದೆ ಅಡಿಯಿಡಬಹುದು. ಅಷ್ಟಾದರೆ ಸಾಕು.

ತನಗೆ ಇಷ್ಟು ದೊಡ್ಡ ಪಾಠ ಕಲಿಸಿದ ಸಮುದ್ರಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ ಅಲ್ಲಿಂದ ಎದ್ದ. ಆಗಲೇ ಕತ್ತಲಾಗಿತ್ತು. ಈಗ ಕಡಲ ನೀರು ಕಾಳೋರಗದ ವಿಷದಂತೆ ಕುದಿಯುತ್ತಿತ್ತು. ಭೋ – ಭೋ – ಭೋ – ಎನ್ನುವ, ಬೊಬ್ಬಿರಿಯುವ, ಆರ್ಭಟಿಸುವ, ಹುಯ್ಯಲಿಡುವ ಆ ಸಮುದ್ರ ಈಗ ಮತ್ತೆ ಮಹಾಪಿಶಾಚದಂತೆಯೇ ಕಾಣುತ್ತಿತ್ತು. ಆದರೆ ಆಗ ಅದರ ಅಂತರಂಗವನ್ನು ಬಲ್ಲ ಮಾಧವನಿಗೆ ಅದರಲ್ಲಿ ಜುಗುಪ್ಸೆ ಹುಟ್ಟಲಿಲ್ಲ, ಅನುಕಂಪ ಹುಟ್ಟಿತು. ಅಲ್ಲಿಂದ ವೇಗವೇಗವಾಗಿ ನಡೆಯುತ್ತ ಮನೆಯ ಕಡೆ ಹೊರಟ. ದಾರಿ ಸಾಗಿದ್ದು ಅವನಿಗೆ ತಿಳಿಯಲೇ ಇಲ್ಲ. ಮನಸ್ಸು ತಾನು ಕಂಡು ಹಿಡಿದ ಆ ಹೊಸ ಸಿದ್ಧಾಂತದಲ್ಲೇ ಮಗ್ನವಾಗಿತ್ತು.

ಖಾರಿಯನ್ನು ದಾಟಿ ಚವಟಿಹರಳಿನ ಹತ್ತಿರ ಬರುವಾಗ ದಾರಿಯ ಪಕ್ಕದಲ್ಲೇ ಒಂದು ಮನೆಯಲ್ಲಿ ದೀಪ ಮಿನುಗುತ್ತಿತ್ತು. ಆ ಕಡೆ ನೋಡಿದಾಗ ಮನೆ ಹೊರಗಿನ ಬಚ್ಚಲ ಮನೆಯಲ್ಲಿ ಒಬ್ಬ ಹೆಂಗಸು ಮೈಮೇಲೆ ಬಿಸಿ ನೀರನ್ನು ಹೊಯ್ದುಕೊಂಡು ಸ್ನಾನಮಾಡುತ್ತಿದ್ದಳು. ಅವಳ ಎದೆ ತೆರೆದಿತ್ತು. ಒಂದು ಕ್ಷಣ ಮಾಧವನ ದೃಷ್ಟಿ ಅಲ್ಲೇ ನೆಟ್ಟಿತು. ಇನ್ನೂ ಕೊಂಚ ನಿಂತು ನೋಡು ಎಂದು ಮನಸ್ಸು ಪ್ರೇರಿಸಿತು. ' ಥೂ, ಕೂಡದು ' ಎಂದು ಮಾಧವ ಮುಂದು

ವರಿದ. ತನ್ನ ಮನಸ್ಸಿನ ಆ ವಿಕಾರವನ್ನು ಕಂಡು ಅವನಿಗೆ ಆಶ್ಚರ್ಯವಾಗ ಲಿಲ್ಲ. ಮನಸ್ಸಿನ ಪ್ರಭಾವವೇ ಹಾಗೆ ಎಂದು ಅವನಿಗೆ ಆಗಲೇ ತಿಳಿದಿತ್ತು. ಅದರಿಂದ ತನ್ನಲ್ಲಿ ತಾನು ಜುಗುಪ್ಸೆ ಪಟ್ಟುಕೊಳ್ಳುವುದರಲ್ಲಾಗಲೀ, ಆತ್ಮ ನಿಂದೆಯ ಕೊಳ್ಳದಲ್ಲಿ ಬೀಳುವುದರಲ್ಲಾಗಲೀ ಏನೂ ಅರ್ಥವಿಲ್ಲ ಎಂಬುದನ್ನ ಅನುಭವ ಅವನಿಗೆ ಕಲಿಸಿತ್ತು. ಆದರೆ ಮನಸ್ಸಿನ ಈ ಪ್ರವೃತ್ತಿಗಳನ್ನು ಪಳಗಿಸಿ ಹಿಡಿತದಲ್ಲಿಟ್ಟುಕೊಳ್ಳತಕ್ಕದ್ದೇ ತಾನು ಸಾಧಿಸಬೇಕಾದ ಕರ್ತವ್ಯ ಎಂದು ಅವ ನಿಗೆ ತಿಳಿದಿತ್ತು.

ಇನ್ನೇನು ಮನೆ ಹತ್ತಿರವೇ ಇದೆ. ಅಷ್ಟು ಹೊತ್ತು ಜೋರಾಗಿ ನಡೆ ದದ್ದರಿಂದ ಕಾಲು ಕೊಂಚ ಸೋತಿತ್ತು. ದೇವಸ್ಥಾನದ ಈಚೆಗಿನ ಆ ದಿಣ್ಣೆಯ ಮೇಲೆ ಕುಳಿತುಕೊಂಡ. ಮನಸ್ಸು ಹಗುರವಾಗಿದ್ದುದರಿಂದ ಬೀಸುವ ಗಾಳಿ ಬಹಳ ಆಹ್ಲಾದಕರವಾಯಿತು. ಆಕಾಶದ ಕಡೆ ಕಣ್ಣೆತ್ತಿ ನೋಡಿದ. ಎಂದಿ ನಂತೆಯೇ ಅದೇ ಆನಂದದಿಂದಲೋ ಕರ್ತವ್ಯನಿಷ್ಠೆಯಿಂದಲೋ ನಕ್ಷತ್ರಗಳು ಮಿನುಗುತ್ತಿದ್ದುವು. ಬಿಳಿ ಮೋಡ ಹಿಂಜಿದ ಹತ್ತಿಯಂತೆ ತೇಲುತ್ತಿತ್ತು. ಮರ ಗಿಡಗಳೆಲ್ಲ ಕತ್ತಲಲ್ಲಿ ಮುಳುಗಿಹೋಗಿದ್ದುವು.

ನೀಲಾ ಈಗ ತಾನು ಒಬ್ಬ ತಾರೆಯಾಗಿ ಆಕಾಶದಲ್ಲಿ ನಿಂತ ಹಾಗೆ ಅವ ನಿಗೆ ಕಂಡಿತು. ಹೌದು, ಅವಳೂ ಒಂದು ನಕ್ಷತ್ರವೇ. ಅವಳು ಅಷ್ಟೇ ದೂರ, ಅಷ್ಟೇ ಅಲಭ್ಯ. ಆದರೆ ಅವನ ಮನಸ್ಸಿನಲ್ಲಿ ಅವಳು ತನ್ನ ಕಾಂತಿ ಯನ್ನು ಬಿಟ್ಟು ಹೋಗಿದ್ದಾಳೆ. ಅವಳ ಆ ಮುಗ್ಧ ವಿಶ್ವಾಸದ ರೀತಿ ಅವನ ಕಾಮಪ್ರವೃತ್ತಿಯ ದೇಹವಿಕಾರಕ್ಕೆ ಮನೋಮಯದ ಆಕಾರವನ್ನು ಕೊಟ್ಟು ಹೋಗಿದ್ದಳು. ತನ್ನನ್ನು ಮರೆತು ಇನ್ನೊಬ್ಬರನ್ನು ಅರಿಯುವುದೇ ಲಕ್ಷಣವಾಗಿ ಉಳ್ಳ ಪ್ರೀತಿಯ ಪ್ರಥಮ ಪಾಠವನ್ನು ಮಾಧವನಿಗೆ ಅವಳು ಕಲಿಸಿದಳು. ಆತ್ಮಾನುಕಂಪದ ಹೇಯ ದುಃಖಕ್ಕಿಂತ ಪರದುಃಖಸಹಾನುಭೂತಿಯೇ ಸುಂದರ ವಾದುದು ಎಂಬುದೂ ಅವನಿಗೆ ಈಗ ತಿಳಿಯತೊಡಗಿದೆ. ನೀಲಾಳ ಯೋಚನೆ ಬಂದಾಗ ಮಾಧವನಿಗೆ ಈಗ ತಾನು ಏಕಾಂಗಿಯಾದೆ ಎನ್ನುವ ಭಾವದ ಜೊತೆಗೇ ಅದನ್ನು ಮೀರಿಸಿ ನೀಲಾಳ ಅಸಹಾಯತೆಯ ಅರಿವು ಬಂದು ಅವನು ನಿಟ್ಟುಸಿರು ಬಿಟ್ಟ. ಅವಳು ಈಗ ಅವನ ಉದಾತ್ತ ಭಾವನೆಯ ಪ್ರತೀಕವಾಗಿ ಅವನ ಆದರ್ಶಗಳ ಸಂಕೇತವಾಗಿ ಅವನ ಹೃದಯದಲ್ಲಿ ನಿಂತಳು.

ಮಾಧವನಿಗೆ ಈಗ ತಾನು ಐದಾರು ತಿಂಗಳುಗಳ ಹಿಂದೆ ಅದೇ ಸ್ಥಳದಲ್ಲಿ ಕುಳಿತಾಗ ಕಂಡಿದ್ದ ಆ ಆಕಾಶ ದೀಪದ ಜ್ಞಾಪಕ ಬಂತು. ಅದು ಈಗ ಕಾಣಿಸುವುದಿಲ್ಲ. ಬಹುಶಃ ಮತ್ತೆ ದೀಪಾವಳಿ ಹತ್ತಿರ ಬಂದಾಗ ಶಂಕರಭಟ್ಟರ ಮಕ್ಕಳು ಅದೇ ರೀತಿ ಆಕಾಶ ದೀಪವನ್ನು ಮತ್ತೆ ಏರಿಸಬಹುದು. ಅಲ್ಲಿಯ ತನಕ ಈ ಕತ್ತಲನ್ನು ಭೇದಿಸುವ ಬೆಳಕು ಇನ್ನಾವುದೂ ಇಲ್ಲ. ಆದರೆ ಆ ದೀಪದ ಜ್ಞಾಪಕ ಮಾತ್ರ ಈಗಲೂ ನಿಂತಿದೆ

ಹೌದು, ಮನಸ್ಸಿನ ಆಕಾಶ ದೀಪವನ್ನು ಹಾಗೆ ಕತ್ತಲಲ್ಲಿ ಏರಿಸಬೇಕು. ಎಷ್ಟು ಸಾಧ್ಯವೋ ಅಷ್ಟು ಕತ್ತಲನ್ನು ಈ ಜಗತ್ತಿನಿಂದ ಓಡಿಸುತ್ತಲೇ ಇರಬೇಕು. ದೀಪ ಆರಿತೆಂದು ನಿರಾಶೆ ಪಡಬಾರದು. ಮತ್ತೆ ದೀಪದ ಗೂಡು ಕಟ್ಟಬೇಕು. ಎಣ್ಣೆ, ಬತ್ತಿ, ಹಣತೆ ತರಬೇಕು. ಮತ್ತೆ ದೀಪವನ್ನು ಆಕಾಶದಲ್ಲಿ ತೇಲಿ ಬಿಡಬೇಕು.

ಸುತ್ತಮುತ್ತಲೂ ಇರುವ ಹತ್ತು ಜನವನ್ನು ಮರೆತು, ಸುತ್ತಮುತ್ತಲೂ ಇರುವ ಮರಗಿಡ ಹೊಳೆ ಕಡಲನ್ನು, ಆಕಾಶ ನಕ್ಷತ್ರ ಚಂದ್ರ ಸೂರ್ಯರನ್ನು ಮರೆತು ಬಾಳುವ ಬಾಳು ಬಾಳಲ್ಲ. ಈ ಎಲ್ಲದರ ಅಂಶ ತಾನು ಎಂಬ ಅರಿವು ಸದಾ ಜಾಗ್ರುತವಾದ ಹೃದಯವೇ ಮನುಷ್ಯ ಹೃದಯ. ಅಂಥ ಹೃದಯ ಆ ಅರಿವಿನಿಂದ ಮಾಡುವ ಪ್ರತಿಯೊಂದು ಕೆಲಸವೂ ಒಂದೊಂದು ಆಕಾಶ ದೀಪ.

ತಾನು ಈ ಆಕಾಶ ದೀಪವನ್ನು ಹಿಡಿದು ಈ ಜಗತ್ತಿನ ಕತ್ತಲಲ್ಲಿ ಮೂಲೆ ಮೂಲೆಗೂ ಸುತ್ತಿ ಎಲ್ಲ ಕಡೆಗೂ ಬೆಳಕಿನ ಸಂದೇಶ ಬೀರಬೇಕು. ಅದೇ ಆದರ್ಶ, ಅದಕ್ಕಾಗಿ ಹೋರಾಡಬೇಕು. ಸೋಲು ಬರುವುದು ಸಹಜ. ಆದರೆ ತಾನು ಸೋಲಬಾರದು. — ಖಂಡಿತವಾಗಿ ಸೋಲಬಾರದು.

ಈ ನಿರ್ಧಾರದಿಂದ ಮತ್ತೆ ಮಾಧವ ತನ್ನ ಏಕಾಂಗಿತನವನ್ನು ಮರೆತ. ಕತ್ತಲಿನೊಡನೆ ಯುದ್ಧ ಹೂಡಿದ ಮುಂಚೂಣಿಯಲ್ಲಿ ಆಕಾಶ ದೀಪವನು ಹಿಡಿದು ಸಾಗುತ್ತಿರುವ ತಾನೂ ಒಬ್ಬ ಭವಿಷ್ಯದ ಯೋಧ ಎಂಬ ಹುಮ್ಮಸ್ಸಿನಿಂದ, ಕವಾತಿನ ಗತ್ತಿನಲ್ಲಿ ಹೆಜ್ಜೆಯಿಡುತ್ತ ಮನೆಯಕಡೆ ಕಾಲು ಬೀಸಿದ.



ನಮ.

## ೧ ಹಂಸಗೀತ

(ಕಾದಂಬರಿ)

ಲೇಖಕ: ತ. ರಾ. ಸು.

ಬೆಲೆ ರೂ. ೨—೧೨—೦

## ೨ ಆಕಾಶ ದೀಪ

(ಕಾದಂಬರಿ)

ಲೇಖಕ: ಮೋ. ಗೋ. ಅಡಿಗ

ಬೆಲೆ ರೂ. ೧—೧೫—೦

## ೩ ಗೆದ್ದವರು ಯಾರು?

(ಕಾದಂಬರಿ)

ಲೇಖಕ: ದೇವುಡು ನರಸಿಂಹಶಾಸ್ತ್ರಿ

ಬೆಲೆ ರೂ. ೧—೧೪—೦

ಅಚ್ಚಿನಲ್ಲಿ:

ಬಸವರಾಜ ಕಟ್ಟೀಮನಿ ಯವರ

**ರೂಪಜೀವಿಗಳ ಬೀದಿ**

ತ. ರಾ. ಸು. ರವರ

**ಮುಸಣದ ಹೂವು**

ಚದುರಂಗರ

**ಕನಕಾಂಬರ**

**ವರ್ಷಕ್ಕೆ ೬ ಕಾದಂಬರಿಗಳು. ವಾರ್ಷಿಕ ಚಂದಾ ೯ ರೂಪಾಯಿ.**

**: ಇಂದೇ ಚಂದಾದಾರರಾಗಿ :**

ವಿವರಗಳಿಗೆ: **ನವ್ಯ ಸಾಹಿತ್ಯ ಮಾಲೆ** : ವಾಣೀವಿಲಾಸ ರಸ್ತೆ : ಮೈಸೂರ

ಆಯುರ್ವೇದ ವಿದ್ವಾನ್
# ಬಿ. ವಿ. ಪಂಡಿತರ



# ಜೀವನಿ



:: ಸ್ತ್ರೀಯರ ಗರ್ಭಾಶಯ ರೋಗ ನಿವಾರಿಣಿ. ::

# ನಂಜನಗೂಡು ಟೂತ್ ಪೌಡರ್

ಸಮಗ್ರ ಭಾರತದಲ್ಲೂ, ಸಮುದ್ರದಾಚೆಯೂ ಪ್ರಖ್ಯಾತಿ ಹೊಂದಿದ ಸುಲಭ ಬೆಲೆಯ ಉತ್ಕೃಷ್ಟವಾದ ಗುಣವುಳ್ಳ ಹಲ್ಲುಪುಡಿ.

## ಸದ್ವೈದ್ಯ ಶಾಲಾ, ನಂಜನಗೂಡು